ಪ್ರಬೋಧ ಪುಸ್ತಕಮಾಲೆ ೧೨ ನೆಯ ಪೂ.

# ಕಾರಣಿಕ ಕುಮಾರಯೋಗಿ

ಗ್ರಂಥಕರ್ತರು :

**ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ**

**ಮಹಾಸ್ವಾಮಿಗಳವರು**

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ,

ಗೂಳೂರು

ಪ್ರಕಾಶಕರು :

**ಪ್ರಬೋಧ ಪುಸ್ತಕಮಾಲೆ**

ನಂ ೫೫. ೩ ನೇ ರಸ್ತೆ, ಚಾಮರಾಜಪೇಟೆ,

ಆಶ್ರಯದಾತರು .

**ಶ್ರೀ ಶ್ರೀ. ಷ. ಬ್ರಂ. ಸದಾಶಿವ ಶಿವಾಚಾರ್ಯ**

**ಮಹಾಸ್ವಾಮಿಗಳವರು**

ಶಿವಾನುಭವದಾಸೋಹ ಸಪ್ತಾಹ ಸಮಿತಿ

ಕಡೂರು ತಾಲ್ಲೂಕು, ಗಿರಿಯಾಪುರ



**ಬೆಲೆ: ರೂ. ೨ ೦ ೦**

ಮುದ್ರಣಕಾರರು :

ವಿ. ರಾಮಯ್ಯ

“ಶ್ರೀ ಸತ್ಯನಾರಾಯಣ ಪ್ರೆಸ್,”

೬೩, ಗೌಡನಪೇಟೆ, : : ಬೆಂಗಳೂರು ೨

# ನಮ್ಮ ನುಡಿ

ಇಂದಿನ ಕಾಲದ ವಾತಾವರಣ ವಿಲಕ್ಷಣವಾಗಿದೆ ಈ ವಾತಾವರಣದ ಸೆಳೆತಕ್ಕೆ ಸಿಕ್ಕ ಮಾನವನ ಹೃದಯವು ಮಾರ್ಪುಗೊಂಡಿದೆ. ಈ ಯಂತ್ರಯುಗದಲ್ಲಿ ಮಾನವನ ಮನಸ್ಸು ಅತಂತ್ರಕ್ಕೊಳಗಾಗಿದೆ. ಪರಸ್ಪರ ಅನುರಾಗವಿಲ್ಲದೆ ಅಸಹನೆ ಹೆಚ್ಚಿಹೋಗಿದೆ. ಸತ್ಯ ಶಾಂತಿ ಬುದ್ಧಿಗಳು ಗಾಳಿಗೋಪುರವಾಗಿವೆ. ಭೌತಿಕ ಸುಖಕ್ಕಾಗಿ ಹಂಬಲ ಮಿತಿಮೀರುತ್ತಿದೆ. ವಿಜ್ಞಾನ ಸಹಾಯದಿಂದ ಪಂಚಭೂತಗಳ ಮೇಲೆ ತನ್ನ ಅಧಿಕಾರವನ್ನು ತೋರಿ ಅವನ್ನು ತನ್ನ ಭೋಗಸಾಮಗ್ರಿಯನ್ನಾಗಿ ಮಾಡಿಕೊಂಡ ನವ ನಾಗರಿಕನ ಕಣ್ಣು ಮುಚ್ಚಿಹೋಗಿದೆ. ಬುದ್ಧಿ ಭ್ರಮಿಸಿದೆ. ದೇವರು ಇನ್ನೆಲ್ಲಿರುವನೆಂದು ಪ್ರಶ್ನಿಸುತ್ತಾನೆ. ರಾಜ್ಯದಾಹದಿಂದ ರಾಕ್ಷಸರಂತೆ ಯುದ್ಧಗಳನಾರಂಭಿಸುತ್ತ ಬಾಂಬು ವಿಷವಾಯು ಪ್ರಯೋಗಗಳಿಂದ ಜಗದ ಜೀವರ ಮಾರಣಯಾಗ ಸಾಗಿಹೋಗಿದೆ, ಸಾಗುತಿದೆ, ಸಾಗುವಂತಿದೆ. ಮಹಾ ಪ್ರಳಯವೆ ಸನ್ನಿಹಿತವಾಗಿ ನಿಂತಂತೆ ತೋರುತಿದೆ.

ಇಂತಹ ಸಂದರ್ಭದಲ್ಲಿ ಸತ್ಯನಿಷ್ಠರ, ಶಾಂತಿ ದೂತರ, ಸಮತಾ ವಾದಿಗಳ, ಸಮಾಜ ಪ್ರೇಮಿಗಳ ಸಚ್ಚರಿತ್ರೆಗಳು ಅತ್ಯಾವಶ್ಯಕ. ಅವುಗಳ ಓದಿನಿಂದ ಓದುವವರು ಮೇಲಾಗಿ ಜಗತ್ತು ಸತ್ಯಪಥ ಹೊರಳಬಹುದಲ್ಲವ ?

ಸಮಾಜ ಪ್ರೇಮಿಗಳಾದ ಕುಮಾರ ಸ್ವಾಮಿಗಳವರ ಚರಿತ್ರೆ ಪ್ರಸ್ತುತ ಪ್ರಸಿದ್ಧ ಪುರುಷರ ಚರಿತ್ರೆಗಳಲ್ಲೊಂದಾಗಿದೆ; ಪವಿತ್ರವಾಗಿದೆ. ಆದರೂ ಅವರ ಸಮಗ್ರ ಜೀವನ ಚರಿತ್ರೆಯನ್ನು ನಾವೀಗ ಬರೆಯ ಹೊರಟಿಲ್ಲ. ಸಂಕ್ಷಿಪ್ತ ಜೀವನವನ್ನು ಮಾತ್ರ ಚಿತ್ರಿಸಲಾಗಿದೆ. ಏಕೆಂದರೆ ನಾವು ಕಂಡದ್ದು ಅವರ ಕೊನೆಯ ಜೀವನವನ್ನು. ಕೇಳಿದ್ದು ಅಖಂಡ ಜೀವನವನ್ನಾದರು ಅಸ್ಪಷ್ಟವಾಗಿ. ಕಂಡು ಕೇಳಿದಷ್ಟನ್ನು ಮಾತ್ರ ಉಲ್ಲೇಖಿಸಲು ಉದ್ಯುಕ್ತ

ರಾಗಿದ್ದೇವೆ. ಸಮಗ್ರ ಚರಿತ್ರೆಯ ಕೆಲಸವನ್ನು ಕುಮಾರಯೋಗಿಗಳವರ ಸಂಪೂರ್ಣ ಜೀವನವನ್ನು ಕಂಡು ಕೇಳಿದವರಿಗೆ ಕೈಬಿಟ್ಟಿದ್ದೇವೆ.

ನಮ್ಮ ಈ ಬಯಕೆ ಹತ್ತು ಹದಿನೈದು ವರುಷಗಳದು. ಈ ವಿಷಯ ದಲ್ಲಿ ಆಗಾಗ್ಗೆ ನವಿಲುಗುಂದದ ಶ್ರೀ. ಮ. ನಿ. ಬಸವಲಿಂಗ ಸ್ವಾಮಿಗಳವರಲ್ಲಿ ಪ್ರಸ್ತಾಪಿಸುತ್ತಿದ್ದೆವು. ನಾವು ಅವರಲ್ಲಿ ನಿರೀಕ್ಷಿಸಿದ್ದಂತೆ ಅವರು ನಮ್ಮಲ್ಲಿ ನಿರೀಕ್ಷಿಸಿದ್ದರು. ಒಂದೆರಡು ಸಲ ಬರೆಯಲು ಹೇಳಿಯೂ ಇದ್ದರು. ಆದರೆ ಅವರ ನಿರೀಕ್ಷಣೆಯನ್ನು ಪೂರೈಸಲು ನಾವು ಮುಂದು ಬರಲಿಲ್ಲ. ಕಾರಣ ಸಮಗ್ರಜೀವನ ಚಿತ್ರಣದಲ್ಲಿ ಅಸಮರ್ಥರೆಂಬುದು ನಮಗೆ ಗೊತ್ತಿತ್ತು. ಇಂದಿಗೂ ಅಷ್ಟೆ. ಆದರೆ ಶ್ರೀ. ಮ. ಲಿಂ. ಚಕ್ರವರ್ತಿಗಳಾದ ಶ್ರೀ ಸದಾಶಿವ ಶಿವಾಚಾರ್ಯರವರ ಸತ್ಯಸಂಕಲ್ಪ ಈ ಕೆಲಸಕ್ಕೆ ಕೈಹಾಕಿಸಿತು. ಪೂಜ್ಯ ಕುಮಾರ ಸ್ವಾಮಿಗಳವರ ನೆನಪಿಗಾಗಿ ಅವರು ಚಿಕ್ಕಮಗಳೂರು ಜಿಲ್ಲಾ ಗಿರಿಯಾ ಪುರದಲ್ಲಿ ನೆರಪಿದ 'ಶಿವಾನುಭವ ಸಪ್ತಾಹ' ಸ್ಮಾರಕಕ್ಕಾಗಿ ಬರೆಯಬೇಕೆಂಬ ಅವರ ಪೃಥನಿಷ್ಟ್ರಯನ್ನು ಮೀರಲು ನಮ್ಮಿಂದಾಗಲಿಲ್ಲ.

ಈ ಯುಗಪುರುಷನನ್ನು ಈ ಮಹಾ ಕಾರಣಿಕನನ್ನು ವರ್ಣಿಸುವುದು ಚಿತ್ರಿಸುವುದು ಸಾಮಾನ್ಯ ಕೆಲಸವಲ್ಲ. ಅದರಲ್ಲಿಯು ಜ್ಞಾನಭಾಗದ ವಿಷಯ ತುಂಬಾ ಹೊಣೆಗಾರಿಕೆಯದು, ವಿಚಕ್ಷಣತೆಯದು. ಸ್ವಾಮಿಗಳವರ ಸರ್ವಾಂಗ ಸುಂದರವಾದ ಸಂಪೂರ್ಣ ಚಿತ್ರವನ್ನು ಬರೆಯಬಲ್ಲ ಕುಶಲಮತಿ ಗಳಿರುವಾಗ ನಾವು ಕೈಹಾಕಿದ್ದು ಸಾಹಸವೆ! ಅದರಲ್ಲಿಯು ಇಂದಿನ ನವನಾಗರಿಕತೆಯ ಕಾಲದಲ್ಲಿ ಇಂತಹ ಚರಿತ್ರೆಗಳನ್ನು ಬರೆವುದು ಸಾರ್ಥಕ ವಲ್ಲದ ಸಾಹಸ. ಇಂದಿನ ಕಾಲ ಬದಲಿಸಿದೆ. ರೌದ್ರರಸ – ರಾಗರಸಗಳುಳ್ಳ ಕತೆ ಚರಿತೆಗಳನ್ನು ಆರಿಸುವವರೆ ಬಹಳ. ಋಷಿ ಜೀವನ ಚರಿತೆಗಳನ್ನು ಓದುವವರು ತೀರ ವಿರಳ. ಆಧುನಿಕರಿಗೆ ಬೇಜಾರ, ಬೇವು. ವಿಚಾರಮಾಡಿ ನೋಡಿದಲ್ಲಿ ಕಹಿಯೆ ಕಾಹಿಲೆಯನ್ನು ಕಳೆಯಬಲ್ಲುದು. ಋಷಿ ಜೀವನವು ಕಹಿಯಾಗಿ ಕಂಡರು ರಹಸ್ಯಪೂರ್ಣವಾದುದು, ಸತ್ಯಾರ್ಥಪ್ರಕಾಶಕವಾದುದು ; ಶಾಂತಿದಾಯಕವಾದುದು.

ವಿಶ್ವಶಾಂತಿಯನ್ನು ಕೋರುವ ಈ ಕಾಲದಲ್ಲಿ ರೌದ್ರರಸ ಚರಿತೆ ಗಳಿಂದೇನು ಸುಖ? ರಹಸ್ಯಶೋಧನ ಬೇಕೆನ್ನುವಾಗ ರಾಗರಸದ ಕತೆ

ಗಳಿಂದೇನು ಫಲ ? ಅವುಗಳಿಂದ ಜೀವನ ಹಾಳು , ಕಾಲ ಹಾಳು. ವಿಶ್ವಕ್ಕೆ ಅಶಾಂತಿ , ಚಿತ್ತಕ್ಕೆ ವಿಭ್ರಾಂತಿ.

ಕಾರಣಿಕ ಕುಮಾರಯೋಗಿಯ ಜೀವನವು ಬರೀ ಖಾಸಗಿ ಜೀವನವಾಗಿರದೆ ಸಾಮಾಜಿಕ ಕೃಷಿ ಜೀವನವೂ ಆಗಿದೆ. ಸಾಮಾಜಿಕ ರಾಗಬಯಸುವವರಿಗೆ ಇಲ್ಲಿ ಸಲ್ಲಬೇಕೆನ್ನುವವರಿಗೆ ಇಂತಹ ಜೀವನ ಚರಿತೆಗಳ ಅವಶ್ಯಕತೆ ಅತ್ಯವಶ್ಯವೆಂದು ಭಾವಿಸಿ ಈ ಉದ್ಯಮಕ್ಕೆ ಉದ್ಯುಕ್ತರಾಗಲಾಗಿದೆ. ಆದರೆ ಅದೆಷ್ಟು ಸಾರ್ಥಕ ಸೀಮೆಗೆ ಸಿಲುಕತ್ತದೆಯೊ ಬೇರೆ ಕಾಣೆವು.

ವಸ್ತು ವಾಸ್ತವ ವಸ್ತು. ಶಿಲೆ ಅನೃತ ಶಿಲೆ. ಶಿಲ್ಪಿಯ ಕಲೆ ಮಾತ್ರ ಪಳಗದ ಕಲೆ. ಇವರಿಂದಾಗಿ ವಾಸ್ತು ಶಿಲ್ಪ ಬರುವುದೊ, ಅವಾಸ್ತು ಶಿಲ್ಪ ಬರುವುದೊ ? ಪಳಗದ ಕೈಕೆಲಸವೆಂದು – ಮೂಡಿಬಂದ ಮೂರ್ತಿಯೆ ಮುದ್ದು ಎಂದು ಭಾವಿಸುವರೆಂದು ಬಗೆದು ಸಾಧನ ಸಾಮಗ್ರಿಯ ಅಭಾವವಿದ್ದರು ಬರೆಯಲನುವಾಗಲಾಗಿದೆ.

ಕಾರಣಿಕ ಕುಮಾರಯೋಗಿಗಳವರು ಬುದ್ಧ ಬಸವನ ಬಾಳು ಬದುಕಿದರು. ವಿವೇಕಾನಂದರ ವಿಚಾರಕ್ರಾಂತಿ ಮಾಡಿದರು. ಗಾಂಧೀಜಿಯವರ ಜನ ಜಾಗ್ರತಿಯ ನೆನಗಿದರು. ಕವೀಂದ್ರ ರವೀಂದ್ರರ ಶಾಂತಿನಿಕೇತನ ಮಾತೆ ಶಿವಯೋಗಮಂದಿರವನ್ನು ಸ್ಥಾಪಿಸಿದರು. ರವೀಂದ್ರರು ಸಾಹಿತ್ಯ ರಚಿಸಿ ವಿಶ್ವಕವಿಯಾಗಿದ್ದರೆ ಸ್ವಾಮಿಗಳವರು ಸಾಹಿತ್ಯ ಸಂಗ್ರಹಿಸಿ ಆತ್ಮಕವಿಗಳಾಗಿದ್ದರು. ಅಲ್ಪಸ್ವಲ್ಪ ಭಾವಗೀತಾ ಜನಕರಾಗಿದ್ದರು. ಕುಮಾರಯೋಗಿಗಳು ಬರೀ ಸ್ವಾಮಿಯಾಗಿ ಬಾಳಲಿಲ್ಲ. ಶಿವಜ್ಞಾನಿಯಾಗಿ ಶಿವಕವಿಯಾಗಿ ಶಿವಯೋಗಿಯಾಗಿ ಬಾಳಿದರು. ಕ್ರಿಯಾಕರ್ತರಾಗಿ ಕೀರ್ತಿವಂತರಾಗಿ ಬದುಕಿದರು. ಅವರ ಜೀವನ ಅನನ್ಯಸಾಧಾರಣವಾದುದು, ಆದರ್ಶನೀಯವಾದುದು. ಅವರ ಪ್ರತಿವಚನವು ಪರಮ ಪಂಚಾಕ್ಷರಿ. ಪ್ರತಿ ಕಾರ್ಯವು ವೈಭವದ ನಂದನವನ. ಅವರು ಪ್ರತಿಯೊಬ್ಬರಿಗೂ ಆರಾಧ್ಯ ಮೂರ್ತಿ.

ಅಂತಹ ಕಾರಣಿಕ ಪುರುಷರ ಜೀವನವನ್ನು ಅರಿಯಲು ಮಾನವ ಮತಿ ಸಾಲದು. ಆಧ್ಯಾತ್ಮಿಕ ಔದ್ಯೋಗಿಕ ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಾತ್ಮಕ ಮುಂತಾದ ಸಕಲ ಕ್ಷೇತ್ರಗಳಲ್ಲಿ ಅವರ ಅಪಾರ ಸೇವೆ ಸಾಗಿದೆ.

ಮಾನವ ಕರ್ತವ್ಯವನ್ನು ಅವರಷ್ಟು ಬಲ್ಲವರಿಲ್ಲ; ಆಚರಿಸಿದವರಿಲ್ಲ. ಅವರ ಜೀವನ ಚರಿತೆಯನ್ನು ಅದೆಷ್ಟು ಗ್ರಂಥಗಳಿಂದ ಬರೆದರೂ ತೀರದು, ತೃಪ್ತಿಯಾಗದು. ಆ ಹಿರಿಯಾಸೆಗೆ ಇದೊಂದು ನಾಂದಿಯೆಂದು ನಂಬಿರೋಣವಾಗಿದೆ.

ಬೆಂಗಳೂರು
೧೮-೧೨-೧೯೫೦

**ಶ್ರೀ ಜ. ಚ. ನಿ.**

## ಕೃತಜ್ಞತೆ

ಪರಮಪೂಜ್ಯ ಲಿಂಗೈಕ್ಯ ಶ್ರೀ ಶ್ರೀ ಶ್ರೀ ಹಾನಗಲ್ಲ ಸದಾಶಿವ ಕುಮಾರ ಮಹಾಸ್ವಾಮಿಗಳವರ ೨೧ ನೆಯ ವಾರ್ಷಿಕ ಪುಣ್ಯಮಹೋತ್ಸವದ ಸವಿನೆನಪಿಗಾಗಿ ಕಡೂರು ತಾಲ್ಲೂಕು ಗಿರಿಯಾಪುರದ ಶ್ರೀಗುರು ಕುಮಾರಾಶ್ರಮದಲ್ಲಿ ತಾ|| ೯-೨-೧೯೫೦ ರಿಂದ ಒಂದು ವಾರದ ವರೆಗೆ ನೆರವೇರಿದ ಶಿವಾನುಭವ ದಾಸೋಹದ ಸಪ್ತಾಹದ ಸ್ಮಾರಕವಾಗಿ **"ಕಾರಣಿಕ ಕುಮಾರಯೋಗಿ"** ಎಂಬ ಈ ಕೃತಿರತ್ನವು ಪ್ರಕಾಶಪಡಿಸಲ್ಪಟ್ಟಿದೆ. ಈ ಗ್ರಂಥ ಪ್ರಕಾಶನಕ್ಕೆ ಸಕಲ ಸೌಲಭ್ಯಗಳನ್ನು ಉದಾರವಾಗಿ ನೀಡಿದುದಲ್ಲದೆ ಇದು ಶ್ರೀ ಜಗದ್ಗುರು ನಿಡುಮಾಮಿಡಿ ಪ್ರಬೋಧ ಪುಸ್ತಕಮಾಲೆಯ ದ್ವಾದಶಕುಸುಮವಾಗಿ ಅರಳಿ ವಾಚಕರ ಹಸ್ತಭೂಷಣವಾಗಲು ಹರಸಿದ ಉಭಯ ಮಹಾಸ್ವಾಮಿಗಳವರಿಗೂ ಚಿರಋಣಿಯಾಗಿರುತ್ತೇನೆ. ಈ ಹೊತ್ತಗೆಯನ್ನು ಸಕಾಲಕ್ಕೆ ಅಂದವಾಗಿ ಅಚ್ಚುಮಾಡಿಕೊಟ್ಟ ಶ್ರೀ ಸತ್ಯನಾರಾಯಣ ಪ್ರೆಸ್ಸಿನ ಗೆಳೆಯರನ್ನು ನೆನೆಯದೆ ನನ್ನ ಕರ್ತವ್ಯ ಪೂರ್ಣವಾಗದು.

ಬೆಂಗಳೂರು
೨೦-೧೨-೧೯೫೦

# ಪರಿವಿಡಿ

## ಜ್ಞಾನಭಾಗ



ಶಿವಯೋಗ ಮಂದಿರ ಮಹಾಸಂಸ್ಥೆಯ ಸಂಸ್ಥಾಪಕರಾದ
ಪರಮಪೂಜ್ಯ ಹಾನಗಲ್ಲ ಶ್ರೀ ನಿ. ಪ್ರ. ಕುಮಾರಸ್ವಾಮಿಗಳವರು

“ಸೇವೆ ಪಾವಿತ್ರ್ಯತೆ ಆತ್ಮವಿಕಾಸಗಳಿಂದಲೆ
ಆತ್ಮನು ಪರಮಾತ್ಮನಾಗುತ್ತಾನೆ.
ಸೇವೆ ಪಾವಿತ್ರ್ಯತೆ ಆತ್ಮವಿಕಾಸದ ಅಡಿಗಲ್ಲು.”

--ಷೆಕ್ಸಪೀಯರ್.

ಓಂ

# ಕಾರಣಿಕ ಕುಮಾರಯೋಗಿ

## ನಾನು ಕಂಡ ಕುಮಾರಯೋಗಿ

೧೯೩೪ ಇದ್ದಿರಬೇಕು. ನವಿಲುಗುಂದ ತಾಲೂಕು ಅಣ್ಣಿಗೆರೆಯ ತೋಂಟದಾರ್ಯರ ಶಾಖಾ ಮಠ. ಒಂದುದಿನ ಮುಂಜಾವು. ಷಟ್‌ಸ್ಥಲ ಮೂರ್ತಿ ಸುಖಾಸನವಲ್ಲಿ ಕುಳಿತಿತ್ತು. ನಿರಂಜನಮೂರ್ತಿ ನಿರಾಡಂಬರ ವೇಷದಲ್ಲಿ ಮೂರ್ತಮಾಡಿತ್ತು. ನಿರಾಭಾರಿಸ್ವಾಮಿ ನಿರ್ಮಲ ಮನಸ್ಸಿನಿಂದ ಮಂಡಿಸಿತ್ತು. ಪ್ರಣವ ಸ್ವರೂಪಿ ಪ್ರಶಾಂತ ಕಳೆಯಿಂದ ಆಸೀನವಾಗಿತ್ತು. ಷಟ್‌ಶಾಸ್ತ್ರ ಶಿವಾನುಭಾವಿ ಉಜ್ವಲ ಓಜದಿಂದ ಒಡರಿತ್ತು. ಕೂತುಕೊಳ್ಳು ವುದರಲ್ಲಿ ಅವರದೇ ಒಂದು ರೀವಿ. ಅದು ಯೋಗ ರೀವಿ. ಆರ್ಜವ ದೇಹ ಆಜಾನು ಬಾಹು. ವಿಶಾಲವಾದ ಹಣೆ. ಎವೆಯಿಕ್ಕದ ಕಣ್ಣು. ಜಗತ್ತನ್ನೇ ಜರಿದಿದ್ದರು. ಸಮಾಜದ ಪ್ರಗತಿವಿಚಾರ ಭಾವರೇಖೆ ನೀಳವಾದ ಮೊಗದಲ್ಲಿ ಆಳವಾಗಿ ಮೂಡಿ ತೋರುತ್ತಿತ್ತು. ಅನುಭವದ ಆಗರವಾಗಿದ್ದರೂ ಅದರ ಕ್ಷೀಣತೆಯ ನೆನೆದು ಅಭಿವೃದ್ಧಿಯ ಹಂಬಲ ಹೆಚ್ಚಿ ಹೊಮ್ಮುತ್ತಿತ್ತು ಯೋಗ ಬಲ್ಲಿದರಾಗಿದ್ದರೂ ಯೋಗದ ಏಳ್ಗೆಗಾಗಿ ಪಡುತ್ತಿದ್ದ ಚಾಕಚಕ್ಯತೆ ಚಿಮ್ಮು ತ್ತಿತ್ತು ಸ್ವತಃ ಸಾಹಿತಿಗಳಾಗದಿದ್ದರೂ ಪ್ರಾಚೀನ ಸಾಹಿತ್ಯ ಸಂಗ್ರಹದ ಆಸಕ್ತಿ ಆಸೇಚನವಾಗಿತ್ತು. ವಿದ್ಯೆಯನ್ನು ವಿಶೇಷ ಕಲಿಯದಿದ್ದರೂ ವಿಚಾರ ಪ್ರೌಢಿಮೆಯಿಂದ ವಿದ್ವಾಂಸರನ್ನು ನಿಬ್ಬೆರಗುಗೊಳಿಸುತ್ತಿದ್ದ ಪ್ರಕಾಂಡ ಪ್ರಭಾ ವವಿತ್ತು. ಸಂನ್ಯಾಸಿಗಳಾಗಿದ್ದರೂ ಸ್ತ್ರೀಯರ ಸತ್ಕರ್ಮ–ಸದ್ಧರ್ಮಗಳ ಉಳಿ ಮೆಗೆ ಹೆಣಗುತ್ತಿದ್ದ ಹೆಚ್ಚಳದ ಪೆಂಪಿತ್ತು. ನಿಷ್ಕಾಮಿಗಳಾಗಿದ್ದರೂ ಲೋಕ ಕಲ್ಯಾಣಕ್ರಿಯಾಪ್ರೇಮ ಕೌಶಲ್ಯವಿತ್ತು. ವಿರಕ್ತ ಶಿಖಾಮಣಿಯಾಗಿದ್ದರೂ ವಿನಯಶೀಲಶ್ರೀ ವಿರಾಜಿಸುತ್ತಿತ್ತು. ಜೀವನ ನಿರ್ವಹಣದ ಯಾವ ಯೋಚನೆಯಿಲ್ಲದಿದ್ದರೂ ವೈದ್ಯದ ಶೋಧ–ಪ್ರಯೋಗಗಳ ಸಂಭ್ರಮ ಸೂರೆ

ಗೊಂಡಿತ್ತು. ದೀನ ದರಿದ್ರರಲ್ಲಿದ್ದ ದಯಾಂತಃಕರಣ ದಿವ್ಯವಾಗಿತ್ತು. ಪ್ರಗತಿ ಶೀಲರಿಗೆ ಪ್ರೋತ್ಸಾಹದಾಯಕ ಗುಣ ಪ್ರಭೂತವಾಗಿತ್ತು, ಬರಿ ವಯೆ—ಪ್ರೋತ್ಸಾಸ ಮಾತ್ರವಲ್ಲ ಆಶ್ರಯ-ಪೋಷಣಗಳನ್ನು ಕೊಡುತ್ತಿದ್ದ ಒವ್ಮ್ರನದ ಔದಾರ್ಯವಿತ್ತು. ಮುಂದಮತಿಶಿಷ್ಯರಿಗೆ ಸ್ವಂತ ವಾರ ಪ್ರವಚನ ಹೇಳಿ ಕೇಳಿ ಪಳಗಿಸುತ್ತಿದ್ದ ಪ್ರತಿಭೆಯಿತ್ತು, ಅಂತಹ ಅನುಪಮ ಜಗಜ್ಯೋತಿಯೊಂದನ್ನು ಕಂಡೆ. ಅವರೆ ನಾ ಕಂಡ **ಕಾರಣಿಕ ಕುಮಾರ ಯೋಗಿಗಳು** ಅವರು ಆಗಳೆ ಸಮಾಜ ಬಾಂದಳದಿ ಕ್ರಿಯಾ ಕಿರಣಗಳನು ಸೀಡಿ ಜ್ಞಾನ ಬೆಳಗನು ಹರಡಿ ಜಗಚ್ಚಕ್ಷುವಿನಂತೆ ಜಗಜಗಿಸಿದ್ದರು. ಅಂದು ಆ ಬಿಂಬವ ಕಂಡೆ.

ಕಂಡೆನ್ನ ಕಂಗಳು ಧನ್ಯವಾದವು. ಜನ್ಮ ಸಾರ್ಥಕವಾಯಿತು. ಇದಕ್ಕೆ ಮೂಲ ಕಾರಣರು ಅಡ್ನೂರಿನ ಶ್ರೀಮಂತ ಮಲ್ಲಿಕಾರ್ಜುನಗೌಡರು. ಇವರನ್ನಿಲ್ಲಿ ನೆನೆಯದಿದ್ದರೆ ಲೋಪವಾದೀತು, ಲೌಕಿಕವಿರೋಧವಾದೀತು !

ಇಂದು ಅದೇ ಆ ಮಹಾ ಕಾರಣಿಕ ಕುಮಾರ ಯೋಗಿಯ ಐತಿಹಾಸಿಕ ಭಾವಚಿತ್ರವನ್ನು ಬಲ್ಲಂತೆ ಚಿತ್ರಿಸಿ ಕಾಣುವ ಭಾಗ್ಯವು ಶ್ರೀ ಮ. ಲಿಂ ಚ. ಸದಾಶಿವ ಶಿವಾಚಾರ್ಯಸ್ವಾಮಿಗಳವರ ಸತ್ಪ್ರೇರಣೆಯಿಂದ ಮತ್ತೆ ಒದಗಿ ಬಂದಿದೆ; ಒಂದುಗೂಡಿ ನಿಂತಿದೆ. ಇದಕಾಗಿ ಶ್ರೀ ಸದಾಶಿವ ಶಿವಾಚಾರ್ಯರಲ್ಲಿ ನನ್ನ ಧನ್ಯವಾದಗಳು.

ಆ ಲೋಕೋತ್ತರ ಮಹಾಮೂರ್ತಿಯನ್ನು ಎಷ್ಟು ಸಲ ಎಷ್ಟು ಬಗೆಯಲ್ಲಿ ನೋಡಿದರೂ ಬರ ಹಿಂಗದು, ಬೇಸರಬಾರದು.

> " ನಿಮ್ಮ ನೋಟವನಂತ ಸುಖ. ನಿಮ್ಮ ಕೂಟ ಪರಮ ಸುಖವಯ್ಯ.
> ಅಷ್ಟ ಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನಯ್ಯ.
> ಕುಮಾರ ಯೋಗೀಶ್ವರ ನಿಮ್ಮ ನೋಡಿ ನೋಡಿ ಮನವಲ್ಲಿ
> ರತಿಹುಟ್ಟಿ ನಿಮಿರ್ದವೆನ್ನ ಕಂಗಳು."

ಎಂದು ಅಣ್ಣನ ಅಮೃತವಾಣಿಯಲ್ಲಿ ಹಾಡಿ ನಟ್ಟ ನೋಟದಿಂದ ನೋಡಿ ನಲಿಯಲು ಮುಂದುವರಿಯಲಾಗಿದೆ, ಉಲಿಯಲು ಮೊದಲು ಮಾಡಲಾಗಿದೆ.

# ಪ್ರವೇಶ

**ಕ**ನ್ನಡನಾಡಿನಲ್ಲಿ ಇಂದಿನವರೆವಿಗು ಆಗಿಹೋದ ಅನಂತ ಮಹಾನುಭಾವರು ಒಂದೊಂದು ಕೃತಿ ಕಲೆಗಳಿಂದ ತಮ್ಮ ತಮ್ಮ ಜೀವನವನ್ನು ರಮ್ಯಗೊಳಿಸಿಕೊಂಡಿದ್ದಾರೆ; ರಹಸ್ಯಗೊಳಿಸಿಕೊಂಡಿದ್ದಾರೆ. ಅವರಲ್ಲಿ ಹಲವರು ಯೋಗಿಗಳಾಗಿ, ತ್ಯಾಗಿಗಳಾಗಿ, ಗ್ರಂಥಕಾರರಾಗಿ ಕಲಾವಂತರಾಗಿ, ಮತೋದ್ಧಾರಕರಾಗಿ, ದೇಶಭಕ್ತರಾಗಿ ಬಾಳಿದ್ದಾರೆ. ಬೆಳಕಿಗೆ ಬಂದಿದ್ದಾರೆ. ಆದರೆ ಅವೆಲ್ಲವನ್ನೂ ಸಂಪಾದಿಸಿದ ಶ್ರೇಷ್ಠ ಮಹಾನುಭಾವನೆಂದರೆ ವರಿಷ್ಠ ಕಾರಣಿಕ ಪುರುಷನೆಂದರೆ ಶ್ರೀ ಸಿ. ಪ್ರ. ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು. ಅವರ ಇಡೀ ಜೀವನವು ಕಾವ್ಯಮಯವಾದ ಒಂದು ಐತಿಹ್ಯವಾಗಿದೆ; ಐಹಿಕಾಮುಷ್ಮಿಕ ಸಾಧನವಾಗಿದೆ. ಅವರಲ್ಲಿ ರಾಜಕೀಯ ಕ್ಷೇತ್ರವೊಂದನ್ನು ಬಿಟ್ಟು ಉಳಿದ ಎಲ್ಲ ಸದ್ಗುಣಗಳು ಗುಂಫಿತವಾಗಿದ್ದುವು; ಗುಡ್ಡೆಯಾಗಿದ್ದವು. ವಿಚಾರ ಸ್ವಾತಂತ್ರ್ಯ, ವಿಶಾಲವೈರಾಗ್ಯ, ವ್ಯಾಪಕಭಾವನೆ, ಜೀವಕಾರುಣ್ಯ, ಸಮಾಜ ಕಳಕಳಿ, ಸಂಸ್ಕೃತಿಯಭಿಮಾನ, ಕಾರ್ಯಕುಶಲತೆ ಮೊದಲಾದ ಅಮೋಘ ಗುಣಗಳು ಅವರಲ್ಲಿ ನೆಲೆಗೊಂಡಿದ್ದವು ಅಸದೃಶವಾದ ಸ್ವಾರ್ಥತ್ಯಾಗ, ಅಚಲಿತವಾದ ಧೈರ್ಯ, ಅಖಂಡವಾದ ಸಾಹಸ, ಅಪಾರವಾದ ಕಷ್ಟಸಹಿಷ್ಣುತೆ, ಅಗಣಿತವಾದ ಗುಣಗ್ರಾಹಕತೆ ಮುಂತಾದುವುಗಳು ಅವರಲ್ಲಿ ಮೂರ್ತಿಮಂತವಾಗಿದ್ದವು. ಉದಾತ್ತ ಉದ್ದೇಶ, ಉದಾರ ಉತ್ತೇಜನ, ಉನ್ನತ ಆಸಕ್ತಿ ಕೊನೆಯಿಲ್ಲದ ಕುತೂಹಲ ಇವೆಲ್ಲ ಅವರ ಪ್ರಕೃತಿ ಗುಣಗಳಾಗಿದ್ದವು. ಈ ಎಲ್ಲ ಸದ್ಗುಣಗಳಿಂದ ಶ್ರೀ ಕುಮಾರ ಯೋಗಿಯು ತನ್ನ ಹೆಸರಿಗೆ ತಕ್ಕಂತೆ ತನ್ನ ಜೀವನದಲ್ಲಿಯೆ ಇಡೀ ಕನ್ನಡ ನಾಡಿನ ಕುವರನಾಗಿ ಬದುಕಿದನು. ಕಾರಣಿಕನಾಗಿ ಬಾಳಿದನು ಹೊಟ್ಟೆಯಲ್ಲಿ ಹುಟ್ಟುವ ಸಾಮಾನ್ಯ ಕುವರನು ತನ್ನ ತಂದೆತಾಯಿಗಳಿಗೆ ಮಾತ್ರ ಮುದ್ದಾಗಬಹುದು. ಆದರೆ ಇಡೀ ಜನಾಂಗಕ್ಕೆ ಮುದ್ದುಗುವರನಾಗುವುದು ಕಷ್ಟ. ಬಾಲಕೇಳಿಗಳಿಂದ ತನ್ನ ತಂದೆತಾಯಿಗಳನ್ನು ಪ್ರೀತಿಗೊಳಿಸಬಹುದು, ಅಸಾಧಾರಣವಾದ ಪ್ರೌಢ ಲೀಲೆಗಳಿಂದ ಪವಿತ್ರ ಕಾರ್ಯಗಳಿಂದ ಇಡೀ ಜನಾಂಗವನ್ನು ಕಡು ಪ್ರೇಮಗೊಳಿಸುವುದು ಸಾಹಸದ ಮಾತು. ಈ ಕಾರ್ಯವನ್ನು ಕುಮಾರ ಯೋಗಿಯು ಮಾಡಿದನು; ಮಹಾ ಕಾರಣಿಕನಾದನು.

ಆತನ ಸಹಜವಾದ ಸಣ್ಣನಗೆ, ನಸ್ನಿವಾತು, ಪುಣ್ಯಕಳೆಗಳನ್ನು ಕಂಡು ಕೇಳಿ ಆನಂದವಶರಾಗದ ವ್ಯಕ್ತಿಗಳಿಲ್ಲ. ಅವರ ಮೃದುವಾದ, ಮಿತವಾದ ಅನುಭವಪೂರ್ಣ ಮಾತುಗಳಿಗೆ ಮನಸೋಲದ ಪಂಡಿತರಿಲ್ಲ; ಪಾಮರರಿಲ್ಲ. ಆವರು ಕೈಕೊಳ್ಳುತ್ತಿರುವ ಕಲ್ಮಷರಹಿತವಾದ ಕಾರ್ಯಕಲಾಪಗಳಿಗೆ ಸಂಪತ್ತು ಸಹಾಯಗಳನೀಡದ ಸಾಹುಕಾರರಿಲ್ಲ, ಸಾಮಾಜಿಕರಿಲ್ಲ.

ಅವರು ಓಜಸ್ಸಿನಿಂದ ವಜ್ರಕ್ಕಿಂತಲು ಕಠೋರವಾಗಿ ಕಂಡರೂ ಕರುಳಿನಿಂದ ಕುಸುಮಕ್ಕಿಂತಲೂ ಮೃದುವಾಗಿದ್ದರು. ಅವರು ಉಕ್ಕುವ ತಮ್ಮ ತಾರುಣ್ಯದಲ್ಲಿಯೆ ಸಂಸಾರಕ್ಕೆ ತಿಲಾಂಜಲಿಯನ್ನು ತೆತ್ತರು. ಅನುಭವದ ಆಧ್ಯಾತ್ಮಿಕ ಜೀವನದಲ್ಲಿ ನಿಂತರು. ಮುಂದೆ ಸ್ವಲ್ಪ ದಿನಗಳಲ್ಲಿಯೆ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗದಲ್ಲಿ ಅಡಿಯನ್ನಿಟ್ಟರು. ಆ ಮಹತ್ಕಾರ್ಯಗಳಲ್ಲಿ ಒದಗುವ ತೊಡಕು ತೊಂದರೆಗಳಿಗೂ ಬರುವ ಭಯಭೀತಿಗಳಿಗೂ ಅವರು ಅಂಜಲಿಲ್ಲ. ಅಳುಕಲಿಲ್ಲ. ದೊಡ್ಡ ಪ್ರವಾಹವು ತನಗೆ ಎದುರಾಗುವ ಕಾಡುಗೀಡುಗಳನ್ನು ತನ್ನ ಸೆಳವಿನಿಂದ ಭೇದಿಸಿ ದೊಡ್ಡದೊಡ್ಡ ದುಂಡುಬಂಡೆಗಳ ಮೇಲೆ ನೆಗೆದು ಮುಂದಕ್ಕೆ ಸಾಗುವಂತೆ, ಸಾಗರ ಸೇರುವಂತೆ ಶ್ರೀಗಳು ತಮ್ಮ ಸತ್ಕಾರ್ಯಸಾಧನೆಯಲ್ಲಿ ಎಡೆಬಿಡದೆ ಅಡ್ಡಬರುವ ದುರಂತವಾದ ಎಡರು ತೊಡರುಗಳನ್ನು ಸಹ ತನ್ನ ವೈರಾಗ್ಯದ ವಜ್ರಾಘಾತದಿಂದ ಹೊಡೆದು ಒಡೆದು ಪುಡಿಮಾಡಿ ತನ್ನ ಧ್ಯೇಯದತ್ತ ವಾಯುವೇಗದಿಂದ ಸಾಗಿದರು. ಸಾಧಿಸಿದರು. ಸತ್ಯವನ್ನು ಎತ್ತಿಹಿಡಿಯಲು ಸಮಾಜವನ್ನು ಸುಂದರಗೊಳಿಸಲು ಸ್ವಲ್ಪವೂ ಹೆದರದೆ ಹಿಂಜರಿಯದೆ ಛಲ ತೊಟ್ಟರು; ಬಲ ಮುಡಿಪಿಟ್ಟರು. ಅವರು ಮಾಡಿದ ಎಲ್ಲ ಮಹಾಕಾರ್ಯಗಳ ಮಹಾ ಓಜಸ್ಸು ಇಡೀ ಕರ್ಣಾಟಕವನ್ನೆ ಬೆಳಗಿತು, ಬೆರಗುಗೊಳಿಸಿತು. ಆ ಪುಣ್ಯಪುರುಷನ ಪ್ರತಿಬಿಂಬವು ಪ್ರತಿಯೊಬ್ಬ ಕನ್ನಡಿಗನ ಕಣ್ಣಲ್ಲಿ ತೋರಿ ಮಿಂಚಿತು; ದಾರಿಹಚ್ಚಿತು. ಆ ಕುಮಾರ ಯೋಗಿಯು ವೀರಶೈವ ಸಮಾಜದಲ್ಲಿ ಬಸವಣ್ಣನಂತೆ ತನ್ನದೇ ಆದ ಒಂದು ಉಚ್ಚಸ್ಥಾನವನ್ನು ಗಳಿಸಿಕೊಂಡನಲ್ಲದೆ ಪ್ರತಿಯೊಬ್ಬ ಸಮಾಜಾಭಿಮಾನಿಯ – ಸಂಸ್ಕೃತಿಯಭಿಮಾನಿಯ ಹೃದಯಮಂದಿರದ ಮಾನ್ಯಮೂರ್ತಿಯಾದನು; ಪೂಜ್ಯವ್ಯಕ್ತಿಯಾದನು; ಯೋಗಿಯಾದನು; ವಿರಾಗಿಯಾದನು. ಕಾರಕನಾದನು; ಕಾರಣಿಕನಾದನು.

ಅಂತಹ ಪುಣ್ಯಶ್ಲೋಕಿಯ ಪವಿತ್ರ ಚರಿತ್ರೆಯನ್ನು ಮನತಟ್ಟುದ ರೀತಿಯಲ್ಲಿ ಮಂದಟ್ಟಾಗುವಂತೆ ಮುಂದಿರಿಸುವ ಪ್ರಯತ್ನ ಪಡಲಾಗಿದೆ; ಪ್ರವೇಶ ಮಾಡಲಾಗಿದೆ.



# ಉದಂತ ಉದಯ, ಉಜ್ವಲಂತ ಉತ್ಕ್ರಮಣ

## ಹಿನ್ನೆಲೆ

ಸುಮಾರು ಎಂಬತ್ತು ಅಥವಾ ನೂರು ವರ್ಷಗಳ ಹಿಂದೆ ವೀರಶೈವ ಸಮಾಜವು ಮಹಾಂಧಕಾರದಲ್ಲಿ ಮುಳುಗಿತ್ತು. ಮಹಾರೋಗಕ್ಕೆ ಪಕ್ಕಾಗಿತ್ತು. ನಾಡಿಕ್ರಿಯೆಗಳು ಸಿಲ್ಲುತ್ತ ಬಂದಿದ್ದವು ಸಮಾಜವು ಶೈವ ಸಂಪ್ರದಾಯಕ್ಕೆ ಕಟ್ಟುಬಿದ್ದಿತ್ತು. ಒಂದೆಡೆಗೆ ಸಿರಾಚಾರಗಳು ಇನ್ನೊಂದೆಡೆಗೆ ಅನಾಚಾರಗಳು ಹೆಚ್ಚಿಹೋಗಿದ್ದವು. ಅತ್ಯಾಚಾರಗಳು ಅತಿಯಾಗಿದ್ದವು. ಗುರುಗಳು ತಮ್ಮ ಗೊತ್ತುಗುರಿಗಳನ್ನು ಮರೆತಿದ್ದರು. ಲಿಂಗಗಳು ಅಂಗ ಗಂಳಿದ ಅಗಲಿ ದೇವರ ಮನೆಯ ಜಗುಲಿಗಳ ಏರಿದ್ದವು. ಪಂಚ ಸೂತ್ರದ ಮಾತು ಸೂತಕವಾಗಿತ್ತು. ಪವಿತ್ರ ಶಿಲೆಯ ಬದಲು ಅಪವಿತ್ರ ಮಣ್ಣು ಮಟ್ಟಿಯ ಶಿಲೆಯು ಸಾಕ್ಷಿಯಾಗಿತ್ತು. ಜಂಗಮರು ತತ್ವಹೀನರಾಗಿ ತುತ್ತಿಗಾಗಿ ಅಲೆಯುತ್ತಿದ್ದರು. ಭಸ್ಮ ಭಸ್ಮವಾಗಿತ್ತು ಮಣ್ಣು ಮಟ್ಟಿಗಳಿಂದ ಸಿಕ್ಕ ಬೂದಿ ಬೆರಣಿಗಳಿಂದ ಭಸ್ಮಗಳು ಸಿದ್ಧವಾಗುತ್ತಿದ್ದವು. ರುದ್ರಾಕ್ಷಿಗಳ ಧರಿಸುವುದೊಂದೆಡೆಗಿರಲಿ, ಕಂಡವರೆ ಇರಲಿಲ್ಲ ಮಠ ಮಾನ್ಯಗಳಲ್ಲಿಯೆ ಕಾಣುವುದು ಅಪರೂಪವಾಗಿತ್ತು ಮಂತ್ರೋಚ್ಚಾರಣೆ ಮಾಯವಾಗಿತ್ತು. ಸಂಸಾರ ಚಿಂತೆ ಮಿತಿ ಮೀರಿತ್ತು. ಎಲ್ಲಿಯೊ ಯಾರಾದರು ಕೆಲವರು ಮಂತ್ರ ಜಪ ಮಾಡುತ್ತಿದ್ದರೆ ಅವರಿಗೆ ಅದರ ಅರ್ಥವೇನು, ಮರ್ಮವೇನು, ಹೇಗೆ ಜಪಿಸಬೇಕು ಎಂಬುದೇ ತಿಳಿದಿರಲಿಲ್ಲ ಪಾದೋದಕ ವಿಧ-ವಿಧಾನಗಳನ್ನು ಅರಿತವರಿರಲಿಲ್ಲ ಪ್ರಸಾದ ಪ್ರಭಾವ ಕುಂದಿತ್ತು. ಪಂಚಾಚಾರಗಳ ಪ್ರಾಣ-ತ್ರಾಣಗಳ ಸುಳಿವಿರಲಿಲ್ಲ

ಭಕ್ತರು ಶ್ರದ್ಧೆಗೆ ಮಹೇಶ್ವರರು ನಿಷ್ಠೆಗೆ ಪ್ರಸಾದಿಗಳು ಅವಧಾನಕ್ಕೆ ತಿಲಾಂಜಲಿಯ ಬಿಟ್ಟಿದ್ದರು. ಪ್ರಾಣಲಿಂಗಿಗಳಿಗೆ ಆನಂದದ ಸೊಗಸು ಸೋಂಕಿರಲಿಲ್ಲ. ಶರಣರಿಗೆ ಅನುಭಾವದ ಗಂಧವೇ ಗೊತ್ತಿರಲಿಲ್ಲ ಐಕ್ಯರು ಅಲ್ಲಲ್ಲಿ ಒಬ್ಬೊಬ್ಬರು ಮಿಣುಗುತ್ತಿದ್ದರು. ಆದರೆ ಸಮಾಜದ ಸಾಮರಸ್ಯ ಅವರಿಗಿರಲಿಲ್ಲ. ಇದ್ದರೂ ಸಾಮಾಜಿಕ ಕುಂದುಕೊರತೆಗಳನ್ನು ಪೂರೈಸುವ ಕ್ರಿಯಾಶಕ್ತಿ ಅವರಲ್ಲಿರಲಿಲ್ಲ. ಜ್ಞಾನಪ್ರಚಾರವಿರಲಿಲ್ಲ. ಹೀಗೆ ಸಮಾಜವು

ಅಜ್ಞಾನಾಂಧಕಾರದಲ್ಲಿ ಮುಳುಗಿತ್ತು ನೀತಿ ರೀತಿಗಳ ಶ್ವಾಸೋಚ್ಛ್ವಾಸಗಳು ನಿಲ್ಲುತ್ತ ಬಂದಿದ್ದವು. ತೀರ ನಿಶ್ಯಕ್ತಿಯೊದಗಿತ್ತು. ಜಡವಾಗಿತ್ತು. ಜಂಜಾಟಕ್ಕಿಕ್ಕಿತ್ತು.

ಆ ಸಮಯದಲ್ಲಿ ವೈದ್ಯಭಾನುವಿನ ಉದಯವಾಯಿತು. ಅಂಧಕಾರ ಹರಿಯಿತು. ಭವರೋಗ ಅಳಿಯಿತು. ಆಚಾರ ವಿಚಾರ ಚಿಕಿತ್ಸೆಯಿಂದ ಉಸಿರು ಉತ್ತಮ ರೀತಿಯಲ್ಲಿ ಆಡತೊಡಗಿತು ವರ್ಷ ವರ್ಷಕ್ಕೆ ಶಕ್ತಿ ವೈಗೂಡಿ ಬರಹತ್ತಿತು. ಹೊಸರಕ್ತ ಧಮನಿಗಳಲ್ಲಿ ಹರಿಯತೊಡಗಿತು. ಸು. ೩೦-೩೫ ವರ್ಷಗಳಲ್ಲಿ ಸಮಾಜವು ಸಶಕ್ತವಾಗಿ ಸರ್ವಾಂಗ ಸುಂದರ ವಾಯಿತು. ಹಾಗಾದಲ್ಲಿ ಅಂತಹ ಅಮೋಘನಾದ ಶಕ್ತಿಗೆ ಕಾರಣರಾರು ಎನ್ನುವಿರಾ? ಅವರೇ ಕಾರಣಿಕ ಹಾನಗಲ್ಲ ಶ್ರೀಕುಮಾರ ಮಹಾಸ್ವಾಮಿ ಗಳವರು. ಅವರು ಮೂಡಿಬಂದುದನ್ನು ಮಾಡಿ ನೆರವೇರಿಸಿದ ಮಣಿಹ ಗಳಾವವೆಂಬುದನ್ನು ತಿಳಿಯಲಪೇಕ್ಷಿಸುವಿರಾ? ಹಾಗಾದರೆ ಬನ್ನಿ! ಕೇಳ ಬನ್ನಿ!!

ಕರ್ನಾಟಕ ಕೇಂದ್ರವಾದ ಧಾರವಾಡ ಜಿಲ್ಲೆಯ ರಾಣೀಬೆನ್ನೂರು ತಾಲ್ಲೂಕಿನಲ್ಲಿರುವ 'ಜೋಯಿಸರ ಹರಳಳ್ಳಿ' ಎಂಬುದೊಂದು ಸಣ್ಣ ಗ್ರಾಮ. ಗ್ರಾಮ ಸಣ್ಣದಾದರೂ ಅದರ ಧಾಮ ಇಂದು ಹಿರಿಯದು. ಆ ಗ್ರಾಮದಲ್ಲಿ ವೃಷ್ಟಿ ಶಾಖಾನುವರ್ತಿಗಳಾದ ಸಾಲೀಮಠದ ಬಸವಯ್ಯ ನೀಲಮ್ಮ ಎಂಬ ಹೆಸರಿನ ಧಾರ್ಮಿಕ ಭಾವನೆಯ ದಂಪತಿಗಳಿದ್ದರು. ಅವರು ತಮ್ಮ ನಡೆ ನುಡಿಗಳಿಂದ ನಾಮ-ನೇಮಗಳಿಂದ ಹನ್ನೆರಡನೆ ಶತಮಾನದಲ್ಲಿದ್ದ ಕಲ್ಯಾಣದ ಬಸವ ನೀಲಾಂಬಿಕೆಯರ ನೆನಪನ್ನು ತರುವಂತಿದ್ದರು.

ನಿಜವಾಗಿಯು ತಾಯಿ ನೀಲಮ್ಮನು ನೀಲಾಂಬಿಕೆಯ ಸದೃಶಳು. ಗುಣಗಳಲ್ಲಿ ಗುಂಜಿಯಷ್ಟು ವ್ಯತ್ಯಾಸವಿಲ್ಲ. ಬಸವಯ್ಯನವರ ಭಾಗ್ಯದ ತವರು. ಬಾಳಿನ ಭವನ ತಾಯಿ ನೀಲಮ್ಮನು ಬಸವಯ್ಯನವರಿಗೆ ಅನುರೂಪಳಾದ ಗೃಹಿಣಿ. ಪರಮ ಪತಿವ್ರತೆ; ಪತಿಯ ಪ್ರಾಣದೇವತೆ. ಶಾಂತಿ ಸಂಪನ್ನೆ. ಲಿಂಗಾರ್ಚನಾಸಕ್ತೆ. ಶ್ರಮಿಸುವ ಜೀವಿ, ಸಮತಾಭಾವಿ

ಮನೆಯ ಕುಂದು ಕೊರತೆಗಳನ್ನು ಆಚೆ ನೆರೆಯವರಿಗೆ ಚಾಚೂ ಹೇಳು ತ್ತಿರಲಿಲ್ಲ. ನೆರೆ ಮನೆಗಳಿಗೆ ಸ್ವೈರವಾಗಿ ಸುಳಿಯುತ್ತಿರಲಿಲ್ಲ. ಮನೆಯ ಕಷ್ಟ

ಕಾರ್ಪಣ್ಯಗಳನ್ನು ಮನಸ್ಸಿಗೆ ತಂದುಕೊಳ್ಳುತ್ತಿರಲಿಲ್ಲ ಕುಂದುಕೊರತೆ ಕಷ್ಟ ಕಾರ್ಪಣ್ಯಗಳ ಈ ಸಂಸಾರ ಸಾಗರ ವಿಷವನ್ನು ಕಾರಿದರೂ ಕಷ್ಟ, ನುಂಗಿದರೂ ಕಷ್ಟ. ಕಾರಿದರೆ ಮನೆತನದ ಮರ್ಯಾದೆಗೆ ಭಂಗ. ನುಂಗಿದರೆ ಮನಃಶಾಂತಿಗೆ ಭಂಗ. ಇದನರಿದು ತಾಯಿ ನೀಲಮ್ಮನವರು ಈ ನಂಜನ್ನು ಕಕ್ಕದೆ–ಕುಡಿಯದೆ ಕಂಠದಲ್ಲಿಯೇ ಇರಿಸಿಕೊಂಡು ನಿಜಕ್ಕೂ ನೀಲಕಂಠೆಯು ರಾಗಿದ್ದರು. ನೀಲಕಂಧರನು ಜೀವನದಲ್ಲಿ ಒಮ್ಮೆ ವಿಷಪಾನ ಮಾಡಿ ಜಗತ್ತಿಗೆ ವರುಷಕ್ಕೊಂದು ಸಲ ಯುಗಾದಿ ಬರುವಂತೆ ಮಾಡಿದ್ದರೆ ತಾಯಿ ನೀಲಮ್ಮನವರು ತಮ್ಮ ಬಾಳಿನಲ್ಲಿ ನಿತ್ಯ ನಂಜುಂಡು ದಿನದಿನವೂ ಹೊಸ ಹಬ್ಬದ ಉಲ್ಲಾಸ ಉಣ್ಣುವಂತೆ ಮಾಡುತ್ತಿದ್ದರು. ಹೊಸ ಹೊಸ ಜೀವನ ಕಾಣುವಂತೆ ಮಾಡುತ್ತಿದ್ದರು. ಅವರು ಈ ಭಾಗ್ಯವಿಲ್ಲದ ಬಾಳಿಗೆ ಬಂದು ರುದ್ರಾಣಿಯಾಗಿದ್ದಂತೆ ತಮ್ಮ ಷಡ್ಗುಣೈಶ್ವರ್ಯಗಳಿಂದ ಇಂದ್ರಾಣಿಯೂ ಆಗಿದ್ದರು ಅದರಿಂದ ಆ ಬಡತನದ ಬಾಳಿಗೆ ನೀಲಮ್ಮನವರು ಒಂದು ನೀಲರತ್ನ; ಬಡತನದ ಆ ಕಾಳಿರುಳಿಗೆ ಒಂದು ನೀಲಾಂಜನ; ಬಾಳುರಿಯ ಉಪಶಾಂತಿಗೆ ಅವರೊಂದು ನೀಲಾಚಲ; ಬೋಳಾದ ಆ ಬಾಳಬನಕ್ಕೆ ಅವರೊಂದು ನಿಲೋತ್ಪಲ ಆಗಿದ್ದರೆಂದರೆ ಅತಿಶಯೋಕ್ತಿಯಲ್ಲ. ಅವರೇ ಆ ಬಾಳಿನ ಸಂಪತ್ತು; ಸರ್ವಸ್ವ

ಹೀಗೆ ಸಂಸಾರದ ಸರ್ವತೋಮುಖವಾದ ರಥ ಚಾಲನೆಗೆ ಹೆಗಲಿಕ್ಕಿ ಹೊಣೆ ಹೊತ್ತು ಪತಿಗೆ ಹಿಂದಡಿಯಿಡದೆ ಆ ಮಾತಾಯಿ ಮುನ್ನಡೆಯುತ್ತಿದ್ದಳು; ಮುನ್ನಿರೀಕ್ಷಣೆ ಮಾಡುತ್ತಿದ್ದಳು. ಆದರೂ ಬಡತನದ ಬಾಗಿಲನ್ನು ದಾಟಲು ಶಕ್ಯವಾಗಿರಲಿಲ್ಲ. ಧಾರ್ಮಿಕಕ್ಕೂ ದಾರಿದ್ರ್ಯಕ್ಕೂ ಅನಾದಿಯಿಂದ ಅತ್ಯಂತ ಸ್ನೇಹವಿದ್ದಂತೆ ಅವರ ಮನೆಯಲ್ಲಿ ಅವೆರಡು ಕೂಡಿ ಬಾಳಿದವು.

ಹೀಗೆ ಕೆಲವು ಕಾಲ ಕಳೆದಮೇಲೆ ಆ ಧಾರ್ಮಿಕ ದಂಪತಿಗಳ ಉದರದಲ್ಲಿ ಕ್ರಿ. ಶ. ೧೮೬೭ ಪ್ರಭವ ಸಂವತ್ಸರದಲ್ಲಿ ಶ್ರೀ ಹಾನಗಲ್ಲ ಕುಮಾರ ಪ್ರಭುಗಳು ಜನ್ಮತೊಟ್ಟರು. ವಿರಕ್ತರತ್ನ ಅವತರಿಸಿತು. ಯೋಗಿಚಂದ್ರ ಮೂಡಿತು. ಸಮಾಜಸೂರ್ಯೋದಯವಾಯಿತು.

ಮುಂದೆ ಕುಮಾರಸ್ವಾಮಿಯಾಗಲಿರುವ ಈ ಕುವರನು ಸ್ವಾಮಿ ವಿವೇಕಾನಂದರಿಗೆ ಮೂರು ನಾಲ್ಕು ವರುಷ ಚಿಕ್ಕವನು. ಸಮಾಜದ ನಾಡಿನ ವಿವೇಕಾನಂದನಂತಿದ್ದನು. ಅದೇ ನಿಲುವು. ಅದೇ ತೇಜಸ್ಸು. ಆದರೂ ಆ ವೀರವೃತ್ತಿಯಿರಲಿಲ್ಲ; ಸಾಧು ಸಂಪತ್ತಿಯಿತ್ತು. ಆ ಕಿಡಿನುಡಿಗಳಿಲ್ಲದಿದ್ದರು ವಿಚಾರ ಪರಿಪೂರ್ಣ ಉದಾತ್ತ ಉಪದೇಶದಿಂದ ಜನಾಂಗವನ್ನು ಚೇತರಿಸಿಕೊಳ್ಳುವಂತೆ ಮಾಡುವ ಚೈತನ್ಯವಿತ್ತು. ಹೊಸ ಕಾರ್ಯಕ್ಷೇತ್ರಕ್ಕೆ ಹೆಜ್ಜೆಯಿಕ್ಕುವಂತೆ ಮಾಡುವ ಅಪ್ರತಿಮ ಪ್ರತಿಭೆಯಿತ್ತು. ಧ್ಯೇಯವೊಂದೇ ಕ್ಷೇತ್ರ ಚಿಕ್ಕದು. ಮಾರ್ಗವೊಂದೇ ಪರಿಣಾಮ ಫಲಿತಾಂಶಗಳು ಬೇರೆ. ಕಾಲವೊಂದೇ ಪ್ರಾಂತ ಬೇರೆ, ಅದು ಭಾರತದ ಬೆಳಕು. ಇದು ಕನ್ನಡದ ಕಾಂತಿ. ಇಂತಹ ಕಾರಣಿಕ ಶಿಶುವನ್ನು ಹೆತ್ತ ತಾಯಿತಂದೆಗಳು ಎಂತಹ ಪುಣ್ಯಶಾಲಿಗಳು ! ಇಂತಹ ಕಾರಣಿಕ ಪುರುಷನನ್ನು ಪಡೆದ ನಾಡು ಸಮಾಜಗಳು ಎಂತಹ ಭಾಗ್ಯಶಾಲಿಗಳು ! !

ಈ ಕಾರಣಿಕ ಶಿಶುವಿನ ಉದಂತ ಉದಯದ ಕಾರಣಗಳನ್ನಿಲ್ಲಿ ಹೇಳದೆ ಬಿಡುವಂತಿಲ್ಲ. ಒಂದು ದಿನ ನಿಶೀಥ ಸಮಯ. ತಾಯಿ ನೀಲಮ್ಮನವರು ಪವಡಿಸಿ ನಿದ್ದೆಹೋಗಿದ್ದಾರೆ. ಆ ಸಮಯದಲ್ಲಿ ಒಂದು ಸ್ವಪ್ನ ಬಿದ್ದಿದೆ. ಜಂಗಮವೇಷಧಾರಿಯಾದ ಒಬ್ಬ ತಾಪಸಿಯು ದರ್ಶನ ಕೊಟ್ಟಿದ್ದಾನೆ. ಜಂಗಮ ಭಕ್ತೆಯಾದ ನೀಲಮ್ಮ ತಾಯಿಯು ನಯಭಯದಿಂದ ನಮಿಸಿದ್ದಾಳೆ. ತಾಪಸಿಯು ತನ್ನ ಕೈಯಲ್ಲಿದ್ದ ಸುರಸುಮವನ್ನು ಆಶೀರ್ವದಿಸಿ ಜಗನ್ಮಾತೆ, ನಾವು ಆಶೀರ್ವದಿಸಿದ ಕುಸುಮಕ್ಕೆ ಬದಲು ನಮಗೊಬ್ಬ ಸುಕುಮಾರನನ್ನು ಕೊಡು ಇದೇ ನಾವು ನಿನ್ನಲ್ಲಿ ಬೇಡಬಂದ ಭಿಕ್ಷೆ ಎಂದು ಹೇಳಲು, ಅದಕ್ಕೆ ತಾಯಿಗಳು ಆಗಲಿ ಮಹಾತ್ಮಾ, ತಮ್ಮ ಆಶೀರ್ವಾದದಿಂದ ಇನ್ನೊಬ್ಬ ಮಗನು ಹುಟ್ಟುವ ಭಾಗ್ಯವೊದಗಿದಲ್ಲಿ ಅಗತ್ಯವಾಗಿ ಅರ್ಪಿಸುತ್ತೇನೆಂದು ಮಾತುಕೊಟ್ಟಳಂತೆ ! ಬಂದು ಬೇಡಿದ ತಾಪಸಿಯು ಯಾರೆನ್ನುವಿರಾ ? ಸಮಾಜದ ಜನತಾ ಜನಾರ್ದನನೇ ಆ ವೇಷದಲ್ಲಿ ಬಂದು ಬೇಡಿದನೆಂಬುದೇ ನೂರು ಪಾಲಿಗೂ ನಿಜ. ಕುಮಾರನು ಮುಂದೆ ಸಮಾಜ ಕುಮಾರನಾಗಿ ಬಾಳಲಿಲ್ಲವೆ ? ಇದಕ್ಕಿಂತಲು ಬೇರೆ ನಿದರ್ಶನ ಬೇಕೆ ?

ಇನ್ನೊಂದು ದಿನ ತವರೂರಾದ ಲಿಂಗದಹಳ್ಳಿಯ ಬಳಿಯಲ್ಲಿರುವ ನಂದೀಹಳ್ಳಿಯಲ್ಲಿ ಜರಗುವ ಬಸವೇಶ್ವರನ ಯಾತ್ರೆಗೆ ನೀಲಮ್ಮನವರು ಹೋಗಿದ್ದರು. ನಂದೀಶ್ವರನ ರಥೋತ್ಸವವು ನಡೆಯುತ್ತಿತ್ತು. ಅಲಂಕರಿಸಿದ ಆ ತೇರನ್ನು ನೋಡಿ ನಲಿಯಲು ಅದರ ಬಳಿಗೆಹೋಗಿ ನೀಲಮ್ಮನವರು ನಿಂತಿದ್ದರು. ಯಾರೋ ತೂರಿದ ಖರ್ಜೂರವೊಂದು ಅನಿರೀಕ್ಷಿತವಾಗಿ ನೀಲಮ್ಮ ತಾಯಿಯ ಉಡಿಯ ಮಡಿತೆಯಲ್ಲಿ ಬಂದು ಬಿತ್ತು. ಅದನ್ನು ಕಂಡು ಭಕ್ತಿಭರಿತರಾದ ತಾಯಿಯವರು ಇದೂ ಒಂದು ದೇವರ ಕರುಣೆಯೆಂದು ಕೈಗೆ ತೆಗೆದುಕೊಂಡು ಕಣ್ಣುಗಳಿಗೊತ್ತಿಕೊಂಡು ಮನೆಗೆ ಕೊಂಡೊಯ್ದರು. ಸ್ನಾನ ಶಿವಪೂಜೆಗಳನ್ನು ಆಗುಮಾಡಿಕೊಂಡು ತಂದ ಪ್ರಸಾದವನ್ನು ಪ್ರಸನ್ನಚಿತ್ತದಿಂದ ಲಿಂಗಕ್ಕರ್ಪಿಸಿ ಸ್ವೀಕರಿಸಿದರು. ಅದರ ಫಲವಾಗಿ ಗರ್ಭಧಾರಣೆಯಾಗಿ ನವಮಾಸ ತುಂಬಿ ಕಾರಣಿಕ ಕುಮಾರನು ಜನಿಸಿದನು. ಮಕ್ಕಳಿಲ್ಲದೆ ಮರಗುತ್ತಿದ್ದ ಮಾದಲಾಂಬಿಕೆಗೆ ಬಾಗೇವಾಡಿಯ ದೇವಸ್ಥಾನದಲ್ಲಿರುವ ಬಸವೇಶ್ವರನ ಪುಷ್ಪಫಲಾನುಗ್ರಹದಿಂದ ದ್ವಿತೀಯ ಶಂಭುಬಸವೇಶ್ವರನು ಜನಿಸಿದಂತೆ ನಮ್ಮ ಕಥಾನಾಯಕನು ಸಹ ಬಸವೇಶ್ವರ ಫಲಾನುಗ್ರಹದಿಂದಲೇ ಜನಿಸಿದ್ದು ಮತ್ತೊಂದು ಉದಂತ ಉದಯದ ಕುರುಹು.

ದಿನವಾವುದೋ ತಿಳಿಯದು. ಒಂದು ದಿನ ಬ್ರಾಹ್ಮೀಮುಹೂರ್ತ. ಮಗು ಜನಿಸಿದೆ. ಮನೆಯವರಿಗೆಲ್ಲ ಆನಂದ. ಮನೆಯನ್ನು ಸಾರಣೆ ಕಾರಣೆಗಳಿಂದ ಶುದ್ಧಗೊಳಿಸಿದಾರೆ. ರಂಗವಲ್ಲಿ ತಳಿರುತೋರಣಗಳಿಂದ ಅಲಂಕರಿಸಿದ್ದಾರೆ ಜನ್ಮಲಿಂಗ ಧಾರಣೆಗೆಂದು ಜಂಗಮರೊಬ್ಬರನ್ನು ಕರೆಯಲು ಹೋಗಿದ್ದರು. ಅಷ್ಟರಲ್ಲಿ ಒಬ್ಬ ಮುದುಕ ಮಹೇಶ್ವರರು ಭಿಕ್ಷಕ್ಕಾಗಿ ಮನೆಗೆ ಬಂದರು. ಕೆಲಸಮಾಡಲು ಬಂದಿದ್ದ ಒಬ್ಬ ಮುದುಕಿಯು ಸ್ವಾಮಿ ! ಮನೆಯಲ್ಲಿ ಹೆತ್ತಿರುವರು. ಈ ದಿನ ಭಿಕ್ಷ ನೀಡುವಂತಿಲ್ಲ, ಮತ್ತೊಂದು ಮನೆಗೆ ಹೋಗಿರಿ ಎಂದು ಹೇಳಿದಳು. ಅಮ್ಮಾ, ಏನು ಹೆತ್ತಿರುವರು ? ಗಂಡುಕೂಸನ್ನು. ಹಾಗಾದಮೇಲೆ ನೀನೇಕಮ್ಮ ಹೀಗೆ ಹೇಳುತ್ತೀಯೆ ! ಸುತನು ಜನಿಸಿದರೆ ಸಂತೋಷವಲ್ಲವೆ ? ಸಕ್ಕರೆ ಹಂಚುವುದಿಲ್ಲವೆ ? ದೀನದರಿದ್ರರಿಗೆ ದಾನಮಾಡುವುದಿಲ್ಲವೆ ? ಹೀಗೆ ಲೋಕರೂಢಿ

ಯಿದ್ದು ನೀನು ಒಂದು ಹಿಡಿ ಕಾಳು ನೀಡುವದಿಲ್ಲೆಂದು ಹೇಳವುದು ಧರ್ಮವೆ? ಸ್ವಾಮಿ, ನೀವು ಹೇಳುವುದೆಲ್ಲ ಸರಿಯೆ ಆದರದು ಶ್ರೀಮಂತರ ಮಾತು. ನಮ್ಮಂತಹ ಬಡವರು ಎಲ್ಲಿಂದ ಮಾಡಬೇಕು? ಮೊದಲೇ ನಮಗೆ ಮಕ್ಕಳು ಹುಟ್ಟುವುದು ಹೆಚ್ಚು. ದಾನಧರ್ಮ ಮಾಡಿದರೆ ಮತ್ತಿಷ್ಟು ಹುಟ್ಟಬಹುದಲ್ಲವೆ? – ಎಂದು ನಗೆ ನುಡಿದಳು. ಅಮ್ಮಾ, ನಿಮಗೆ ಮಕ್ಕಳು ಹೆಚ್ಚಾಗಿದ್ದರೆ ಈಗ ಹುಟ್ಟಿದ ಮಗುವನ್ನು ನಮಗೆ ಕೊಟ್ಟುಬಿಡಿರಿ. ಸ್ವಾಮಿ, ಯಾರು ಬೇಡೆನ್ನುವರು? ಅಗತ್ಯವಾಗಿ ತಗೆದು ಕೊಂಡು ಹೋಗಿರಿ. ಸಾಕುವ ಸಾಮರ್ಥ್ಯ ನಿಮಗಿದ್ದರೆ ಎಂದು ನಗೆಮಾತಿ ನಿಂದ ನುಡಿದಳು. ಆಗ ಮಹೇಶ್ವರನು ಹರ್ಷಚಿತ್ತನಾಗಿ ಹೊರಟು ಹೋದನು. ತಾಯಿಯ ಕನಸಿಗೆ ಬಂದು ಹೋಗಿದ್ದ ಆ ಜನತಾಜನಾ ರ್ದನನೆ ಮರಳಿ ಮಹೇಶ್ವರನ ರೂಪದಲ್ಲಿ ಬಂದು ಸಮಾಜದ ಶಿಶುವನ್ನು ಸಮಾಜಕ್ಕೆ ಕೊಡುವಂತೆ ಜಾಗ್ರತಾವಸ್ಥೆಯಲ್ಲಿ ಮಾತು ತೆಗೆದುಕೊಂಡು ಮರಳಿದನು. ಇದೂ ಒಂದು ಉದಾತ್ತ ಉದಯದ ಚಿಹ್ನೆಯಲ್ಲವೆ?

ಆಮೇಲೆ ಜಂಗಮರೊಬ್ಬರು ಬಂದು ಜನ್ಮಲಿಂಗಧಾರಣೆಯನ್ನು ಮಾಡಿ ಹೋಗುವರು. ಮೂರಾರು ದಿನಗಳು ಕಳೆದ ನಂತರ ಇದ್ದಕ್ಕಿದ್ದಂತೆ ಮಗು ಹಾಲು ಕುಡಿಯದೆ ಹೋಯಿತು. ತಾಯಿಗೆ ದಿಗಲಾಯಿತು ಮನೆಯ ವರಿಗೆ ಭಯವಾಯಿತು. ಎಲ್ಲರು ಮಮ್ಮಲ ಮರುಗಿದರು. ಏನಾಗಿ ದೆಯೋ ಎಂದು ಯಾರಾರನ್ನೊ ಕರೆಯಿಸಿ ತೋರಿಸಿದರು. ಒಬ್ಬೊಬ್ಬರು ಒಂದೊಂದು ಉಪಾಯವನ್ನು ಹೇಳಹತ್ತಿದರು. 'ಹಾಲಯ್ಯ' ಎಂದು ಹೆಸ ರಿಟ್ಟು ನೋಡಿದರು. ಇದುವೆ ಹುಟ್ಟುಹೆಸರಾಯಿತು. ಏನಾದರೂ ಹಸು ಮಗು ಹಾಲು ಕುಡಿಯಲಿಲ್ಲ. ಆಗ ಅವರಲ್ಲಿ ಒಬ್ಬರು ಗ್ರಾಮದೇವತೆಯ ಅಂಗಾರವನ್ನು ತಂದು ಹಚ್ಚಬೇಕೆಂದರು. ಆ ಮಾತು ಮಾತೆಯಾದ ನೀಲಮ್ಮನವರ ಕಿವಿಗೆ ಬಿದ್ದೊಡನೆಯೇ ಎದ್ದುಹೋಗಿ ಶ್ರೀ ಗುರುವಿನಿಂದ ಶುದ್ಧವಾದ ಭಸಿತವನ್ನು ತಂದು ಹಣೆಗೆ ಧರಿಸಿದರು. ಆ ಕೂಡಲೇ ಮಗುವು ಮೊಲೆಯುಂಡಿತು. ಸರ್ವರು ಸಂತೋಷಭರಿತರಾದರು. ಕಂದನ ಉಜ್ವಲಾಂತ ಉತ್ಕ್ರಮಣ ಜೀವನಕ್ಕೆ ಬೀಜಾವಾಪವಿದು.

ದಿನದಿನಕ್ಕೆ ಮಗುವಿಗೆ ಬಲಬಂದಿತು. ಪೈಕೈ ತುಂಬಿಬಂದವು. ಶುಕ್ಲಪಕ್ಷದ ಚಂದ್ರನಂತೆ ಬೆಳೆದನು. ನಗೆ ಬೆಳದಿಂಗಳ ಬೀರಿದನು. ಹನ್ನೊಂದನೆಯ ದಿನ 'ಸದಾಶಿವ' ನೆಂದು ಹೆಸರಿಟ್ಟರು. ನೆರೆಯವರ ನೇಹದ ಶಿಶುವಾಗಿ ಮನೆಯವರ ಮುದ್ದುಮಗುವಾಗಿ ದಿನಗಳೆದನು. ಎಲ್ಲರಿಗೂ ಹಾಲಿನಂತೆ ಹರ್ಷಪ್ರದನಾಗಿ ಅಂಬೆಗಾಲಿನಿಂದ ಆಟವಾಡಿದನು. ಆಡಿಸುವವರ ತೊಡೆಯ ಶಿಶುವಾಗಿ ಮುದ್ದಿಸುವವರ ಮುಂಗೈಮಗುವಾಗಿ ಎತ್ತಿಕೊಳ್ಳುವವರ ಎದೆಗೂಸಾಗಿ ತೂಗುವವರ ತೊಟ್ಟಿಲ ಕಂದನಾಗಿ ಬೆಳೆದನು. ತೊದಲ್ನುಡಿಗಳ ಕೇಳಿ ಆನಂದಿಸಿದರು. ನಗೆಮೊಗವ ಕಂಡು ನಲಿದರು. ಮೊಗದ ತೇಜವ ನೋಡಿ ಹರುಷಿಸಿದರು. ಮೃದುತನುವ ಮುಟ್ಟಿ ಸುಖಪಟ್ಟರು ಹೀಗೆ ಸಕಲರ ಸಂತಸದ ಕೇಂದ್ರವಾಗಿ ಬೆಳೆದು ಆರು ವರುಷದವನಾದನು.

ಸದಾಶಿವನಿಗೆ ಯಾವ ಆಟಗಳ ಮೇಲೆ ಪ್ರೇಮವಿಲ್ಲದಿದ್ದರು ಗೋಲಿಯಾಟ (ಗುಂಡಿನಾಟ) ದಲ್ಲಿ ಗಮನವಿತ್ತು. ಗುರಿಯಿಟ್ಟು ಹೊಡೆದರೆ ಎಷ್ಟು ದೂರದಲ್ಲಿದ್ದರೂ ತಪ್ಪುತ್ತಿರಲಿಲ್ಲ. ಗುಂಡಿನಾಟದಲ್ಲಿ ಆತನನ್ನು ಸೋಲಿಸುವ ಹುಡುಗರೇ ಇರಲಿಲ್ಲ. ಹೀಗಾಗಿ ಸದಾಶಿವನ ದೃಷ್ಟಿಯೋಗ ಈ ಆಟದಿಂದಲೇ ಪ್ರಾರಂಭವಾಯಿತು. ಸ ದಾ ಶಿ ವ ನ ಮೆಚ್ಚುಗೆಯ ಮತ್ತೊಂದಾಟವೆಂದರೆ ದೊಂಬರಾಟ. ದೊಂಬರೆಲ್ಲಿ ಬಂದಾಡಿದರು ಅಲ್ಲಿಗೆ ಹೋಗಿ ನೋಡುತ್ತಿದ್ದನು. ಅವರ ಪ್ರೈಕುಣಿತಗಳನ್ನು ಅಂತರದಲ್ಲಿ ಹಗ್ಗದ ಮೇಲೆ ಮಧ್ಯಬಿಂದುವಿನ ತೂಕವಿಡಿದು ಕೆಳಕ್ಕೆ ಬೀಳದಂತೆ ನಡೆವುದನ್ನು ನೋಡಿ ಅಚ್ಚರಿಪಡುತ್ತಿದ್ದನು. ಅದರ ಫಲವಾಗಿ ಹಠಯೋಗದತ್ತ ಆತನ ಮನಸ್ಸು ವಾಲಿತು.

ಗೋಲಿಯಾಟದಲ್ಲಿ ಗುರಿಯಿಡುವದರ ಮೂಲಕ ಕಲಿತ ದೃಷ್ಟಿಯೋಗವನ್ನು ಅಲ್ಲಿಗೆ ಕೈಬಿಡದೆ ಕೊನೆಯವರೆವಿಗೂ ಸಾಧಿಸಿ ಅದರ ಪರಿಪೂರ್ಣ ಸಿದ್ಧಿಯನ್ನು ಸಫಲತೆಯನ್ನು ಪಡೆದರು. 'ದೃಷ್ಟಿ ಶುದ್ಧಿ' ಎಂಬ ಪ್ರಕರಣದಲ್ಲಿ ಈ ವಿಷಯವನ್ನು ಓದಿ ತಿಳಿಯಬಲ್ಲಿರಿ. ಗೋಲಿಯಾಟದ ಮೇಲೆ ಶ್ರೀಗಳವರಿಗೆ ಕೊನೆಯವರೆವಿಗೂ ಮೆಚ್ಚುಗೆಯಿತ್ತು.

ದೊಂಬರಾಟಗಳನ್ನು ನೋಡಿದ ಫಲವಾಗಿ ಹಠಯೋಗ ಉದ್ಧಾರವಾಯಿತು. ಆ ವಿಷಯದಲ್ಲಿ ಶಿವಯೋಗಮಂದಿರವೆ ಸಾಕ್ಷಿ ಸಾಧಕರೆ ಪರಮ ಸಾಕ್ಷಿ. ಶಿವಯೋಗಮಂದಿರದಲ್ಲಿಯೂ ಸಹ ದೊಂಬರಾಟ ಬಂದರೆ ಬಿಡದೆ ಕರೆಯಿಸಿ ಆಡಿಸಿ ವಟುಗಳಿಗೆ ಸಾಧಕರಿಗೆ ತೋರಿಸುತ್ತಿದ್ದರು. ಪರಸ್ಪರ ಇರುವ ಆಸನ ವ್ಯತ್ಯಾಸ ಭಾವವ್ಯತ್ಯಾಸ ಫಲವ್ಯತ್ಯಾಸಗಳನ್ನು ವಿವರಿಸಿ ಹೇಳುತ್ತಿದ್ದರು.

ಹೀಗೆ ಚಿಕ್ಕವಯಸ್ಸಿನ ಆಟಗಳಲ್ಲಿಯೂ ಸಹ ಅವರ ನೋಟ ಹಿರಿದಾಗಿತ್ತು.

ಈ ಆರನೆ ವಯಸ್ಸಿನಲ್ಲಿಯೇ ಒಳ್ಳೆಯ ದಿನದಲ್ಲಿ ಅಕ್ಷರಾಭ್ಯಾಸಕ್ಕೆ ಆರಂಭವಾಯಿತು. ಊರಿನಲ್ಲಿ ಬೇರೆ ಶಾಲೆಯಿರಲಿಲ್ಲ. ಸದಾಶಿವನ ಅಜ್ಜಂದಿರಾದ ಶ್ರೀ ಕೊಟ್ರಪ್ಪಯ್ಯನವರೇ ಒಂದು ಸ್ವತಂತ್ರಶಾಲೆ (ಗಾವಠೀ ಶಾಲೆ) ಯನ್ನು ತೆರೆದಿದ್ದರು. ಅದರಲ್ಲಿಯೆ ಓದಿಗೆ ಮೊದಲಾಯಿತು. ಸದಾಶಿವನು ಕುಶಲಮತಿಯಾಗಿದ್ದನು. ಅಕ್ಷರಾಭ್ಯಾಸವನ್ನು ಆದಷ್ಟು ಬೇಗ ಮುಗಿಸಿ ಶ್ರೇಣಿಗೆ ಸೇರಿದನು. ವರ್ಗದಲ್ಲಿಯೂ ಮೊದಲಿನವನಾಗಿಯೆ ಇರುತ್ತಿದ್ದನು. ಎಲ್ಲರಿಗಿಂತಲೂ ಹೆಚ್ಚಾಗಿಯೇ ಅಂಕಗಳನ್ನು ಪಡೆಯುತ್ತಿದ್ದನು. ಪ್ರತಿವರ್ಷವೂ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತಿದ್ದನು. ಹೀಗೆ ಮೂರು ನಾಲ್ಕು ವರುಷ ಅಬಾಧಿತವಾಗಿ ಓದು ಮುಂದುವರಿಯಿತು. ಆಮೇಲೆ ಎರಡು ಹೊತ್ತು ಶಾಲೆಗೆ ಹೋಗಿ ಓದಲು ಆತಂಕವೊದಗಿತು. ಮನೆಯ ಬಡತನ, ಬಾಳಿನ ಬವಣೆ ಅದಕ್ಕೆ ಕಾರಣವಾಯಿತು.



# ಬಾಳಿನ ಬವಣೆ-ವಿದ್ಯಾಸ್ಮರಣೆ

ಮನೆಯು ಜನಗಳಿಂದ ತುಂಬಿತ್ತು ಧನಧಾನ್ಯಗಳಿಂದ ಬರಿದಾಗಿತ್ತು. ತಾತ ತಂದೆ ತಾಯಿ ಅಣ್ಣ ಅಕ್ಕ ತಮ್ಮ ತಂಗಿ ಮುಂತಾಗಿ ಮನೆಯಲ್ಲಿ ಹತ್ತು ಹನ್ನೆರಡು ಜನರಿದ್ದರು. ಸಂಪಾದನೆ ಯಾವ ಬಗೆಯಲ್ಲಿಯು ಇರಲಿಲ್ಲ. ಅಜ್ಜಂದಿರು ಓದಿಸುತ್ತಿದ್ದ ಸ್ವತಂತ್ರಶಾಲೆಯ ಫಲವಾಗಿ ಜನಗಳಿಂದ ವರ್ಷಕ್ಕೊಮ್ಮೆ ಬರುತ್ತಿದ್ದ ಅಲ್ಪಸ್ವಲ್ಪ ಪ್ರಾಪ್ತಿ. ಅದೇತಕ್ಕೂ ಸಾಲುತ್ತಿರಲಿಲ್ಲ. ಪ್ರತಿನಿತ್ಯ ಭಿಕ್ಷೆಯ ಮಾಡದೆ ವಿಧಿಯಿರಲಿಲ್ಲ. ಈ ಮಧ್ಯೆ ತಂದೆಯವರು ಹಠಾತ್ತಾಗಿ ಶಿವಾಧೀನರಾದದ್ದು ಒಂದು ತುಂಬಿಬಾರದ ಕೊರತೆ. ಕೆಲಸ ಮಾಡುವವರ ಸಂಖ್ಯೆ ಕಡಿಮೆಯಾಯಿತು. ೧೦೫ ವರ್ಷ ವಯಸ್ಸಿನ ತಾತಂದಿರು ಸಹ ಹಸುವಿಗೆ ಹುಲ್ಲನ್ನು ಕೊಯ್ದು ಇಲ್ಲವೆ ಕೆತ್ತಿ ತರುವ ಕಾಯಕ ಮಾಡಬೇಕಾಯಿತು. ಅಣ್ಣಂದಿರಾದ ಶಿವಬಸವಯ್ಯನವರು ಒಬ್ಬರೆ ತರುವ ಭಿಕ್ಷೆಯಿಂದ ಚರಿತಾರ್ಥ ಸಾಗದಂತಾಯಿತು. ಸದಾಶಿವಯ್ಯನವರು ಭಿಕ್ಷಕ್ಕೆ ಹೋಗುವ ಸರದಿ ಬಂದಿತು. ಹೋಗದಿದ್ದರೆ ವಿಧಿಯಿಲ್ಲದೆ ಹೋಯಿತು. ಒಪ್ಪೊತ್ತಿನ ಶಾಲೆಗೆ ತಿಲಾಂಜಲಿ ಬಿಡಬೇಕಾಯಿತು; ಬಿಟ್ಟಾಯಿತು. ಒಪ್ಪತ್ತಿನ ಓದು ಅವರ ಮನಸ್ಸಿಗೆ ತೃಪ್ತಿ ತರಲಿಲ್ಲ. ಅದೇ ಅವರಿಗೊಂದು ಚಿಂತೆಯಾಗಿತ್ತು; ಚಿತ್ತಚಪಲತೆಯಾಗಿತ್ತು.

ಒಂದು ದಿನ ಬೆಳಗಿನ ಜಾವ. ಎಂದಿನಂತೆ ಎದ್ದು ಮುಖ ತೊಳೆದು ವಿಭೂತಿ ಧಾರಣೆ ಮಾಡಿಕೊಂಡು ಒಂದು ಹಳ್ಳಿಗೆ ಸದಾಶಿವಯ್ಯನವರು ಭಿಕ್ಷಕ್ಕೆ ಹೋದರು. ನಾಲ್ಕಾರು ಮನೆ ಭಿಕ್ಷವಾಯಿತು ಮತ್ತೊಂದು ಮನೆಯೊಳಕ್ಕೆ ಹೋಗಲು ಮುಂದುವರಿದರು. ಅಷ್ಟರಲ್ಲಿ ಅದೇ ಮನೆಯ ಕಟ್ಟೆಯ ಮೇಲಿದ್ದ ಮುದುಕನೊಬ್ಬನು, 'ಏನ ಅಯ್ಯಪ್ಪ, ಭಿಕ್ಷೆ ಬೇಡಲು ನೀನೇನು ಮುದುಕನೆ? ಹತ್ತು ಹನ್ನೆರಡು ವರುಷದ ಸಣ್ಣ ಹುಡುಗ. ಈಗಳೆ ಈ ತಿರುಪೆಗೆ ನಿಂತರೆ ಹೇಗೆ? ಇನ್ನೂ ನೀನು ಎಷ್ಟು ದಿನ ಬದುಕಬೇಕಾಗಿದೆ? ಎಷ್ಟು ಜನ ಮಕ್ಕಳು ಮರಿಗಳನ್ನು ಹೆತ್ತು ಸಾಕಬೇಕಾಗಿದೆ? ಭಿಕ್ಷಾನ್ನದಿಂದಲೇ ಇದೆಲ್ಲ ಹೇಗೆ ಸಾಧ್ಯ? ವಿದ್ಯೆ ಕಲಿತು ಬುದ್ಧಿವಂತನಾಗದೆ ಸೋಮಾರಿಯಾಗಿ 'ಭಿಕ್ಷಾಂ ದೇಹಿ' ಎಂದು ಭಿಕ್ಷೆ ಬೇಡುವುದೆ?

ಇನ್ನೊಬ್ಬರಿಗೆ ಹೊರೆಯಾಗಿ ಬಾಳುವುದೊಂದು ಬಾಳೆ? ಬದುಕುವುದೊಂದು ಬದುಕೆ? ನೀನು ಜನಿಸದಿದ್ದರೆ ಜಗತ್ತು ಹಾಳಾಗುತಿತ್ತೆ? ಎಂದು ಮುಂತಾಗಿ ಬುದ್ಧಿವಾದದ ಬೈಗಳ ಸುರಿಸಿದನು. ಸದಾಶಿವಯ್ಯನವರ ಮೃದುವಾದ ಮನಸ್ಸಿನ ಮೇಲೆ ಆ ಮೊನಚಾದ ಮಾತುಗಳು ಚೆನ್ನಾಗಿ ನಾಟಿದವು. ತಾಳ್ಮೆಗೆಟ್ಟರು. ಅಲ್ಲಿಂದ ಮುಂದಿನ ಮನೆಗೆ ಭಿಕ್ಷಕ್ಕೆ ಹೋಗುವ ಮನಸ್ಸು ಉಳಿಯಲಿಲ್ಲ. ಮೊದಲೆ ವಿದ್ಯಾರ್ಜನೆಗಾಗಿ ತವಕಿಸುತ್ತಿದ್ದ ಮನಸ್ಸು ಮತ್ತಿಷ್ಟು ತವಕಗೊಂಡಿತು. ಹೇಗಾದರೂ ಮಾಡಿ ವಿದ್ಯಾರ್ಜನೆ ಮಾಡಬೇಕೆಂದು ಗಟ್ಟಿಗೊಂಡಿತು. ಹಾಗೆಯೇ ಊರಿಗೆ ಹಿಂದಿರುಗಿದರು. ಬರುತ್ತ ಆ ಮುದುಕನು ಆಡಿದ ಮಾತುಗಳನ್ನು ನೆನೆದು ದುಃಖ ಉಕ್ಕಿತು. ಕಣ್ಣೀರು ಮುನ್ನೀರಾಗಿ ಹರಿಯತೊಡಗಿತು. ಸಮಾಧಾನ ಮಾಡುವವ ರಾರು? ದಾರಿಯುದ್ದಕ್ಕು ಅತ್ತು ಅತ್ತು ಹೃದಯ ಭಾರವಾಯಿತು. ಬುದ್ಧಿ ಸ್ತಿಮಿತವಿಲ್ಲದಾಯಿತು. ಮನಸಿನ ಮೇಲೆ ಮೂಡಿದ ಮಾತಿನ ಗಾಯ ಮಾಣಲಿಲ್ಲ. ದುಃಖದ ಭರದಲ್ಲಿ ದಾರಿ ಸಾಗಲಿಲ್ಲ. ದಟ್ಟಡಿಯಿಟ್ಟು ನಡೆದಿದ್ದನು. ಹೊತ್ತು ಹೆಚ್ಚಾದರು ಅವನಿಗೇನು ಕಾಣಲಿಲ್ಲ. ಚಿಂತೆ ಶೋಕಗಳಲ್ಲಿ ಹೊತ್ತು ಗೊತ್ತುಗಳಿಗೆ ಸ್ಥಾನವೆಲ್ಲಿ? ಅಷ್ಟರಲ್ಲಿ ಊರು ಹತ್ತಿರಕ್ಕೆ ಬಂದಿತು. ಬೆಚ್ಚಿನೋಡಿ ಕಣ್ಣೀರು ಒರಸಿಕೊಂಡು ಬಾಗಿಲ ಬಳಿಗೆ ಬಂದನು. ತಂಗಿಯು ತಂಬಿಗೆಯಲ್ಲಿ ತಂದ ನೀರಿನಿಂದ ಕಾಲುತೊಳೆದು ಒಳಗೆ ಹೋದನು. ಅಕ್ಕನು ಓಡಿಬಂದು ಜೋಳಿಗೆಯನ್ನು ನೋಡಿದಳು. ದಿನಕ್ಕಿಂತಲು ಹಿಟ್ಟು ತೀರ ತುಸು ಇದ್ದಿತು. ಅವ್ವಾ, ತಮ್ಮನಿಂದು ಹಿಟ್ಟು ತುಸು ತಂದಿದಾನೆ ಎಂದು ಕೂಗಿ ಹೇಳಿದಳು ಆ ಮಾತು ಕೇಳಿ ಅಲ್ಲಿಯೇ ಇದ್ದ ಅಣ್ಣನು, ಅಂಗಡಿಗೆ ಹಾಕಿ ಫಲಾರ (ಫಲಾಹಾರ) ತಿಂದಿರಬೇಕು ಎಂದು ದೂರು ಹೇಳಿದನು.

ತಾಯಿ ನೀಲಾಂಬೆ ಜಳಕ ಮಾಡಿ ಮಡಿಯುಟ್ಟು ಅಡುಗೆಯ ಮನೆಯ ತನ್ನ ಕೆಲಸದಲ್ಲಿ ತೊಡಗಿದ್ದಳು. ಮಕ್ಕಳ ಮಾತುಗಳ ಕೇಳಿ ಮನಸ್ಸು ತಾಳದೆ ಬಂದು ನೋಡಿದಳು. ಅವರು ಹೇಳಿದಂತೆ ನಿಜವಾಗಿಯೂ ಎಂದಿಗಿಂತ ತೀರ ಕಡಿಮೆಯಾಗಿತ್ತು. ಮಗನ ಮೇಲೆ ತಾಯಿಗೆ ತುಂಬಾ ಮಮತೆಯಿತ್ತಾದರು ಸಂಸಾರ ನಿರ್ವಹಣ ದೃಷ್ಟಿಯಿಂದ ತುಂಬ

ಸಿಟ್ಟಿಗೆದ್ದಳು ; ಸಾವಿರಾಡಿದಳು. ಗಾಯದ ಮೇಲೆ ಕಾಯ್ದ ಕಂಬಿಯು ಕೇಸಿದಂತಾಯಿತು. ಮೊದಲೆ ಮುದುಕನ ಬಿರಿನುಡಿಗಳಿಂದ ಬೆಂದ ಹೃದಯ ಮತ್ತಿಷ್ಟು ನೊಂದಿತು. ಅಕ್ಕನ ಚಾಡಿ, ಅಣ್ಣನ ಅಪವಾದ, ಅವ್ವನ ಆರ್ಭಟ ಯಾವುದನ್ನು ಸಹಿಸಬೇಕು. ಏನೆಂದು ಸಮಾಧಾನ ಹೇಳಬೇಕು. ಹೇಳಬೇಕೆಂದಿದ್ದರೆ ಬೇಕಾದಷ್ಟಿತ್ತು. ಹೇಳುವ ಮನಸ್ಸು ಮಾಡಲಿಲ್ಲ. ಇದಿರಾಡಲು ಅವನಿಗೆ ಇಷ್ಟವಿಲ್ಲದೆ ಹೋಯಿತು. ಕಷ್ಟವೊದಗಿದಷ್ಟು ಅವನ ಮನ ಪುಟಕ್ಕಿಟ್ಟ ಚಿನ್ನದಂತೆ ಚೊಕ್ಕಟವಾಗತೊಡಗಿತ್ತು. ಅಲ್ಲದೆ ಬಾಗಿಲ ಬಳಿ ತಂಗಿ ನೀರು ತಂದುಕೊಟ್ಟಾಗ ಅವನು ಬರಿ ಕಾಲುಗಳನ್ನೆ ತೊಳೆದಿರಲಿಲ್ಲ. ಜೊತೆಗೆ ಕಾಮಕ್ರೋಧಗಳನ್ನೂ ತೊಳೆದಿದ್ದನು. ತೊಡೆದು ಹಾಕಿದ್ದನು. ಅದರಿಂದ ಅವನ ಮುಚ್ಚಿದ ತುಟಿ ಎರಡಾಗಲಿಲ್ಲ ಊಟದ ಆಶೆ ಉಳಿಯಲಿಲ್ಲ. ಏನೂ ತೋಚದಾಯಿತು. ಯಾವುದೂ ಬೇಡವಾಯಿತು. ನಹಿಸದ ಸಂಕಟದಿಂದ ಮರುಮಾತಾಡದೆ ಮನೆಯ ಒಂದು ಮೂಲೆಯಲ್ಲಿ ಹೋಗಿ ಕುಳಿತನು. ಅವನು ಕುಳಿತರೂ ಅವನ ಮನಸ್ಸು ಸುಮ್ಮನಾಗಲಿಲ್ಲ. ಅದು ಚಿಂತೆಗೊಳಗಾಯಿತು. ಇನ್ನು ನಾನು ಇಲ್ಲಿ ಇರುವುದರಿಂದ ಹೀಗೆ ಕಾಲಕಳೆವುದರಿಂದ ಯಾವ ಪ್ರಯೋಜನವಿಲ್ಲ. ಮಾನ ಮರ್ಯಾದೆ ಮತ್ತೂ ಇಲ್ಲ ಎಲ್ಲಿಗಾದರು ಹೋಗಿ ಯಾರ ಆಶ್ರಯವನ್ನಾದರೂ ಬೇಡಿ ಓದಿಕೊಳ್ಳಬೇಕು. ಆದರೆ ಎಲ್ಲಿಗೆ ಹೋಗುವುದು? ಯಾರನ್ನಾಶ್ರಯಿಸುವುದು ? ಎಂದು ಎಷ್ಟೋ ಬಗೆಯಾಗಿ ಯೋಚಿಸತೊಡಗಿತ್ತು. ಅಷ್ಟರಲ್ಲಿ ಅಣ್ಣನ ಕೂಗು. ಹೀಗೆ ಸುಮ್ಮನೆ ಮೂಗೆ ಹಿಡಿದು ಕುಳಿತರೇನು ? ಮನೆಗೆಲಸ ಮಾಡುವವರಾರು ? ದನದ ಮನೆ ಕಸಗೂಡಿಸಿಲ್ಲ. ಮೈಲಿಗೆಯ ಬಟ್ಟೆಗಳ ತೊಳೆದಿಲ್ಲ. ಇವುಗಳಲ್ಲಿ ಯಾವುದನ್ನಾದರೂ ಮಾಡ ಏಳು ! ಎನ್ನಲು ಸದಾಶಿವಯ್ಯನು ಬಟ್ಟೆತೊಳೆವುದನ್ನೆ ಒಪ್ಪಿಕೊಂಡು ಬಟ್ಟೆಗಳೊಡನೆ ಬಾವಿಯಿದ್ದಲ್ಲಿಗೆ ಬಂದು ಬಟ್ಟೆಗಳನ್ನೆಲ್ಲ ಹಸನಾಗಿ ತೊಳೆದನು. ಆದರೆ ಮರಳಿ ಮನೆಗೆ ಹೋಗಲು ಮನಸ್ಸಿಲ್ಲ. ಬಡತನದ ಬಾಳಿನಲ್ಲಿ ಇಷ್ಟು ದಿನ ತಮ್ಮ ಮನಸ್ಸಿಗೆ ವಿರೋಧವಾಗಿ ಅದೆಷ್ಟೋ ತಗ್ಗಿ ನಡೆದನು ; ಅದೆಷ್ಟೋ ಕುಗ್ಗಿ ನಡೆದನು. ಇನ್ನು ಹಾಗೆ ಇರಲು ಸಾಧ್ಯವಿರಲಿಲ್ಲ. ವಿದ್ಯಾಭ್ಯಾಸದ ಕಡೆಗೆ ಅವನ ಮನಸ್ಸು ತೀವ್ರವಾಗಿ ಹರಿಯಿತು.

ಬೆಳಗಿನಿಂದ ಊಟವಿಲ್ಲದಿದ್ದರು ಮನೆಗೆ ಹೋಗುವ ಮನಸ್ಸು ಮಾಡಲಿಲ್ಲ. ಬಟ್ಟೆಗಳನ್ನು ಮನೆಗೆ ಕಳಿಸುವ ಬಗೆ ಹೇಗೆ ? ಎಂದು ಯೋಚಿಸುತ್ತಿರು ವಾಗ ನೆರೆಮನೆಯವರೊಬ್ಬರು ನೀರಿಗೆಂದು ಅಲ್ಲಿಗೆ ಬಂದರು. ಅವರನ್ನು ನೋಡಿ ಮನ ಹಿಗ್ಗಿತು. ಉಂಡಷ್ಟು ಸಂತಸವಾಯಿತು. ಮನೆಯಲ್ಲಿ ಕೊಡಹೇಳಿ ತೊಳೆದ ಬಟ್ಟೆಗಳನ್ನು ಅವರ ಕೈಯಲ್ಲಿ ಕೊಟ್ಟನು. ನನ್ನನ್ನು ಕೇಳಿದರೆ ಹಳ್ಳಿಗೆ ಹೋದನೆಂದು ಹೇಳಿ ಎಂದು ತಿಳಿಸಿದನು. ಹಾಗೆಯೆ ಹೊರಟುಬಿಟ್ಟನು. ಸ್ವಲ್ಪ ದೂರ ಹೋದಮೇಲೆ ಹಸಿದಿದ್ದರೂ ಹಂಗಿಲ್ಲದೆ ನಿಟ್ಟೋಟದಿಂದ ಓಡಿದನು. ಏಕೆಂದರೆ ಯಾರಾದರು ಬಂದು ಹಿಂದಕ್ಕೆ ಕರೆದೊಯ್ದಾರೆಂಬ ಭಯ ಅವನಿಗೆ. ಅದರಿಂದಾಗಿ ಬೇಗ ಅವನು ಕಜ್ಜರಿ ಗ್ರಾಮವನ್ನು ಸೇರಿದನು ; ಕೊಂಚ ಮನ ಸ್ಥಿರಣೆಗೊಂಡಿತು.

ಆಗ ಆ ಊರಿನ ಶಾಲೆ ಉತ್ತಮ ರೀತಿಯಲ್ಲಿದ್ದು ಹೆಸರುವಾಸಿಯಾ ಗಿತ್ತು. ಅದರಿಂದ ಅಲ್ಲಿ ತನ್ನ ಹೆಚ್ಚಿನ ಅಭ್ಯಾಸ ಆಗುತ್ತದೆಂದು ಆಲೋ ಚಿಸಿ ಅಲ್ಲಿಗೆ ಬಂದಾಯಿತು. ಆದರೆ ಅವನ ಬಳಿ ಬಿಡಿಗಾಸು ಸಹ ಇರಲಿಲ್ಲ. ಅಷ್ಟು ಅಕಿಂಚನನಾಗಿದ್ದನು. ಆಶ್ರಯದ ಮಾತು ಮುಂದೆ ಬಂದಿತು. ಊರಿನಲ್ಲಿ ಯಾರ ಪರಿಚಯವೂ ಇರಲಿಲ್ಲ ಎಲ್ಲಿ ಯಾರ ಮನೆಗೆ ಹೋಗಿ ಕೇಳುವುದು? ಸಾಧ್ಯವಾಗದೆ ಹೋಯಿತು. ಹಾಗೆಯೇ ಅದೇ ಊರಿನ ಅರಳಿಕಟ್ಟೆಯ ಮೇಲೆ ಕುಳಿತು ಬಿಟ್ಟನು. ಬೆಳಗಿನಿಂದ ಊಟವಿಲ್ಲ. ಮೈಮೇಲೆ ಸರಿಯಾದ ಬಟ್ಟೆಯಿಲ್ಲ. ಇತ್ತ ಹಸುವಿನ ಬಾಧೆ, ಅತ್ತ ಮನ ಸ್ಸಿನ ವೇಧೆ, ಎರಡನ್ನೂ ಸಹಿಸದೆ ಹೋದನು. ಕಣ್ಣುಗಳಲ್ಲಿ ನೀರೂರಿತು. ಭವಿಷ್ಯತ್ತಿನ ಕಾರ್ಗತ್ತಲೆಯ ಕಪ್ಪುಕಲೆ ಕಂದಿದ ಮುಖದ ಮೇಲೆ ನೆಲೆ ನಿಂತಿತು. ಆ ಸಮಯಕ್ಕೆ ಅದೇ ಊರಿನ ಹಿರಿಯ ಮಠದ ರಾಚಯ್ಯನವ ರೆಂಬವರು ಅಲ್ಲಿಗೆ ಆಕಸ್ಮಿಕವಾಗಿ ಬಂದರು. ಅರಳಿಕಟ್ಟೆಯಲ್ಲಿ ಕುಳಿತು ಅಳುತ್ತಿರುವ ಅಣುಗನ ಮೇಲೆ ಅವರ ದೃಷ್ಟಿ ಹರಿಯಿತು. ಪಡುವ ಅವಸ್ಥೆ ಯನ್ನು ನೋಡಿ ಆದ್ಯಂತವನ್ನು ಕೇಳಿ ಮನಮರುಗಿ, ಕರಳುಕರಗಿ ಮಠಕ್ಕೆ ಕರೆದೊಯ್ದರು. ಹಸಿದ ಹೊಟ್ಟೆಗೆ ಊಟ ದೊರೆಯಿತು. ಓದಲು ಊರಿನ ವರಿಂದ ಸಹಾಯಮಾಡಿಸಿಕೊಡುವೆನೆಂಬ ಅಭಯವೂ ಅವರಿಂದ ದೊರೆ

ಯಿತು. ಕೇಳಿ ಮನಸ್ಸಿಗೆ ನೆಮ್ಮದಿಯಾಯಿತು. ಆ ದಿನ ಸುಖವಾಗಿ ನಿದ್ದೆಹೋದನು.

ಮರುದಿನ ರಾಚಯ್ಯನವರು ಮಾತುಕೊಟ್ಟಂತೆ ಊರಿನಲ್ಲಿ ಹೋಗಿ ಇದ್ದ ಸಂಗತಿಯನ್ನು ಜನರಿಗೆ ಹೇಳಿ ವಿದ್ಯಾಸಹಾಯವೆಂದು ಕೇಳಿ ಹಣ ಶೇಖರಿಸಿದರು. ಬಂದ ಹಣದಲ್ಲಿ ಬಟ್ಟೆ ಓದುವ ಪುಸ್ತಕ ಹಲಗೆ ಬಳಪ ಮುಂತಾದ ಸಾಮಾನುಗಳನ್ನು ತಂದು ಸದಾಶಿವಯ್ಯನವರಿಗೆ ಕೊಟ್ಟು ಶಾಲೆಗೆ ಸೇರಿಸಿದರು. ಅವನ ಧೈರ್ಯದ ಸಾಹಸಕ್ಕೆ ಇಂದು ದಾರಿ ಸಿಕ್ಕಿತು. ಮುಖದ ಮೇಲೆ ಕೃತಜ್ಞತೆಯ ಚಿನ್ಹೆ ಚಿಮ್ಮಿತು ಸದಾಶಿವಯ್ಯನವರ ಸಂತೋಷಕ್ಕೆ ಪಾರವೆ ಇಲ್ಲದಂತಾಯಿತು.

ಅನಿರೀಕ್ಷಿತವಾದ ಈ ಸಹಾಯದಿಂದ ಅವರ ಓದುವ ಉತ್ಸಾಹ ಇಮ್ಮಡಿ ಮುಮ್ಮಡಿಯಾಗಿ ಹೆಮ್ಮಿತು. ಮನಸಿಟ್ಟು ಮತಿಗೊಟ್ಟು ಓದತೊಡಗಿದರು. ಒಂದರಗಳಿಗೆಯನ್ನು ಸಹ ವ್ಯರ್ಥ ಕಳೆಯುತ್ತಿರಲಿಲ್ಲ. ಪಾಠ ಬರುವವರಿವಿಗು ಊಟ ಮಾಡುತ್ತಿರಲಿಲ್ಲ, ಆಟವಾಡುತ್ತಿರಲಿಲ್ಲ. ನೆರವನ್ನು ನಿರರ್ಥಕಮಾಡಿಕೊಳ್ಳಲಿಲ್ಲ. ತನ್ನ ಓದಾಯ್ತು, ತಾನಾಯ್ತು. ಈ ರೀತಿ ಒಮ್ಮನದಿಂದ ಓದಿ ಕೆಲವು ದಿನಗಳಲ್ಲಿಯೆ ಶಾಲೆಯ ಜಾಣ ವಿದ್ಯಾರ್ಥಿಯಾದರು. ಶಿಕ್ಷಕರ ಮೆಚ್ಚುಗೆಗೆ ಪಾತ್ರರಾದರು. ಸದ್ಗುಗಳಿಂದ ಮಠದವರಿಗೆ ಮುದ್ದು ಹುಡುಗರಾದರು.

ಈ ಬಗೆಯಾಗಿ ನಾಲ್ಕುವರ್ಷ ಓದಿದರು ಏಳನೆಯ ವರ್ಗದ ಅಭ್ಯಾಸವೂ ಕೊನೆಗಂಡಿತು, ಉತ್ತಮವಾಗಿ ಕೊನೆಗಂಡಿತು ಈ ವರ್ಗದ ಪರೀಕ್ಷೆಗೆ ಮುಲ್ಕಿಪರೀಕ್ಷೆ ಎಂದು ಹೆಸರು. ಇದು ಜಿಲ್ಲೆಯ ಕೇಂದ್ರಸ್ಥಳದಲ್ಲಿಯೆ ಜರಗುತ್ತಿತ್ತು. ಅಲ್ಲಿಗೆ ಹೋಗಿ ಪರೀಕ್ಷೆಗೆ ಕುಳಿತುಕೊಳ್ಳಲು ಸದಾಶಿವಯ್ಯನವರು ಮನಸ್ಸು ಮಾಡಿದರು. ಶಿಕ್ಷಕರ ಅನುಮತಿಯನ್ನು ಪಡೆದರು. ಅಸುಂಡಿ ಶಿವನಗೌಡನೆಂಬ ಸಹಾಧ್ಯಾಯಿಯೊಡನೆ ಕಾಲುನಡಿಗೆಯಿಂದ ಧಾರವಾಡಕ್ಕೆ ಬಂದರು. ಪರೀಕ್ಷೆ ಕಟ್ಟಿ ಆಯಿತು, ಕೊಟ್ಟು ಆಯಿತು. ಆದರೇನು ? ಪರೀಕ್ಷೆಯಲ್ಲಿ ಮಾತ್ರ ಉತ್ತೀರ್ಣರಾಗಲಿಲ್ಲ. ಉದ್ದೇಶವೆ ಬೇರೆಯಾಯಿತು. ಆದದ್ದೆ ಬೇರೆಯಾಯಿತು. ಮಹಾ

ತ್ಮರ ಚರಿತೆಯು ಮರ್ತ್ಯಕ್ಕೆ ವಿಲಕ್ಷಣವಾದುದು, ಮನುಷ್ಯರಿಗೆ ಮೀರಿದುದು-ಎಂಬುದನ್ನು ನಾವಿಲ್ಲಿ ಒಪ್ಪಿಕೊಳ್ಳಲೇ ಬೇಕು. ಇಲ್ಲವಾದರೆ ಎಲ್ಲರಿಗಿಂತಲು ಬುದ್ಧಿವಂತರಾದವರು ಪರೀಕ್ಷೆಯಲ್ಲಿ ಉತ್ತೀರ್ಣರಾಗದಿರುವುದೆಂದರೇನು ? ಮನೋನಿಶ್ಚಯಕ್ಕೆ ವಿಪರೀತವಾದ ಫಲಿತಾಂಶ ಸಿಕ್ಕುವುದೆಂದರೇನು ?

ಸದಾಶಿವಯ್ಯನವರ ಮನಸ್ಸು ಇದರಿಂದಾಗಿ ವಿಶೇಷ ವ್ಯಥೆಗೊಳಗಾಯಿತು. ಕಚೇರಿಯಲ್ಲಿ ಯಾರಿಗೂ ಮುಖ ತೋರದೆ ಮರೆಯಲ್ಲಿಯೆ ಇದ್ದು ಹೋದರು. ಅನ್ನದ ಆಶೆ ಹರಿದರು. ಆನೆಯೆತ್ತರದ ಆಲೋಚನೆಗಳಿಗೆ ಆಗರವಾದರು. ಸ್ನೇಹಿತರು ಶಿಕ್ಷಕರು ಏನೇನೋ ಸಮಾಧಾನ ಹೇಳಿದರು. ಆದರೆ ಒಂದೂ ಪ್ರಯೋಜನವಾಗಲಿಲ್ಲ. ಮರಳಿ ಪ್ರಯತ್ನಮಾಡಿ ನೋಡೆಂದರು. ಮನಸ್ಸು ಮಾಡಲಿಲ್ಲ. ಪೂರ್ತಿ ಮನಃಪರಿವರ್ತನವಾಗಿ ಹೋಗಿತ್ತು. ಎಲ್ಲರ ಹೇಳಿಕೆಗಳಿಗೂ ಅವರ ಆಲೋಚನೆಗೂ ನೆಲ ಮುಗಿಲ ಅಂತರವಾಯಿತು. ಒಂದಕ್ಕೊಂದು ಮೇಳೈಸುವ ಬಗೆ ಹೇಗೆ ? ಸಾಧ್ಯವಾಗಲಿಲ್ಲ. ಇನ್ನು ಅಲ್ಲಿರಲು ಅವರ ಮನಸ್ಸು ಒಪ್ಪಲಿಲ್ಲ. ಹಾಗೆಯೇ ಹೊರಟು ಅವರ ತಾಯಿಯ ತವರುಮನೆಯಿದ್ದ ಲಿಂಗದ ಹಳ್ಳಿಗೆ ಬಂದರು. ತಾಯಿಯ ತವರುಮನೆಯಲ್ಲಿ ನಿಂತರು.



# ವಿದ್ಯಾಶಿಕ್ಷಣ, ವೇದಾಂತ ನಿರೀಕ್ಷಣ

ಊಟಮಾಡಿಕೊಂಡು ಸುಮ್ಮನೆ ಕುಳಿತುಕೊಳ್ಳುವ ಪ್ರವೃತ್ತಿ ಅವರದಾಗಿರಲಿಲ್ಲ. ಅವರ ಅಜ್ಜಂದಿರವರ ಕಾಯಕಕ್ಕೆ ಕೈ ಹಾಕಿದರು. ಅದೇ ಲಿಂಗದಹಳ್ಳಿಯಲ್ಲಿಯೇ ಒಂದು ಸ್ವತಂತ್ರ ಪ್ರಾಥಮಿಕಶಾಲೆಯನ್ನು ಪ್ರಾರಂಭಮಾಡಿದರು. ಅನೇಕ ಬಾಲಕರು ಕೂಡಿದರು. ವಿದ್ಯಾಶಿಕ್ಷಣವು ಆರಂಭವಾಯಿತು.

ಇಷ್ಟರಿಂದಲೆ ಅವರ ಮನಸ್ಸು ತೃಪ್ತಿಯಾಗಲಿಲ್ಲ. ತಮ್ಮ ಆತ್ಮಶಿಕ್ಷಣವೂ ಆಗಬೇಕೆಂದು ಆಲೋಚಿಸಿದರು. ಅದಕ್ಕೆ ತಕ್ಕಂತೆ ಅದೇ ಊರಿನಲ್ಲಿ ವೇದಾಂತವಿದ್ಯೆಯಲ್ಲಿ ಬಲ್ಲಿದರಾದ ಸಮಾಳದ ಬಸವಪ್ಪಯ್ಯನವರೆಂಬುವರಿದ್ದರು. ಅವರಲ್ಲಿಗೆ ಹೋಗಿ ತಮ್ಮ ಕೋರಿಕೆಯನ್ನು ಅರಿಕೆಮಾಡಿದರು. ಅವರು ಸಂತೋಷದಿಂದ ಒಪ್ಪಿದರು. ಅದರಿಂದಾಗಿ ಅವರಲ್ಲಿ ಕನ್ನಡ ಕಾವ್ಯಗಳನ್ನು ನಿಜಗುಣರ ಕನ್ನಡ ಷಟ್ ಶಾಸ್ತ್ರಗಳನ್ನು ನೋಡಲಾರಂಭಿಸಿದರು.

ವೇದಾಂತದ ರುಚಿ ಅವರ ಮನಸ್ಸಿಗೆ ಹಿಡಿಯಿತು. ಸಿದ್ಧಾಂತದ ಅರಿವು ಅವರ ಕಣ್ಣನ್ನು ತೆರೆಯಿಸಿತು. ಇಷ್ಟ- ಪ್ರಾಣ- ಭಾವಲಿಂಗಗಳ ಬಣ್ಣನೆಯ 'ಕೈವಲ್ಯ ಪದ್ಧತಿ'ಯ ಪದ್ಯಗಳು ಅವರ ಬಾಳನ್ನು ಭಾವರಾಜ್ಯಕ್ಕೇರಿಸಿದವು. ಭಕ್ತಿಪಂಥಕ್ಕೆ ಹಚ್ಚಿತು. ಲಿಂಗಪೂಜೆಯಲ್ಲಿ ಅವರಿಗೆ ಅಮಿತವಾದ ಪ್ರೇಮ ಹುಟ್ಟಿತು. ಒಮ್ಮೊಮ್ಮೆ ಆ ಪೂಜಾವೈಭವದಲ್ಲಿ ಆನಂದ ಪರವಶತೆಯಲ್ಲಿ ಬೆರೆದು ಬಾಹ್ಯವ ಮರೆದು ಶಾಲೆಗೆ ಹೋಗುವುದನ್ನೆ ಮರೆಯುತ್ತಿದ್ದರು, ವೇಳೆಯನ್ನೆ ಮೀರುತ್ತಿದ್ದರು. ನಿಜಗುಣರ ಗ್ರಂಥಗಳ ಅಭ್ಯಾಸದಲ್ಲಿ ಅವರಿಗೆ ದಿನೇ ದಿನೇ ಅಭಿರುಚಿ ಹೆಚ್ಚಿತು. ಆ ಓದಿನ ಮುಂದೆ ಅವರಿಗೆ ಮತ್ತೊಂದು ಬೇಕಾಗದಾಯಿತು. ಇದರಿಂದಾಗಿ ಮೆಲ್ಲಮೆಲ್ಲನೆ ಅವರ ಮನಸ್ಸು ವೈರಾಗ್ಯದ ಒಂದೊಂದೆ ಹಂತಗಳನ್ನು ಏರಹತ್ತಿತು. ಬರಬರುತ್ತ ಸಂಸಾರದ ಕಹಿರಸವು ಅವರ ಅನುಭವಕ್ಕೆ ಬರಹತ್ತಿತು. ದಿನೇ ದಿನೇ ಶರೀರದ ಅಸಾರತೆ ಅಶಾಶ್ವತತೆ ಅವರಿಗೆ ವೇದ್ಯವಾಗತೊಡಗಿತು.



# ಮಾತೆಯ ಆಗಮನ, ಮದುವೆಯ ಆಲೋಚನೆ

ಮಗನು ಒಂದು ಲಿಂಗದಹಳ್ಳಿಯಲ್ಲಿರುವ ಸಮಾಚಾರವು ತಾಯಿಗೆ ತಿಳಿಯಿತು. ಮಗನನ್ನು ನೋಡದೆ ನಾಲ್ಕೈದು ವರ್ಷಗಳಾಗಿದ್ದವು. ಮಗನಿಗೆ ಮದುವೆಯ ವಯಸ್ಸು ಪ್ರಾಪ್ತವಾಗಿತ್ತು. ಇವನ್ನೆಲ್ಲ ನೆನೆದು ತಾಯಿ ನೀಲಮ್ಮನವರು ತಮ್ಮ ತವರೂರಾದ ಲಿಂಗದಹಳ್ಳಿಗೆ ಉತ್ಸುಕತೆಯಿಂದ ಬಂದರು. ಓಡಿ ಬಂದ ಮಗನನ್ನು ನೋಡಿ ನಲಿದರು. ಮಗನ ಧೈರ್ಯ ಸಾಹಸಗಳನ್ನು ಮನಸಾರೆ ಕೊಂಡಾಡಿದರು. 'ಮನೆಯಿಂದ ಕುರುಡು ಕಾಸನ್ನು ಅಪೇಕ್ಷಿಸದೆ ನಿನ್ನ ಕುಶಲತೆಯಿಂದ ಅನ್ಯರ ಮನಕರಗಿಸಿ ಅವರ ಆಶ್ರಯ ಪಡೆದು ಇಲ್ಲಿಯವರೆವಿಗೂ ಓದಿಬಂದದ್ದೆ ಒಂದು ಹೆಚ್ಚು. ಅದೇ ನನಗೊಂದು ಸಂತೋಷ. ಅದೇ ನನಗೊಂದು ಸಾವಿರ. ಈ ವಿಷಯದಲ್ಲಿ ನಿನ್ನನ್ನು ಎಷ್ಟು ಕೊಂಡಾಡಿದರು ಕಡಿಮೆ ! ಸಾಕು ನಡೆ. ಇನ್ನು ನೀನು ಮಾಸ್ತರನಾಗಿ ಗಳಿಸುವುದು ಬೇಡ. ಮನೆಗೆ ನಡೆ. ವಯಸ್ಸೂ ಆಗಿದೆ. ಮದುವೆ ಮಾಡಲು ಒಂದು ಕನ್ಯೆಯನ್ನು ನೋಡಿ ನಿಶ್ಚಯಿಸಲಾಗಿದೆ. ಲಗ್ನಮಾಡಿಕೊಂಡು ಮನೆಬಾಳಿನ ಭಾರ ನಿರ್ವಹಿಸುವುದು ನಿನ್ನ ಕರ್ತವ್ಯಕೋಟಿಗೆ ಸೇರಿದ ಮಾತಾಗಿದೆ'. ಅದಕ್ಕೆ ಮಗನು 'ತಾಯಿ, ನೀನು ಹೇಳುವುದೆಲ್ಲ ನಿಜ. ಆದರೆ ಇಷ್ಟು ಬೇಗ ಮದುವೆಯಾಗಲು ನನ್ನ ಮನಸ್ಸಿಲ್ಲ, ಮನೆಗೆ ಬಂದಿರಲು ಇಷ್ಟವಿಲ್ಲ. ಒಂದೆರಡು ವರ್ಷ ಕಳೆದು ಬಂದಲ್ಲಿ ಆಗ ಯಾವುದನ್ನು ಖಚಿತವಾಗಿ ಹೇಳುತ್ತೇನೆ. ಈಗ ಸುಮ್ಮನೆ ಬಲವಂತಿಸಬೇಡ' ಎಂದು ಹೇಳಿ ತಾಯಿಯನ್ನು ಸಮಾಧಾನ ಮಾಡಿ ಊರಿಗೆ ಕಳುಹಿಸಿದರು.

ಸದಾಶಿವಯ್ಯನವರು ಎಂದಿಗಿಂತ ಊರಿನ ಮಕ್ಕಳಿಗೆ ವಿದ್ಯಾಭ್ಯಾಸವನ್ನು ದಕ್ಷತೆಯಿಂದ ಮಾಡಿಸತೊಡಗಿದರು. ಊರಿನವರಿಗೆಲ್ಲ ಅಚ್ಚುಮೆಚ್ಚಿನವರಾಗಿದ್ದರು. ಅಂದಿನ ಅನಾಗರಿಕತೆಯ ಕಾಲದಲ್ಲಿಯೂ ಸಹ ಹಳ್ಳಿಯ ಹುಡುಗರು ಪ್ರೇಮೋತ್ಸಾಹಗಳಿಂದ ಶಾಲೆಗೆ ಬರುತ್ತಿದ್ದರೆಂಬುದು ಶಿಕ್ಷಕರಿಗೆ ಶಿಕ್ಷಣದಲ್ಲಿರುವ ವಿಚಕ್ಷಣತೆಯ ಕುರುಹಲ್ಲವೆ ? ಬುದ್ಧಿಬಲ್ಲವರಿಗೆ ವಿದ್ಯೆ ಕಲಸುವುದು ಒಂದು ಹೆಚ್ಚಲ್ಲ. ಏನೂ ತಿಳಿಯದ ಎಳೆ ಕಂದರಿಗೆ

ವಿದ್ಯಾಭ್ಯಾಸ ಮಾಡಿಸುವುದು ತುಂಬಾ ಕಷ್ಟದ ಕೆಲಸ. ಮಕ್ಕಳ ಮನಸ್ಸಿನಂತೆ ಹೋಗಿ ಮಕ್ಕಳನ್ನು ಒಲಿಸಿ ಅಕ್ಕರಿಗರನ್ನು ಮಾಡುವ ಹೊಣೆಗಾರಿಕೆಯ ಕೆಲಸವನ್ನು ಮಾಡಿ ಅನುಭವಿಸಿದವರಿಗೆ ಗೊತ್ತು ಅದರ ಕಷ್ಟ-ಕಾರ್ಪಣ್ಯ. ಪ್ರಾಥಮಿಕ ಶಿಕ್ಷಣವು ನಿಜಕ್ಕು ತುಂಬಾ ಪ್ರಯಾಸಕರವಾದುದು. ಮಕ್ಕಳನ್ನು ಮುಂದಿನ ಮಹಾಜನಗಳನ್ನಾಗಿ ಮಾಡುವ ಮೊದಲನೆ ಹೊಣೆಗಾರಿಕೆಯದು ಅದನ್ನು ತೃಪ್ತಿಕರವಾಗಿ ತಾಳ್ಮೆಯಿಂದ ಜಾಣ್ಮೆಯಿಂದ ನೆರವೇರಿಸುವವನೆ ನಿಜವಾದ ಶಿಕ್ಷಕ ಸದಾಶಿವಯ್ಯನವರು ಅಂತಹ ಸಮರ್ಥರಾಗಿದ್ದರು ಸೂಕ್ತ ಶಿಕ್ಷಣ ಕೊಡುತ್ತಿದ್ದರು.

ಊರಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುತ್ತಿದ್ದಂತೆ, ತಾವೂ ಸಹ ವೇದಾಂತ ವಿದ್ಯಾವಂತರಾಗುತ್ತಿದ್ದರು. ಅದಾಗಳೆ ಅದೆಷ್ಟೊ ಆಗಿದ್ದರು. ಅಷ್ಟಕ್ಕೆ ನಿಲ್ಲಿಸದೆ ವೆದಾಂತ ಜಿಜ್ಞಾಸೆಯನ್ನು ಮುಂದುವರಿಸಿದ್ದರು. ನಿಜಗುಣರ ಗ್ರಂಥಗಳನ್ನು ಬಿಟ್ಟು ನಿಮಿಷವೂ ಇರುತ್ತಿರಲಿಲ್ಲ. ೧. ಕೈವಲ್ಯಪದ್ಧತಿ, ೨. ಪರಮಾನುಭವಬೋಧೆ, ೩. ಪರಮಾರ್ಥಗೀತೆ, ೪. ಪರಮಾರ್ಥ ಪ್ರಕಾಶಿಕೆ, ೫ ಅನುಭವಸಾರ, ೬ ವಿವೇಕ ಚಿಂತಾಮಣಿ ಇವೇ ಅವರ ಸೊತ್ತು. ಇವೇ ಅವರ ಗೊತ್ತು. ಅವುಗಳಿಗಾಗಿ ಅವರ ಮನಸ್ಸು ಮಾರುಹೋಗಿತ್ತು. ಆ ಆರು ಗ್ರಂಥಗಳೆ ಅವರಿಗೆ ಆರು ಮಂದಿ ಆಪ್ತ ಸ್ನೇಹಿತರಾಗಿದ್ದರು. ಯಾವಾಗಲೂ ಅವುಗಳೊಡನೆಯೆ ಕಾಲ ಕಳೆಯುತ್ತಿದ್ದರು. ರಾತ್ರಿ ಹನ್ನೆರಡು ಹೊಡೆಯುವವರೆವಿಗೂ ಬಿಡದೆ ಅವನ್ನು ಓದುತ್ತಿದ್ದರು. ಸಮಯ ಸಿಕ್ಕಾಗಲೆಲ್ಲ ಸಮಾಳದ ಬಸವಯ್ಯನವರಲ್ಲಿಗೆ ಹೋಗಿ ವಿಚಾರವಿನಿಮಯ ಮಾಡುತ್ತಿದ್ದರು ; ವಿಶೇಷ ವಿಷಯಗಳನ್ನು ಪರಿಗ್ರಹಿಸುತ್ತಿದ್ದರು. ಆರು ಗ್ರಂಥಗಳಲ್ಲಿ ಮೊದಲಿನದಾದ ಕೈವಲ್ಯಪದ್ಧತಿಯನ್ನು ಕಣ್ಣಲ್ಲಿ ಕಣ್ಣಿಟ್ಟು ಓದುತ್ತಿದ್ದರು. ಪ್ರತಿಪದ್ಯದಲ್ಲಿ ಬುದ್ಧಿ ಮನಸ್ಸುಗಳನ್ನಿಟ್ಟು ಅರ್ಥವಿಸುತ್ತಿದ್ದರು. ಅವುಗಳಲ್ಲಿ ಈ ಪದ್ಯವು ಅವರ ಮನಸ್ಸಿನಲ್ಲಿ ನೇರವಾಗಿ ನಾಟಿತು.

" ಸುಮ್ಮನಾಗದು ಅರಿವಿನಿಂದವೆ ಮುಕುತಿ
ನೆಮ್ಮಲೀನೆನಿಸುವ ಗುಣಗಣವಿಲ್ಲದವನಿಗೆ ||

ಗುರುಪಾದ ಸೇವೆ ಶರಣರ ಸಂಗ ಹರಪೂಜೆ
ಕರುಣ ವಿನಯ ನಿಜನಮಯ ನಿಷ್ಠೆ
ವಿರತಿ ವಿವೇಕ ವಿದ್ಯೆ ಶಮೆ ದಮೆ ಸತ್ಯ ಧರ್ಮ
ವರಭಕ್ತಿ ನೀತಿಗಳ ಬಲವಿಲ್ಲವವನಿಗೆ ||
ನಿಗಮಾಗಮದೊಳು ನಂಬುಗೆ ನಿತ್ಯವಿಧಿಗಳ-
ನಗಲದೆಚ್ಚರು ದೇಹದೊಳು ವಿಮೋಹ
ಜಗದಪವಾದದೆಡೆಯೊಳು, ಭೀತಿ ಸುಜನರ
ಬಗೆಗೊಳಿಸುವ ನಡೆನುಡಿಯಿಲ್ಲದವನಿಗೆ ||
ಕಾವನಲರಂಬಿಗೆದೆಗೊಡದ ಬಲುವೆ ಜೀವ-
ಭಾವವೆಳ್ಳನಿತು ದೋರದಮಳಯೋಗ
ತೀವಿದನುಭವ ಸುಖರೂಪನಾದ ಶಂಭುಲಿಂಗ
ವಾವರಿಸಿ ಕೀಟ ಭೃಂಗನ್ಯಾಯವಿಲ್ಲದವನಿಗೆ ||

ಈ ಪದ್ಯದ ಪ್ರತಿಶಬ್ದದ ರೂಪವೆ ತಾವಾಗಲು ಸದಾಶಿವಯ್ಯನವರು ಸಂಪೂರ್ಣ ಮನಸ್ಸು ಮಾಡಿದರು ಈ ಪದ್ಯಬೀಜವು ಅವರ ಮನೋಭೂಮಿಕೆಯಲ್ಲಿ ಮೊಳಕೆಯಾಗಿ ಮೂಡಿತು. ಒಂದೆರಡು ವರ್ಷಗಳಲ್ಲಿ ಹೆಮ್ಮರವಾಗಿ ಚೆನ್ನಾಗಿ ಬೇರೂರಿತು ಹೂ ಹಣ್ಣಾಗಿಸುವ ಬಯಕೆ ಹೆಬ್ಬಯಕೆಯಾಗಿ ನೆಲೆನಿಂತಿತ್ತು.

ಈ ಸಮಯದಲ್ಲಿ ಇತ್ತ ತಾಯಿಯವರು ಮಗನ ಮದುವೆಯ ಮಾತನ್ನು ಮತ್ತೆ ನೆನಸಿಕೊಂಡರು. ನೆನವಿನೊಡನೆ ಬಡತನದ ಬಾಳಿನ ಚಿತ್ರವೂ ಒದುರು ನಿಂತಿತು. ಅದು ರಕ್ತವಿಲ್ಲದ ಚಿತ್ರ, ಶಕ್ತಿಯಿಲ್ಲದ ಚಿತ್ರ, ನೋಡಲಾಗದು, ನಿತ್ತರಿಸಲಾಗದು. ಬಡತನದ ಆ ಭಯಾನಕ ಚಿತ್ರ ಮದುವೆಯ ಮಾತನ್ನು ನಸು ಹಿಂದೂಡಲೆಳಸಿತು. ಆದರೆ ಮಾತೆಯ ಮನಸ್ಸು ಅದಕ್ಕೆ ಒಳಪಡಲಿಲ್ಲ. ಈ ಬಡತನ ನಮಗೆ ಎಂದಿನಿಂದಲು ಇದ್ದದ್ದೆ ; ಯಾವ ಕಾಲಕ್ಕು ತೀರದ್ದೆ. ಏನಾದರಾಗಲಿ ಮಗನ ಮದುವೆಯನ್ನು ಈ ಸಲ ನಿಲ್ಲಿಸಬಾರದು. ನೇರವೇರಿಸಿಯೆ ತೀರಬೇಕು. ಬಡತನಕ್ಕೆ ಅಂಜಿ ಮಗನ ಮದುವೆಯನ್ನು ಮಾಡದಿರಲು ಸಾಧ್ಯವೆ ? ಅಲ್ಲದೆ

ಮಗನು ಸಹ ಆ ದಿನ 'ಒಂದೆರಡು ವರ್ಷ ಬಿಟ್ಟು ಬಾ' ಎಂದು ಹೇಳಿದ್ದಾನೆ. ಅದರಂತೆ ಎರಡು ವರ್ಷಗಳು ಕಳೆದವು. ಅಂದು ಕೊಟ್ಟು ಬಂದ ಮಾತನ್ನು ನೆರವೇರಿಸದೆ ಇರುವುದು ಹೇಗೆ? ಮಗನಾದರೂ ಏನೆಂದುಕೊಂಡಾನು? ಏನಾದರಾಗಲಿ, ಈ ಸಲ ಮದುವೆ ಮಾಡಿಬಿಡುವುದೇ ನಿರ್ಧಾರ ಎಂದು ಆಲೋಚಿಸಿದಳು.

ಆದರೆ ನೀಲಮ್ಮ ತಾಯಿಯವರು ಎಣಿಸಿದಷ್ಟು ಮಗನ ಮದುವೆ ಸುಲಭವಾಗಿರಲಿಲ್ಲ. ಹಣ ಹೇಗಾದರು ಮಾಡಬಹುದಾಗಿತ್ತು. ಮಗನ ಮನಸ್ಸನ್ನು ಒಪ್ಪಿಸುವುದು ಆಗದ ಕೆಲಸವಾಗಿತ್ತು. ಈಚೆಗೆ ಉಂಟಾದ ಮಗನ ಮನದ ಉಪರತಿಯ ವಿಷಯ ಅವರಿಗೇನು ಗೊತ್ತು? ಸರ್ವಸಾಮಾನ್ಯ ಮಕ್ಕಳಂತೆ ತನ್ನ ಮಗನು ಒಪ್ಪಬಹುದೆಂದೆ ಅವರ ತಿಳುವಳಿಕೆ; ಹೃದಯ ಹರಕೆ. ಆ ಮನದ ಬಯಕೆಯಿಂದ ತಾಯಿ ಮಗನ ಬಳಿಗೆ ಬಂದಳು.

ಬಂದು ಮಗನನ್ನು ಮನೆಗೆ ಕರೆದರು. ಮದುವೆಯ ಮಾತೆತ್ತಿದರು. ಮಗನು 'ನನಗೆ ಮನೆಯೂ ಬೇಡ, ಮದುವೆಯೂ ಬೇಡ' ಎಂದನು. ಆ ಮಾತನ್ನು ಕೇಳಿ ಮಾತೆಯ ಮನಸ್ಸು ಕಸವಿಸಿಗೊಂಡಿತು; ಕಳವಳಗೊಂಡಿತು. ಚಿತ್ತಸ್ಥೈರ್ಯ ತಂದುಕೊಂಡು ಮಗನ ಮನಸ್ಸು ಒಲಿಸಲು ಸಾಹಸ ಮಾಡಿದರು; ಸಾಧ್ಯವಿದ್ದಷ್ಟು ಹೇಳಿದರು. ಮತ್ತೊಬ್ಬರಾದರೆ ಮನಸ್ಸು ಆಗಳೆ ತವಕಿಸುವಷ್ಟರ ಮಟ್ಟಿಗೆ ಹೇಳಿದರು. ಹೇಳಿದರೇನು ಪ್ರಯೋಜನವಾಗಲಿಲ್ಲ. ಪ್ರತಿಯಾಗಿ 'ಅಮ್ಮಾ! ಆದಾಗದು. ಅಜೀರ್ಣ ಆದವನಿಗೆ ಅಮೃತವು ವಿಷವಾಗುವುದಿಲ್ಲವೇನಮ್ಮ. ಹೀಗಿರುವಾಗ ವಿಷ ಕುಡಿಸಿದರೇ ಬದುಕುವರೇನಮ್ಮ. ಇರುಳು ಕಂಡ ಬಾವಿಯಲ್ಲಿ ಹಗಲು ಬೀಳುವರೇನಮ್ಮ. ಬೀಳದವರನ್ನು ಬಲವಂತದಿಂದ ನೂಕಿ ಬೀಳಿಸುವರೇನಮ್ಮ. ಅದರಲ್ಲಿಯೂ ತಾಯಿಯಾದವರು ಈ ಹಾಳು ಬಾವಿಯಲ್ಲಿ ತಬ್ಬುವರೇನಮ್ಮ! ಬೇಡ, ಅಂತಹ ಅಕರುಣೆಯ ಅಕೃತ್ಯವನ್ನು ಮಾಡಬೇಡ. ಆಲೋಚಿಸದೆ ದುಡುಕಬೇಡ. ನೀನು ಹೇಳುವುದು ಮೂರು ದಿನದ ಸಂಸಾರ. ನಾಲ್ಕನೆಯ ದಿನಕ್ಕೆ ದುಃಖದ ಸಾಗರ. ಇದರಲ್ಲಿಲ್ಲ ಸತ್ಯಸುಖದ ಸಾರ. ಇದರಲ್ಲಿ

ನನ್ನನ್ನು ಸರ್ವಥಾ ಕೆಡುವ ಬೇಡ. ಈ ನಶ್ವರವಾದ ಶರೀರದಿಂದ ನಿತ್ಯ ಶಾಂತಿಯನ್ನು ಸಂಪಾದಿಸಬೇಕಾಗಿದೆ. ಈ ಕತ್ತಲೆಯ ಕೋಣೆಯಲ್ಲಿ ಕೊನೆಯಿಲ್ಲದ ಕಾಂತಿಯನ್ನು ಹಚ್ಚಬೇಕಾಗಿದೆ. ಆ ಅಚ್ಚಳಿಯದ ಬೆಳಗಿನಲ್ಲಿ ಅನೇಕ ಜೀವರು ಕಣ್ಣರಳಿಸಬೇಕಾಗಿದೆ. ಬಾಳ ಬಗೆಗಳನು ಕಣ್ಣಾರ ಕಾಣಬೇಕಾಗಿದೆ. ಅದಿರಲಿ ಈಗ ಈ ಕಾಯವೆಂಬ ಕಾಡಿನಲ್ಲಿ ಕಾಲನು ಶಾರ್ದೂಲ ವಿಕ್ರೀಡಿತವ, ಕಾಮನು ಮತ್ತೇಭವಿಕ್ರೀಡಿತವ ಮಾಡ ಹತ್ತಿದ್ದಾರೆ. ಇವರನ್ನು ಸದೆಬಡಿಯಲು ಕಾಲಾರಿಯೂ ಕಾಮಾರಿಯೂ ಆದ ಶಿವನನ್ನು ಆರಾಧಿಸಬೇಕಾಗಿದೆ. ಅದಕ್ಕಾಗಿ ನನ್ನ ಹೃದಯ ಹಂಬಲಿಸುತ್ತಿದೆ; ಹಾತೊರೆಯುತ್ತಿದೆ. ಅದಕ್ಕಾಗಿಯೆ ನಿನ್ನನ್ನು ನಿರೀಕ್ಷಿಸಿಕೊಂಡಿದ್ದೆನು. ನೀನು ಬಂದದ್ದು ಲೇಸಾಯಿತು ಮಾತೆ, ಜನ್ಮದಾತೆ! ಇಲ್ಲಿಯವರೆವಿಗೂ ನನ್ನ ಸರ್ವಸ್ವ ನೀನಾಗಿದ್ದೆ. ನನ್ನ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಟ್ಟೆ. ನೀನು ಸುಮ್ಮನಿರದೆ ನನ್ನನ್ನು ಊರಿಗೆ ಕರೆಯಿಸಿಕೊಂಡು ಮನೆಯ ಬಾಳಿಗೆ ನೂಕಿದ್ದರೆ ನಾನೆಲ್ಲಿ ಇಷ್ಟಾದರೂ ಓದುತ್ತಿದ್ದೆನು. ಈಗ ಓದಿದ್ದು ನಿನ್ನ ಕೃಪೆ. ಈಗ ಅರಿತಿದ್ದುದು ನಿನ್ನ ಆಶೀರ್ವಾದ. ತಾಯೆ, ತಿರುಗಿ ಆ ಸಂಸೃತಿಗೆ ಎಳೆಯಬೇಡ. ಮುನ್ನೋಡುವ ಕಾಲಿಗೆ ತೊಡಕ ನುತ್ತಬೇಡ. ನಿನಗೆ ಇನ್ನೂ ಒಬ್ಬ ಹಿರಿಯ ಮಗನು ಇದ್ದಾನೆ. ಅವರಿಂದ ಸಂಸಾರ ನಿರ್ವಹಣೆ ಯಾಗುತ್ತದೆ. ನನ್ನನ್ನು ವೃಥಾ ಆಶಿಸಬೇಡ. ಶೋಕಿಸಬೇಡ ಎಷ್ಟಾದರು ತಾಯಿ ಋಣ ದೊಡ್ಡದು. ಅದನ್ನು ತೀರಿಸಿದಲ್ಲದೆ ಮುಂದಾರಿಯಿಲ್ಲ. ಅದಕ್ಕಾಗಿ ಈ ಒಂದೆರಡು ವರುಷಗಳಲ್ಲಿ ಶಿಕ್ಷಕವೃತ್ತಿಯಿಂದ ಸಂಪಾದಿಸಿದ ಈ ಮುನ್ನೂರು ರೂಪಾಯಿಗಳನ್ನು ನನ್ನ ಉಡಿಯಲ್ಲಿ ಹಾಕುತ್ತೇನೆ. ಇಷ್ಟರಿಂದ ತೃಪ್ತಳೂ ಶಾಂತಳೂ ಆಗು. ಇನ್ನು ಮೇಲೆ "ನೀನು ತಾಯಿಯೆಂಬ ಮಮತೆ ನನ್ನಲ್ಲಿಯೂ ನಾನು ಮಗನೆಂಬ ಮಮತೆ ನಿನ್ನಲ್ಲಿಯೂ ಖಂಡಿತವಾಗಿ ಇರಕೂಡದು. ಸಂತೋಷವಾಗಿ ಹರಸು" ಎಂದು ಹೇಳಿ ನಮಸ್ಕರಿಸಿ ಹಾಗೆಯೇ ಹೊರಟುಬಿಟ್ಟರು, ದೂರ ಹೋದಮೇಲೆ ಕಣ್ಣಿಗ ಕಾಣದಂತಾದರು. ಜನತಾ ಜನಾರ್ದನನು ಕಡೆಗು ತನ್ನ ಭಿಕ್ಷನನ್ನು ಕೊಂಡೆಯ್ದು ಬಿಟ್ಟನು.

ತಾಯಿ ನೀಲಮ್ಮನವರಿಗೆ ದಿಕ್ಕುತೋಚದಂತಾಯಿತು. ತಾನು ಯೋಚಿಸಿದ ಯೋಚನೆಗಳನ್ನೆಲ್ಲ ಕನಸಿನಲ್ಲಿ ಕಂಡಂತಾಯಿತು. ಕಣ್ಣಿಗೆ ಕತ್ತಲು ಕವಿದಂತಾಯಿತು. ತುಂಬು ಹರೆಯದ ಹುಡುಗ ಹೀಗೆಲ್ಲ ಮಾಡುತ್ತಾನೆಂದು ಅವಳು ಬಯಸಿರಲಿಲ್ಲ, ಭಾವಿಸಿರಲಿಲ್ಲ. ಅನಿರೀಕ್ಷಿತ ವಾಗಿ ಮರಕ್ಕೆ ಸಿಡಿಲು ಬಡಿದಂತಾಯಿತು. ಹೃದಯ ತಳಮಳಿಸಿತು. ಮನಸ್ಸು ಮರುಗಿತು. ಕಣ್ಣೀರು ಕಾಲುವೆಯಾಗಿ ಹರಿಯಿತು. ಕಾರ್ಗತ್ತಲೆ ಕವಿದಂತಾಯಿತು. ಮುಂದಾಲೋಚನೆ ಹರಿಯದಂತಾಯಿತು. ಬಾಳಿನ ಭಾಗ್ಯ ಸಾಗಿಹೋದಂತಾಯಿತು. ಹರುಷದ ಹೊಳೆ ಹರಿದುಹೋದಂತಾ ಯಿತು. ಬೆಳಗುವ ಜ್ಯೋತಿ ನಂದಿದಂತಾಯಿತು. ಕೊನರುವ ಮರ ಕಮರಿ ದಂತಾಯಿತು. ಈ ದುರ್ದಮ್ಯ ವಾತಾವರಣದಲ್ಲಿ ಕೊಂಚಕಾಲ ಆ ತಾಯಿ ಅಚಲದೆ ಕುಳಿತಳು. ಬಾಹ್ಯಸ್ಮೃತಿಯಿಲ್ಲದಾದಳು. ಆಮೇಲೆ ಎಚ್ಚತ್ತು ನಿಡುಸುಯ್ದು ನೋಡುತ್ತಾಳೆ. ಕುಮಾರನಿಲ್ಲ. ಶೂನ್ಯವಾದ ಮನೆ. ಮೌನ ವಾತಾವರಣ. ಏನನ್ನು ನೋಡುವುದು, ಯಾರನ್ನು ಕೇಳುವುದು ? ನಾಗಿ ಹೋದ ಕುಮಾರನನ್ನು ಅಗಲಿ ಹೋದ ಕುಮಾರನನ್ನು ಕರೆದುತಂದು ತೋರುವರಾರು ? ತಾನು ಹೆತ್ತ ಕುಮಾರನನ್ನು ತನ್ನ ಕಣ್ಣಮುಂದಿದ್ದ ಕುಮಾರನನ್ನು ಕೊಂಡೊಯ್ದವರಾರು ? ಸ್ವಪ್ನದ ಸಾಧುವೆ ? ಜಾಗ್ರತದ ಜೋಗಿಯೆ ? ಇದೇನು ಜಾದು ಆಟವೆ ? ಮಾಯೆ ಮಾಟವೇ ? ಯಾವ ಜಾಯಮಾನವಿದು ? ಕಾಲ ಜರಡಿಯಲ್ಲಿ ಪತಿದೇವರು ಮಾವಂದಿರು ಸೋಸಿ ಹೋದರು. ಜನತಾ ಜೋಗಿಯ ಜೋಳಿಗೆಗೆ ಮಗನು ಮಾರುಹೋದನು. ಕಣ್ಣಿನ ಹಬ್ಬ ಕಳೆದುಹೋಯಿತು. ಇಲ್ಲಿದ್ದು ಮಾಡುವುದೇನು ಎಂದು ನಿರ್ವಾಹವಿಲ್ಲದೆ ನಿದಾನವಾಗಿ ಎದ್ದು ಊರದಾರಿ ಹಿಡಿದಳು. ದಾರಿಯುದ್ದಕ್ಕೆ ಆ ತಾಯಿಯ ಕೋಮಲ ಹೃದಯದಲ್ಲಿ ಚಿಂತೆ ವ್ಯಥೆ ಕಥೆ ತಾಂಡವವಾಡಿದವು. ತೀರದ ನೋವಿನಿಂದ ನೊಂದಳು. ತಾಗದ ಉರಿಯಿಂದ ಬೆಂದಳು. ಹಾಗು ಹೀಗು ಮನೆ ಬಂದು ಸೇರಿದಳು. ಮಕ್ಕಳನ್ನು ನೋಡಿ ಮತ್ತೆ ದುಃಖ ಇಮ್ಮಡಿಗಿಲಾಯಿತು. ನಡೆದುದನ್ನೆಲ್ಲ ತೋಡಿದಳು. ತನ್ನ ದೌರ್ಭಾಗ್ಯವನ್ನು ಬಿಚ್ಚಿ ತೋರಿದಳು, ಅತ್ತು ತೋರಿದಳು. ಮಕ್ಕಳನ್ನು ದುಃಖದಲ್ಲಿ ಮುಳು ಗಿಸಿದಳು. ಅಂದಿನ ದಿನ ಆ ಮನೆಯೆ ಶೋಕಸಾಗರದಲ್ಲಿ ಮುಳುಗಿದಂತಿತ್ತು.

ಅವರಿಗೇನು ಗೊತ್ತು ಹೀಗಾದುದು ಮುಂಬೆಳಸಿನ ಚಿತ್ತ ಎಂಬುದು. ಬಿತ್ತಿದ ಬೀಜ ಕೈಬಿಟ್ಟುಹೋಯಿತೆಂದು ಮರುಗಿದಂತಾಯಿತು, ಕೊರಗಿದಂತಾಯಿತು. ಪ್ರೇಮ ಕುರುಡೆಂಬ ಮಾತು ಸಾರ್ಥಕವಾಗಬೇಕಲ್ಲವೆ? ಸಂಭವವಾಗಬೇಕಲ್ಲವೆ?

ಸದಾಶಿವಯ್ಯನವರು ಸತ್ಯಸಂಕಲ್ಪದಿಂದ ಕಾಯಕಷ್ಟದಿಂದ ಸಂಪಾದಿಸಿ ಕೊಟ್ಟ ಆ ಸ್ವಲ್ಪ ಸಂಪದವೆ ಮನೆತನದ ಮೂಲಸಿಧಿಯಾಯಿತು. ಅದರಿಂದಾಗಿ ಮನೆಯ ಬಾಳು ಯಾವ ತೊಂದರೆಯಿಲ್ಲದೆ ಸಾಗಿತು. ವಿವೇಕಾನಂದರು ತಮ್ಮ ಮನೆಯಲ್ಲಿರುವ ಅನ್ನ ಬಟ್ಟೆಗಳ ಕೊರತೆಯನ್ನು ಗುರುಮುಂಖಾಂತರ ಕೇಳಿ ಪಡೆದರು. ನಮ್ಮ ಸದಾಶಿವಸ್ವಾಮಿಗಳವರು ತಮ್ಮ ಕಷ್ಟಾರ್ಜಿತವನ್ನೆ ಕೊಟ್ಟು ಹರಸಿದರು, ಕಷ್ಟ ಹರಿಸಿದರು.



# ವೇದಾಂತಾಭ್ಯಾಸ - ಸಿದ್ಧಾಂತಹವ್ಯಾಸ

ಮನೆ ಮಠಗಳ, ತಾಯಿ ತನ್ನವರ ಮೋಹವನ್ನು ತೊರೆದು ಬಂದ ಸದಾಶಿವಯ್ಯನವರನ್ನು ಸ್ವಾಮಿಗಳೆಂದು ಸಂಬೋಧಿಸುತ್ತೇವೆ. ಇವಕ್ಕಿಂತಲು ಹೆಚ್ಚಿನ ಸ್ವಾಮಿತ್ವ ಬೇಕಿಲ್ಲ. ಸಿದ್ಧಾರ್ಥನು ಸಂಸಾರವನ್ನು ಅನುಭವಿಸಿ ಸನ್ನಿವೇಶಗಳನ್ನು ಪರಿಣಮಿಸಿ ತನ್ನ ೨೯ನೆಯ ವಯಸ್ಸಿನಲ್ಲಿ ವಿರತನಾಗಿದ್ದರೆ ಸದಾಶಿವ ಸ್ವಾಮಿಯು ಷೋಡಶ ಪ್ರಾಯದಲ್ಲಿಯೆ ಸಂಸಾರಕ್ಕೆ ಸಿಕ್ಕುಬೀಳದೆ ವ್ಯಾಮೋಹಕ್ಕೆ ಬಾಯ್ನೀರು ಕರೆಯದೆ ವೀರ ವಿರಾಗಿಗಳಾಗಿ ಹೊರಟಿರುವುದರಲ್ಲಿಯೆ ಅವರ ಮನೋಧೈರ್ಯದ ಮಹತ್ತು – ಸ್ಥಿರಪ್ರಜ್ಞತೆಯ ಸಂಪತ್ತು ಎಷ್ಟಿತ್ತೆಂಬುದನ್ನು ಊಹಿಸಲು ಸಹ ಸಾಧ್ಯವಿಲ್ಲ. ನಿರೂಹ್ಯವು ನಿರ್ವಿಷಯವೆ! ಅದಿರಲಿ.

ಸದಾಶಿವ ಸ್ವಾಮಿಗಳವರು ಲಿಂಗದಹಳ್ಳಿಯಿಂದ ಹೊರಟು ಬಂದು ಹುಬ್ಬಳ್ಳಿಯಲ್ಲಿ ನೆಲೆನಿಂತರು. ಆರೂಢರಲ್ಲಿ ಪಂಚದಶಿ – ವಿಚಾರ ಸಾಗರ – ಪರಮಾನುಭವಬೋಧೆ ಮುಂತಾದ ಗ್ರಂಥಗಳ ಅಭ್ಯಾಸವನ್ನು ಆರಂಭಿಸಿದರು. ವಿವೇಕಾನಂದರು ಒಬ್ಬ ಅಧ್ಯಾಪಕರ ಮುಖಾಂತರ ರಾಮಕೃಷ್ಣಪರಮಹಂಸರನ್ನು ಅರಿತರು. ಸದಾಶಿವಸ್ವಾಮಿಗಳವರಿಗೆ ಮಾತ್ರ ಆರೂಢರನ್ನು ಅರಿಯಲು ಯಾರ ನೆರವೂ ಬೇಕಾಗಲಿಲ್ಲ. ಅದ್ವೈತ ಸಿದ್ಧಾಂತದಲ್ಲಿ ಆರೂಢರ ಖ್ಯಾತಿ ಅಷ್ಟೊಂದು ಹಬ್ಬಿತ್ತು. ಹಬ್ಬಿ ಹೂವಾಗಿತ್ತು. ಹೂವಿನ ವಾಸನೆ ಎಲ್ಲೆಲ್ಲಿಯು ಹರಡಿತ್ತು. ವೇದಾಂತದ ವಾತ್ಸಲ್ಯ ವಿಶೇಷವಾದಾಗ ಸದಾಶಿವಸ್ವಾಮಿಗಳವರೆ ಅವರ ಪ್ರಭಾವಕ್ಕೆ ಒಳಪಟ್ಟಿರಬೇಕು, ಪಟ್ಟಿದ್ದರು.

ಸದಾಶಿವಸ್ವಾಮಿಗಳವರು ಆರೂಢರಲ್ಲಿ ವೇದಾಂತಾಭ್ಯಾಸಮಾಡುತ್ತಿದ್ದರು ವೇದಾಂತಿಗಳಾಗಿರಲಿಲ್ಲ. ಅಲ್ಲಿ ನಡೆಯುತ್ತಿರುವ ಬಾಹ್ಯಾದ್ವೈತವು ಸ್ವಾಮಿಗಳವರ ಮನಸ್ಸಿಗೆ ಹಿಡಿಯುತ್ತಿರಲಿಲ್ಲ. ಸತ್ಯಸಿದ್ಧಾಂತದ ಹವ್ಯಾಸ ಇವರಲ್ಲಿ ಮಿಡಿಯುತ್ತಿತ್ತು. ಅದಕ್ಕಾಗಿ ಇವರು ವಾಸ ಭೋಜನಾದಿಗಳನ್ನು ಹುಬ್ಬಳ್ಳಿಯ

ರುದ್ರಾಕ್ಷಿ ಮಠದಲ್ಲಿ ಸ್ವಂತ ಕಲ್ಪಿಸಿಕೊಂಡಿದ್ದರು. ಪಾಠ ಪ್ರವಚನಾದಿಗಳಿಗೆ ಮಾತ್ರ ಆರೂಢರಲ್ಲಿಗೆ ಹೋಗುತ್ತಿದ್ದರು.

ಹೀಗಿರಲು ಒಂದು ದಿನ ಪ್ರವಚನದಲ್ಲಿ ಇಷ್ಟಲಿಂಗವು ಬಾಹ್ಯವಸ್ತು. ಅದರ ಪೂಜೆ ಮೂರ್ತಿಪೂಜೆ. ಅದರ ಪೂಜೆಯಿಂದ, ಧಾರಣೆಯಿಂದ ಪ್ರಯೋಜನವಿಲ್ಲ ಎಂದು ಮುಂತಾಗಿ ಚರ್ಚೆ ವಿಚರ್ಚೆ ನಡೆಯಿತು. ಈ ವಿಷಯದಲ್ಲಿ ಸ್ವಾಮಿಗಳವರ ಮನಸ್ಸು ಹೊಯ್ದಾಡಿತು. ಧರಿಸಿದ ಇಷ್ಟ ಲಿಂಗದ ವಿಷಯದಲ್ಲಿ ಸಂಶಯ ಉದಯಿಸಿತು. ಆಗ ಹುಬ್ಬಳ್ಳಿಯಲ್ಲಿ ಎರಡೆತ್ತಿನ ಮಠದ ಶ್ರೀಗಳೊಬ್ಬರು ಶಿವಾನುಭವಿಗಳಿದ್ದರು. ಅವರನ್ನು ಬೆದಕಿಕೊಂಡು ಹೋಗಿ ಸ್ವಾಮಿಗಳು ಇಷ್ಟಲಿಂಗ ತ್ಯಾಗದ ವಿಷಯ ವಾಗಿ ಬಹುದಿನ ಚರ್ಚಿಸಿದರು. ಅದರಿಂದಲು ಸ್ವಾಮಿಗಳ ಸಂಶಯ ಪರಿಹಾರವಾಗಲಿಲ್ಲ. ಆಗ ಅದೇ ಶ್ರೀಗಳವರು 'ತಮ್ಮಾ, ನೀನು ಬಳ್ಳಾರಿ ಭಾಗದಲ್ಲಿರುವ ಎಮ್ಮಿಗನೂರು ಜಡೆಸಿದ್ಧರ ಬಳಿಗೆ ಹೋಗು. ಅಲ್ಲಿ ನಿನ್ನ ಸಂಶಯ ನಿರಸನವಾಗಬಲ್ಲುದು. ಅವರನ್ನು ಸಂದರ್ಶಿಸದೆ ನೀನು ಇಷ್ಟ ಲಿಂಗವನ್ನು ತ್ಯಜಿಸಬೇಡ' ಎಂದು ಹೇಳಿ ಕಳುಹಿಸಿದರು.

ಸದಾಶಿವಸ್ವಾಮಿಗಳವರು ಸಹ ಆ ಜಡೆಸಿದ್ಧರ ಹೆಸರನ್ನು ಕೇಳಿದ್ದರು. ಹೆಚ್ಚಾಗಿ ಬಲ್ಲಿದರು, ನಿಚ್ಚಟದ ನಡೆಯವರು ಎಂದು ಎಲ್ಲೆಲ್ಲಿಯು ಅವರ ಪುಣ್ಯವಾರ್ತೆ ಪಸರಿಸಿತ್ತು. ಅದರಿಂದಾಗಿ ಸ್ವಾಮಿಗಳಿಗೆ ಅಲ್ಲಿಗೆ ಹೋಗುವ ಪ್ರೇಮ ಹುಟ್ಟಿತು. ಒಬ್ಬ ಭಕ್ತನನ್ನು ಜೊತೆಗೂಡಿ ಜಡೆಸಿದ್ಧರಲ್ಲಿಗೆ ಪ್ರಯಾಣ ವಾದರು. ಆಗ ರೈಲು ಬಸ್ಸುಗಳಿಲ್ಲ. ಅದರಿಂದಾಗಿ ದಿನವು ಎಂಟು ಹತ್ತು ಮೈಲು ಕಾಲು ನಡಿಗೆಯಿಂದ ಪ್ರಯಾಣ ಬೆಳಸಿದರು. ಅಲ್ಲಲ್ಲಿ ಕೆರೆ ಮಡು ಗಳಲ್ಲಿ ಸ್ನಾನಮಾಡಿ ತರುಮೂಲಗಳಲ್ಲಿ ಶಿವಪೂಜೆಯಂ ತೀರಿಸಿ, ಕರತಲ ಭಿಕ್ಷ ದಿಂದ ಪ್ರಸಾದ ಪರಿಗ್ರಹಿಸುತ್ತ ಮುನ್ನಡೆದರು. ಆಗ ಸ್ವಾಮಿಗಳವರು ಧರಿಸುತ್ತಿದ್ದುದು ಒಂದೇ ಒಂದು ಕಾವಿಯ ಶಾಟಿ. ಮಸ್ತಕದ ಮೇಲೆ ಕಂಬಳಿಯ ಕೊಪ್ಪಿ. ಕೈಯಲ್ಲಿ ಒಂದು ತಂಬಿಗೆ, ತೋಳಿನಲ್ಲಿ ಒಂದು ಜೋಳಿಗೆ. ಇಷ್ಟರ ಹೊರತು ಇನ್ನೇನು ಇರಲಿಲ್ಲ.

ಇಷ್ಟು ಕಷ್ಟಗಳಿದ್ದರು ಅವನ್ನೆಲ್ಲ ಲೆಕ್ಕಿಸದೆ ಸಾಗಿದರು. ಸತ್ಯ ಸಿದ್ಧಾಂತದ ಹವ್ಯಾಸದ ಹೆಚ್ಚಳ ಅವರಲ್ಲಿ ಅಚ್ಚೊತ್ತಿತ್ತು. ಅದರಿಂದಾಗಿ ಈ ಕಷ್ಟ

ಗಳೊಂದೂ ಅವರಿಗೆ ಕಾಣಲಿಲ್ಲ. ಬಹುದೂರದ ಪ್ರಯಾಣವನ್ನು ಪ್ರಯಾಸವಿಲ್ಲದೆ ತೀರಿಸಿ ಜಡೆಸಿದ್ಧರಲ್ಲಿಗೆ ಹೋದರು. ಸ್ವಾಮಿಗಳು ಬರುವ ಮೊದಲಿಗೆ ಸಿದ್ಧರು ತಮ್ಮ ಸಿದ್ಧಿಯಿಂದ ಸ್ವಾಮಿಗಳವರ ಮಹತ್ತನ್ನು ಅರಿತು ತಮ್ಮೆದುರಿನಲ್ಲಿದ್ದ ಶಿಷ್ಯರಿಗೆ ಸಂಜ್ಞೆಯಿಂದ ಕಸ ತೆಗೆಯಿರಿ, ಬರಲು ದಾರಿಮಾಡಿಕೊಡಿರಿ ಎಂದು ಹೇಳಿ ವ್ಯವಸ್ಥೆಮಾಡಿಸಲು ಆರಂಭಿಸಿದುದನ್ನು ಕಂಡು ಜನರು ಅದಾವ ಮಹಾತ್ಮರು ಬರುವರೋ ಎಂದು ಅಚ್ಚರಿಗೊಂಡಿದ್ದರು. ಅಷ್ಟರಲ್ಲಿ ಸದಾಶಿವ ಸ್ವಾಮಿಗಳವರು ಅಲ್ಲಿಗೆ ಆಗಮಿಸಿದರು. ಇವರ ಮನಸ್ಸಿನ ಬಯಕೆಯನ್ನು ಸಿದ್ಧರುತಾವೇ ತಿಳಿದು ತಮ್ಮ ಪಕ್ಕದಲ್ಲಿ ಕುಳಿತಿದ್ದವರ ಹೆಗಲಮೇಲಿದ್ದ ವಸ್ತ್ರವೊಂದನ್ನು ತೆಗೆದುಕೊಂಡು ಲಿಂಗಾಕಾರದ ಸಜ್ಜಿಕೆಯನ್ನು ಮಾಡಿ ತಮ್ಮ ಕೊರಳಲ್ಲಿ ಕಟ್ಟಿಕೊಂಡು ಕೈಜೋಡಿಸಿಕೊಂಡು ನಿಲ್ಲುವರು. ಇದನ್ನೆಲ್ಲ ಬರುತ್ತಿದ್ದ ಸದಾಶಿವಸ್ವಾಮಿಗಳವರು ಕಂಡು ಕಡು ಆಶ್ಚರ್ಯವನ್ನು ಆನಂದವನ್ನು ಹೊಂದಿ ಆತ್ಮತೃಪ್ತಿಯಿಂದ ಅಷ್ಟಾಂಗ ನಮಸ್ಕಾರಮಾಡಿದರು. ಆಗ ಸಿದ್ಧರು ಸ್ವಾಮಿಗಳನ್ನು **ಶಿವಯೋಗಿ** ಎಂದು ಸಂಬೋಧಿಸಿದರು.

ಸ್ವಾಮಿಗಳವರು ಸಿದ್ಧರಿಗಾಗಿ ತಂದಿದ್ದ ಕೆಲವು ಪದಾರ್ಥಗಳನ್ನು ಸ್ವೀಕರಿಸಲು ಕೊಟ್ಟರು. ಹಸಿ-ಬಿಸಿ ಎನ್ನದೆ ಬೇಡಿದ್ದು-ಬೇಡದ್ದು ಎನ್ನದೆ ಬೇಕು-ಬೇಡ ಎನ್ನದೆ ಕೊಟ್ಟಿದ್ದನ್ನು ಸಂತೋಷದಿಂದ ಸ್ವೀಕರಿಸುವ ಅವರ ನಿಜವಾದ ಆರೂಢಸ್ಥಿತಿಯನ್ನು ಕಂಡು ತಣಿದರು. ಮರ ಮಾನ್ಯಗಳ ಅನ್ನ ಅರಿವೆಗಳ ಹಂಗಿಲ್ಲದೆ ಮಾನಾಪಮಾನಗಳ ಜಯಾಪಜಯಗಳ ಹಿಗ್ಗು ಕುಗ್ಗುಗಳಿಲ್ಲದೆ ಇರುವ ಸಹಜಾರೂಢಸ್ಥಿತಿಗೆ ಸ್ವಾಮಿಗಳು ತಲೆದೂಗಿದರು, ತಲೆಬಾಗಿದರು.

ಇದಕ್ಕೆ ವಿಪರೀತಾಚರಣೆಯುಳ್ಳ ಹುಬ್ಬಳ್ಳಿಯ ಆರೂಢರಲ್ಲಿಗೆ ತಾವಿನ್ನು ಹೋಗಬಾರದೆಂದು ಭಾವಿಸಿ ಇನ್ನೆಲ್ಲಿಗೆ ಹೋಗಬೇಕೆಂಬುದನ್ನು ಸಿದ್ಧರನ್ನೆ ಕೇಳಬೇಕೆಂದು ಆಶಿಸಿ ಇರುವಷ್ಟರಲ್ಲಿ ಇವರ ಇಂಗಿತವ ತಿಳಿದು ಸಿದ್ಧರು 'ಎಲ್ಲಿದ್ದೆಯೊ ಅಲ್ಲಿಗೆ ಹೋದರಾಯಿತು' ಎಂದು ಮೂರು ಸಲ ನುಡಿದರು.

ಜಡೆಸಿದ್ಧರ ಆ ಅಪ್ಪಣೆಯನ್ನು ಮೀರದೆ ಸ್ವಾಮಿಗಳು ಮರಳಿ ಹುಬ್ಬಳ್ಳಿಗೆ ಬಂದು ಅದೇ ಆರೂಢರಲ್ಲಿಯೆ ವೇದಾಂತಾಭ್ಯಾಸವನ್ನು ಮಾಡಹತ್ತಿದರು. ಇಷ್ಟಲಿಂಗ ಪರಿತ್ಯಾಗದ ಸಂಶಯವನ್ನು ಹಳಚಿ ಇಷ್ಟಲಿಂಗ ಧಾರಿಗಳಾ

ಗಿಯೆ ಇದ್ದರು. ಹೀಗೆ ವೇದಾಂತಾಭ್ಯಾಸ ನಡೆದಿದ್ದರೂ ಸಿದ್ಧಾಂತ - ಹವ್ಯಾಸ ವನ್ನು ಕೈ ಬಿಟ್ಟಿರಲಿಲ್ಲ, ಅವರೊಡನೆ ಕೈಮಾಡುತ್ತಿರಲಿಲ್ಲ.

ಅಂದು ತಾಯಿ ಹೇಳಿದ ಮದುವೆಯನ್ನು ಮಾಡಿಕೊಳ್ಳದ ಸದಾಶಿವ ಸ್ವಾಮಿಗಳವರು ಇಂದು ಜಡೆಸಿದ್ಧರು ಹೇಳಿದ ಲಿಂಗಪತಿಯ ಮದುವೆಯನ್ನು ಮಾಡಿಕೊಂಡರು. ಲೌಕಿಕ ಸತಿಗೆ ಗಂಡನಾಗಿ ಬದುಕುವದಕ್ಕಿಂತ ಲಿಂಗ ಪತಿಗೆ ಶರಣಸತಿಯಾಗಿ ಬಾಳುವುದು ಲೇಸೆಂದು ಮನಗಂಡರು.

ಶರಣ ಸತಿಯ ಮದುವೆಯ ಸಂಭ್ರಮವನು ನೋಡಿರಮ್ಮ
ಪರಮಾನಂದ ಪಯೋನಿಧಿಯೊಳಗೋಲಾಡಿರಮ್ಮ

ಸಿಂಗರಿಸಿದ ಶುಭಮಂದಿರವಂದವ ಹಂದರವಮ್ಮ
ಮಂಗಳ ಚೌಕದ ಹಸೆಯ ಜಗುಲಿ ಹಸನಾದುದಮ್ಮ
ಕಂಗೊಳಿಸುವ ಕಲಶಗಳಂದ್ಯೆರಣೆ ತುಂಬಿತಮ್ಮ
ಹಿಂಗದವರೊಳೊಪ್ಪುವ ತಳಿರೆಡೆವರಪೆಸಿಸಿತಮ್ಮ ||೧||

ಕಲಶೋದಕದೊಳು ಮಿಂದು ಶುಚಿತೆಯುಳವಟ್ಟುದಮ್ಮ
ತಿಳಿವಿನ ಬೆಳುವಟ್ಟೆಯನೊಲಿದುಡೆ ಚಲುವೆತ್ತುದಮ್ಮ
ತಿಲಕ ಭಸಿತ - ರುದ್ರಾಕ್ಷಿಯ ಮಣಿದೊಡವಾದುಮ್ಮ
ವಿಳಸಿತ ಶಿವ ಹಸ್ತಾಬ್ಜದ ತೊಂಡಿಲು ಗಟ್ಟಿತಮ್ಮ ||೨||

ನೆರೆದ ಗಣಂಗಳೊಸಗೆಯ ಸುವಾಸಿನಿಯರುಗಳಮ್ಮ
ಪರಿವಿಡಿದೊರೆವಾಗಮ ವಿಧಿವಾದ್ಯದ ರಭಸವಮ್ಮ
ವರ ಮಂತ್ರದ ಶೋಭಾನವಿಂಬಾಗಿರೆ ಪಾಡಿತಮ್ಮ
ಸರಿದುದು ಮಾಯಾಮಲ ಕರ್ಮದ ತೆರೆಯಾಗಳಮ್ಮ ||೩||

ಭಜನೆ ಭಕುತಿಗಳಿವೆ ಜೇರಿಗೆ ಬೆಲ್ಲವಾದವಮ್ಮ
ನಿಜದೀಕ್ಷಾ ಸಮಯದ ಸುಮುಹೂರ್ತ ಸಮನಿಸಿತಮ್ಮ
ಸುಜನ ಜನದ ಕೈವಾರವೆ ಮಂಗಳ ವಾರವಮ್ಮ
ತ್ರಿಜಗನ್ನುತ ಗುರು ಕರುಣ ರಸದ ಕೈಧಾರೆಯಮ್ಮ ||೪||

ಮೆರೆವ ಶಿರವರಮನೆಯ ನಿಬ್ಬಣವೈತಂದುದಮ್ಮ
ಕೊರತೆರಹಿತ ಶಂಭುಲಿಂಗನೇ ಮದವಳಿಗನಮ್ಮ
ಮೆರೆದಿನಿಸಗಲದೆ ನೇಹವೆರಸಿ ಕೈವಿಡಿದನಮ್ಮ
ನೆರೆದಿಹ ಮುತ್ತೈದೆ ಶರಣವಧು ನಿಜಕಾಣಿರಮ್ಮ ||೫||

ಅದಕ್ಕೆ ಸರಿಯಾಗಿ ನಿಜಗುಣರ ಈ ನಿಜಬೋಧೆಯಿಂದ ಸ್ವಾಮಿಗಳ ಮನ ಮತ್ತೂ ಗಟ್ಟಿಗೊಂಡಿತು. ಈ ಬಾಳುವೆಗೆ ಬಾಗಿದರು. ಈ ಬಳುವಳಿಗೆಯ ಕೈಕೊಂಡರು. ಈ ಬಳಗದಲ್ಲಿ ಕೂಡಿದ್ದರು.

"ಆವ ಪುಣ್ಯವೊ ಲಿಂಗಪೂಜಾ ವಿಧಿಯ ಅನುಭಾವವಹುದು ನರಜನ್ಮ ದೊಳು | ಸಾವಿರ ಮುಖದೊಳರಸಿ ನೋಡಿ ನಿಗಮಾಗಮಾವಳಿ ಕಾಣದ ಸಾಧ್ಯವಿದು ||" ಎಂದು ಲಿಂಗಧಾರಣ ಲಿಂಗಾರ್ಚನ ಸೌಭಾಗ್ಯವನ್ನು ಸರ್ವೋತ್ಕೃಷ್ಟತೆಯನ್ನು ನಿಜಗುಣರು ಹೃದಯಾರೆ ಹಾಡಿ ಹರಸಿದಾರೆ; ಹವಣ ತೋರಿ ಹೆಜ್ಜೆಕೆ ಹೂಗೆಡವಿದಾರೆ, ಹೆಮ್ಮೆಯ ಹಿತೋಪದೇಶ ಹೇಳಿದಾರೆ.



# ಯೋಗ್ಯ ಗುರುವಿನ ಭಾಗ್ಯ

ನಿಜಗುಣರ ವೇದಾಂತಗ್ರಂಥಗಳಲ್ಲಿಯೆ ಅದರಲ್ಲಿಯು ಕೈವಲ್ಯ ಪದ್ಧತಿಯಲ್ಲಿಯೆ ತಲ್ಲೀನರಾಗಿದ್ದ ಹುಬ್ಬಳ್ಳಿಯ ಸಿದ್ಧಾರೂಢರವರು ಅವರ ಈ ಇಷ್ಟಲಿಂಗದ ಮಹಿಮೆ ಹಿರಿಮೆಗಳ ಹಿತೋಪದೇಶವನ್ನು ಲೆಕ್ಕಿಸಿರಲಿಲ್ಲ. ಆತ್ಮಲಿಂಗವಿದ್ದ ಆರೂಢನಿಗೆ ಬಾಹ್ಯಲಿಂಗವೇಕೆ ಎಂದು ಅವರ ಗ್ರಹಿಕೆ. ಆದರೆ ತಮ್ಮ ಗ್ರಹಿಕೆಯಲ್ಲಿ ಗಂಧವಿಲ್ಲೆಂಬುದು ಅವರಿಗೆ ತಿಳಿದಿರಲಿಲ್ಲ. ಅಂತರ್ಲಿಂಗ ಧಾರಣ ಸಮರ್ಥನಿಗೂ ಬಾಹ್ಯಲಿಂಗದ ಅಗತ್ಯವಿದೆಯೆಂಬುದನ್ನು ಅವರು ಕಂಡುಕೊಂಡಿರಲಿಲ್ಲ. ನಿಜಗುಣರೆ ಮತ್ತೊಂದೆಡೆಯಲ್ಲಿ ಸೊಗಸಾದ ಸಾದೃಶ್ಯಕೊಟ್ಟು ಹೇಳಿದಾರೆ: ಇಷ್ಟಪ್ರಾಣ ಭಾವಲಿಂಗಗಳು ಕ್ರಮವಾಗಿ ದೀಪ – ದೀಪದ ಕಿರಣ. ದೀಪದ ಪ್ರಕಾಶಗಳಂತೆ ಅವಿನಾಭಾವ ಸಂಬಂಧದಿಂದ ಇವೆಯೆಂದು ಇನಿದಾಗಿ ಚಿತ್ರಿಸಿದಾರೆ. ಕತ್ತಲಯ ಮನೆಯಲ್ಲಿ ಹಣತೆ ಹಚ್ಚಿದಮೇಲೆ ಬೆಳಕು ಬಿತ್ತೆಂದು ದೀವಿಗೆಯನ್ನು ಆರಿಸಿದರೆ, ಎತ್ತಿ ಬಿಸುಕಿದರೆ ಬೆಳಗು ಉಳಿಯುತ್ತದೆಯೊ? ಉಳಿದಿರಲು ಸಾಧ್ಯವೊ? ಹಾಗೆಯೆ ದೀಪದಂತಿದ್ದ ಇಷ್ಟಲಿಂಗ ಇಲ್ಲದಿರಲು ಪ್ರಾಣಕಿರಣವು ಇಲ್ಲ, ಭಾವ ಬೆಳಗು ಇಲ್ಲ. ಅನ್ನದ ಆವಶ್ಯಕತೆ ಇರುವವರೆವಿಗು ಇಷ್ಟಲಿಂಗದ ಆವಶ್ಯಕತೆ ಅನಿವಾರ್ಯ. ಸ್ಥೂಲ ಶರೀರ ಹೊದ್ದಿರುವರೆವಿಗು ಸ್ಥೂಲಲಿಂಗದ ಸಂಬಂಧ ಅಪರಿಹಾರ್ಯ. ಈ ನಿಜವನರಿಯದವ ನಿಜವಾದ ಆರೂಢನಲ್ಲ, ಆರೂಢಪತಿತ. ಈ ತತ್ವವ ತಿಳಿಯದೆ ಸಿದ್ಧಾರೂಢರು ಅವರ ಕೆಲವು ಶಿಷ್ಯರು ಇಷ್ಟಲಿಂಗವನ್ನು ಬಿಟ್ಟುಬಿಟ್ಟಿದ್ದರು. ಅವರು ವೇದಾಂತ ಬಲ್ಲಿದರಾಗಿದ್ದರು ಈ ಒಂದು ಕೊರತೆಯಿಂದ ಸ್ವಾಮಿಗಳವರು ಯೋಚನಾಕ್ರಾಂತರಾಗಿದ್ದರು. ಅವರ ಮನಸ್ಸು ಅಲ್ಲಿಂದ ಹಿಂಜರಿಯುತ್ತಿತ್ತು. ಯೋಗ್ಯಗುರುವಿನ ಬರುವನ್ನು ಹಾರೈಸುತ್ತಿತ್ತು. 'ಇಲ್ಲಿಯೆ ಇರು' ಎಂದರ್ಥದ ಜಡೆಸಿದ್ಧರ ಅಮೃತವಾಣಿಯಿಂದ ಇಲ್ಲಿಯೆ ನನಗೆ ಸದ್ಗುರುವಿನ ಸಂದರ್ಶನಭಾಗ್ಯ ಲಭಿಸಬಹುದೆಂದು ನಿಶ್ಚೈಸಿ ವಿಧಿಯಿಲ್ಲದೆ ಅಲ್ಲಿಯೆ ವಾಸವಾಗಿದ್ದರು.

ಹೀಗಿರಲು ಒಂದು ದಿನ ಆಕಸ್ಮಿಕವಾಗಿ ಮಹಾಮಹಿಮರಾದ ವೀರ ವೈರಾಗ್ಯ ಸಂಪನ್ನರಾದ ಎಳಂದೂರು ಬಸವಲಿಂಗಸ್ವಾಮಿಗಳವರು ಆ ಪ್ರಾಂತ ದಲ್ಲಿ ಪ್ರಯಾಣಮಾಡುತ್ತ ಹುಬ್ಬಳ್ಳಿಗೆ ಬಂದರು. ಅದೇ ಊರಿನಲ್ಲಿಯೇ ಪ್ರಸಿದ್ಧರಾದ ಆರೂಢರಿಗೆ ನಿಜಗುಣರ ಕೃತಿಗಳಲ್ಲಿರುವ ಪರಿಣತಿಯನ್ನು ಕೇಳಿ ನೋಡಿ ಸಂತೋಷಿಸಬೇಕೆಂದು ಆರೂಢರಲ್ಲಿಗೆ ಆಗಮಿಸಿದರು. ಆರೂಢರೊಡನೆ ಆಧ್ಯಾತ್ಮಜಿಜ್ಞಾಸೆ ಆರಂಭವಾಯಿತು. ಶ್ರೀಗಳ ಅಸ್ಖಲಿತವಾದ ಅನನ್ಯ ಸಾಧಾ ರಣವಾದ ಅನುಭವವನ್ನು ಕಂಡು ಆರೂಢರಿಗೆ ಅಚ್ಚರಿಯಾಯಿತು. ತಾವು ಮೌನತಾಳಿ ತಮ್ಮ ಶಿಷ್ಯರನ್ನು ವಾದಕ್ಕೆ ಮುಂದುಮಾಡಿದರು. ಶಿಷ್ಯರಲ್ಲಿ ಅಗ್ರಗಣ್ಯರಾಗಿದ್ದ ಸದಾಶಿವ ಸ್ವಾಮಿಗಳವರು ಚುರುಕಾಗಿ ಚರ್ಚೆಮಾಡಿದರು. ಏನುಮಾಡಿದರೇನು ? ಅಪಕ್ವತೆಯನ್ನು ಶ್ರೀಗಳು ಕಂಡುಕೊಂಡರು. ಬರೀ ವಾದವಿಮರ್ಶೆಯೆ ಹೊರತು ಆಳ ಅನುಭವದ ಹುರುಳಿಲ್ಲ. ಕೇವಲ ಬೌದ್ಧಿಕವಾದವು ಆತ್ಮಶಾಂತಿಗೆ ಕಾರಣವಲ್ಲ ಎಂದು ಹೇಳಿ ಹೊರಗೆ ಬಂದು ಒಂದು ತಂಬಿಗೆಯನ್ನು ಕೇಳಿದರು. ಶ್ರೀಗಳ ಅನುಭವಕ್ಕೆ ಮೆಚ್ಚಿದ ಸದಾಶಿವಸ್ವಾಮಿಗಳವರೆ ತಂಬಿಗೆಯನ್ನು ತೆಗೆದುಕೊಂಡು ಬಂದರು. ಅವರೊಡನೆ ಬಹಿರ್ದೇಶಕ್ಕೆ ತೆರಳುತ್ತ ತಮ್ಮ ಹಿಂದೆ ಬರುತ್ತಲಿದ್ದ ಶಿಷ್ಯನ ಯೋಗ ಕ್ಷೇಮವನ್ನು ವಿಚಾರಿಸುತ್ತಿದ್ದರು. ಅಷ್ಟರಲ್ಲಿ ಜಲಾಶಯವೊಂದು ಹತ್ತಿರಕಂಡಿತು. ಶ್ರೀಗಳು ತಂಬಿಗೆಯನ್ನು ತೆಗೆದುಕೊಂಡು ಹೊರಗೆಹೋಗಿ ಬಂದು ಹಸ್ತ ತೊಳೆದರು. ಹಲ್ಲುಜ್ಜಲು ಕಡ್ಡಿಯೊಂದನ್ನು ತರಹೇಳಿದರು. ಆರೂಢರ ಶಿಷ್ಯವೃತ್ತಿಯಲ್ಲಿಪ್ಪ ಸದಾಶಿವ ಸ್ವಾಮಿಗಳಿಗೆ ಹಲ್ಲುಕಡ್ಡಿಯ ಪರಿಚಯವಿರಲಿಲ್ಲ. ಅನುಮಾನಿಸುತ್ತ ನಾಲ್ಕು ಬೆರಳುದ್ದದ ಒಂದು ಕಡ್ಡಿಯನ್ನು ತಂದುಕೊಟ್ಟರು. ಅದನ್ನುಶ್ರೀಗಳವರು ನೋಡಿ 'ತಮ್ಮಾ, ನಿನ್ನಬುದ್ಧಿಯೂ ಸಹ ಇಷ್ಟೇ ಉದ್ದಿದೆ. ಅದ್ವೈತದಲ್ಲಿ ಮುಳುಗಿದ್ದ ನಿಮಗೆ ಬಾಹ್ಯಶೀಲಾಚರಣೆಯ ಅರಿವಿಲ್ಲ. ಬಾಹ್ಯ ಶೌಚಾಚರಣೆಯ ಮಾಡದವನು ಆತ್ಮವನ್ನು ಅರಿತು ಫಲವಿಲ್ಲ. ತಾನು ಶುಚಿಯಾಗಿದ್ದು ಮನೆ ಮೂಲೆಗಳಲ್ಲಿ ಅಶುಚಿ ಯಾಗಿದ್ದರೆ ನಾಕೇನು ? ತನ್ನ ಮನೆ ಶುಚಿಯಾಗಿರಬೇಡವೆ ? ತಾನು ಶುಚಿ ಯಾಗಿದ್ದರೆ ಆರೋಗ್ಯ ಬರುವುದೇನು ? ತಾನು ತನ್ನ ಮೈತೊಳೆದು ಬಿಳಿಯ ಬಟ್ಟೆಯನ್ನು ತೊಡುವಂತೆ ಮನೆಯ ಶುಭ್ರತೆಮಾಡಿ ಸುಣ್ಣಬಣ್ಣಬಳಿದ

ರಲ್ಲವೆ ? ಹಾಗೆ ಆತ್ಮನಿಗೆ ಅರಿವಿನ ಬೆಳಗು ಒಂದಿದ್ದರೆ ಸಾಲದು. ಶರೀರೇಂದ್ರಿಯಗಳೂ ಶುಭ್ರವಾಗಿರಬೇಕು. ಸುಣ್ಣಬಣ್ಣ ಬಳಿವ ಕುಂಚು ಎಷ್ಟುದ್ದ ವಿದ್ದರೆ ಲೇಸೆಂಬುದನ್ನು ತಿಳಿಯಬೇಡವೆ ? ಹಾಗೆ ಹಲ್ಲುಜ್ಜುವ ಕಡ್ಡಿ ಹನ್ನೆರಡು ಅಂಗುಲ ಉದ್ದಿರಬೇಕು ಇದು ಶಾಸ್ತ್ರ. ಆತ್ಮವಿಚಾರ ಮಾತ್ರ ಹೇಳುವುದೇ ಶಾಸ್ತ್ರವಲ್ಲ. ದೇಹಾತ್ಮಗಳ ಆಚಾರ ವಿಚಾರಗಳೆರಡನ್ನು ಹೇಳುವುದೇ ಶಾಸ್ತ್ರ. ಶರೀರೇಂದ್ರಿಯ ಮೋಹ ತ್ಯಜಿಸುವುದೆಂದರೆ ನೀವೆಲ್ಲ ತಿಳಿದಿರುವಂತೆ ಶರೀರೇಂದ್ರಿಯಗಳನ್ನು ಕೊಳೆಯಾಗಿ ಇರಿಸುವದಲ್ಲ. ಶೌಚ - ಸ್ನಾನ, ಹಲ್ಲುಜ್ಜುವಿಕೆ ಮುಂತಾದ ಬಾಹ್ಯ ಶೌಚಾಚಾರಗಳನ್ನು ಯಥಾವಿಧಿಯಾಗಿ ಆಚರಿಸಲೇ ಬೇಕು. ಆಚರಿಸದೆ ಇರುವದರಿಂದ ನಿಮಗೆಲ್ಲ ಹಲ್ಲುಜ್ಜುವ ಕಡ್ಡಿ ಎಷ್ಟಿರಬೇಕೆಂಬುದೇ ಗೊತ್ತಿಲ್ಲ. ಹೊರಗೆ ಹೋಗಿ ಬಂದಾದಮೇಲೆ ಮಣ್ಣು ಹಾಕಿ ಕೈತೊಳೆವುದೂ ಸಹ ನಿಮಗೆ ಗೊತ್ತಿದೆಯೊ ಇಲ್ಲೊ. ಹೊರಗಿನದನ್ನೆ ಅರಿಯದವನು ಒಳಗಿನದನ್ನು ಇನ್ನೆಷ್ಟು ಅರಿತಿರಬೇಕು ? ಎಂದು ಚೆನ್ನಾಗಿ ಬುದ್ಧಿವಾದ ಹೇಳಿದರು.

ಇದನ್ನು ಕೇಳಿ ಸದಾಶಿವಸ್ವಾಮಿಗಳವರ ಮನಸ್ಸು ಪರಿವರ್ತನವಾಯಿತು. ಶಾರೀರಕ ಶೌಚವಿಧಾನವನ್ನೆ ಅರಿಯದ ಆತ್ಮವಿಚಾರದಿಂದ ಏನೂ ತಿರುಳಿಲ್ಲ ಎಂಬ ವಾದ ಅವರ ಮನಸ್ಸಿಗೆ ಅಚ್ಚೊತ್ತಿದಂತಾಯಿತು. ಅದನರಿಯಲು ಮನಸ್ಸು ಉತ್ಸುಕಗೊಂಡಿತು. ಮೊದಲೆ ಆರೂಢರ ಕ್ರಿಯಾಲೋಪವನ್ನು ಒಪ್ಪದ ಸ್ವಾಮಿಗಳಿಗೆ ಇದನ್ನೆಲ್ಲ ಕಂಡಮೇಲೆ ಮತ್ತೂ ಮನಸ್ಸು ಅಲ್ಲಿರಲು ಹಿಮ್ಮೆಟ್ಟಿತು. ಶ್ರೀಗಳೊಡನೆ ಹೋಗಲು ಅಭಿಲಾಷೆಯಾಗಿ ಆವಾಗಲೆ ಅಪ್ಪಣೆ ಕೇಳಿದರು.

ಯೋಗಧುರಂಧರರಾದ ಶ್ರೀಗಳವರು 'ತಮ್ಮಾ, ನಮ್ಮ ಸೇವೆ ತೀರ ಕಠಿಣವಾದುದು. ನೀನಾದರೊ ಆರೂಢರ ಶಿಥಿಲಾಚಾರ ಶಿಕ್ಷಣದಲ್ಲಿದ್ದವನು. ಕಷ್ಟದ ಸೇವೆಗೆ ಒಳಪಟ್ಟು ತೊಳಲಬೇಕಾದೀತು ? ತುಂಬಾ ವಿಚಾರಿಸಿ ಹೇಳು. ಎನ್ನಲು ಸ್ವಾಮಿಗಳ ಕಣ್ಣಲ್ಲಿ ನೀರೂರಿ 'ಮಹಿಮರೆ, ಶಿವಯೋಗದ ಕಟ್ಟುಗಳು ಎಷ್ಟೇ ಕಷ್ಟದಾಯಕಗಳಾಗಿದ್ದರು ಸಹಿಸಬಲ್ಲೆನು, ಸೇವಿಸಬಲ್ಲೆನು. ತಮ್ಮೊಡನೆ ಬರಲು ತಮ್ಮ ಶಿಷ್ಯನಾಗಿರಲು ಅಪ್ಪಣೆ ಆಗಿಯೇ ತೀರಬೇಕೆಂದು

ಸಾಷ್ಟಾಂಗ ನಮಸ್ಕಾರಮಾಡಿದರು. ಅವರ ದೃಢಸಿಶ್ಚಯವನ್ನು ಸತ್ಯ ಸಂಕಲ್ಪವನ್ನು ಕಂಡು ಶ್ರೀಗಳವರು ಶಿಷ್ಯನನ್ನಾಗಿ ಪರಿಗ್ರಹಿಸಿದರು.

ಸದಾಶಿವಸ್ವಾಮಿಗಳವರ ಸಂತೋಷಕ್ಕೆ ಪಾರವೆ ಇಲ್ಲದಾಯಿತು. ಬಹು ದಿನಗಳ ಸಿರೀಕ್ಷಣೆ ಇಂದು ಫಲಿಸಿತು, ಅಭೀಷ್ಟವು ತಾನೇ ಪ್ರಾಪ್ತಿ ಯಾಯಿತು, ತಾನಿದ್ದಲ್ಲಿಗೆ ಬಂದೊದಗಿತು. ವಿವೇಕಾನಂದರು ಪರಮಾತ್ಮನ ಪಿಪಾಸುಗಳಾಗಿ ದಕ್ಷಿಣೇಶ್ವರಕ್ಕೆ ಹೋಪರೆ ನಮ್ಮ ಕಥಾನಾಯಕರಲ್ಲಿಗೆ ಶಿವನನ್ನು ಕಂಡ ಸದ್ಗುರುಗಳು ತಾವಾಗಿಯೆ ಆಗಮಿಸಿದರು; ಅನುಗ್ರಹಿಸಿ ದರು. ಇದು ಭಾಗ್ಯ ವಿಶೇಷವಲ್ಲವೆ? ತಾನು ಹಂಬಲಿಸುತ್ತಿರುವ ವಸ್ತು ಅಥವಾ ಮಹಾವ್ಯಕ್ತಿ ತನ್ನಲ್ಲಿಗೆ ಬರುವುದೆಂದರೆ ಪುಣ್ಯದ ಪ್ರಭಾವ ಎಷ್ಟಿರ ಬೇಕು? ಪ್ರಪೂರ್ಣ ಸದ್ಭಾವ ಎಷ್ಟಿರಬೇಕು?

ಗುರುಗಳು ಬದುಕಿರುವವರೆವಿಗೂ ಅವರ ಸನ್ನಿಧಿಯಲ್ಲಿದ್ದು ಸೇವೆ ಗೈಯುತ್ತಾ ಅವರ ಕೃಪೆಗೆ ಪಾತ್ರರಾಗಿ ಅವರಿಂದ ಶಿವಯೋಗ ಶಿವಾನುಭವಗ ಗಳನ್ನು ಚೆನ್ನಾಗಿ ಅಭ್ಯಾಸಮಾಡಿದರು. ಶಿವಾನುಭವದ ಸಾರ ಸವಿಯ ಸವಿದರು. ಅದಕ್ಕೆ ಮುಗ್ಧರಾದರು. ಪ್ರತಿದಿನ ರಾತ್ರಿ ನಿದ್ರೆಬರುವವರೆವಿಗು ಶಿವಾನುಭವ ಗ್ರಂಥಗಳನ್ನು ಓದುತ್ತಿದ್ದರು. ಹಗಲು ಗುರುಗಳ ಸಕಲವಿಧ ಸೇವೆಯಲ್ಲಿ ತೊಡಗಿರುತ್ತಿದ್ದರು. ಸೇವೆಯಲ್ಲಿ ಮೇಲು ಕೀಳೆಂಬ ಭಾವನೆಯಿರಲಿಲ್ಲ. ಯಾವ ಕೆಲಸವೆ ಆಗಲಿ ಗುರುಸೇವೆಯೆಂದು ಹರುಷದಿಂದ ಉಲ್ಲಾಸದಿಂದ ಮಾಡುತ್ತಿದ್ದರು. ಗುರುಗಳು ಶಿವಪೂಜೆಗೆ ಕುಳಿತಾಗ ಅವನ್ನು ತದೇಕ ಧ್ಯಾನದಿಂದ ತಲ್ಲೀನ ಮನಸ್ಸಿನಿಂದ ನಿರೀಕ್ಷಿಸುತ್ತಿದ್ದರು. ಆಗ ಬಾಹ್ಯಜಗತ್ತನ್ನು ಮರೆತಿರುತಿದ್ದರು. ಅವರಂತೆ ಅಂತರಾತ್ಮನ ಸಮರಸಕ್ಕೆ ಹಂಬಲಿಸುತ್ತಿದ್ದರು. ಗುರುಗಳ ಪೂಜೆಯ ಪ್ರಭಾವವು ಅವರ ಕಣ್ಣುಗಳ ಹೊಲಬಿನಿಂದ ಹೋಗಿ ಮನೋಮಂದಿರದಲ್ಲಿ ನಿಂದು ಅಂತರಂಗವಾದ್ಯಂತವನ್ನು ವ್ಯಾಪಿಸುತ್ತಿತ್ತು.

ಹೀಗೆ ಗುರುಗಳವರಲ್ಲಿ ಸದಾಚಾರ ಶಿವಪೂಜೆ ಶಿವಾನುಭವಗಳನ್ನು ಕಲಿತುದಲ್ಲದೆ ಯೋಗ ವಿದ್ಯೆಯನ್ನು ಅಭ್ಯಸಿಸಿದರು. ಕ್ರಿಯೋಪದೇಶವನ್ನು ಪಡೆದರು. ಗುರುಶಿಷ್ಯಸಂಬಂಧ ತೀರ ಹತ್ತಿರದ್ದಾಯಿತು; ತಾದಾತ್ಮ್ಯ ಭಾವದ್ದಾಯಿತು.

ಗುರುಶಿಷ್ಯರಿಬ್ಬರು ಸೇರಿ ಪ್ರಾಂತ ಪ್ರಯಾಣವನ್ನು ಕೈಕೊಂಡರು.

ಅಲ್ಲಲ್ಲಿ ಸಂಚರಿಸುತ್ತ ಭಕ್ತಸಮೂಹಕ್ಕೆ ಸದ್ಬೋಧೆಯನ್ನು ಮಾಡುತ್ತ ಧಾರವಾಡ ಜಿಲ್ಲೆಯ ಅಣ್ಣಿಗೆರೆ ಗ್ರಾಮಕ್ಕೆ ಆಗಮಿಸಿದರು. ಅಲ್ಲಿರುವಾಗಲೆ ಎಳಂದೂರು ಶ್ರೀಗಳವರಿಗೆ ದೇಹಾಲಸ್ಯವಾಯಿತು. ದಿನದಿನಕ್ಕೆ ದೇಹಾಲಸ್ಯವು ಉಲ್ಬಣಾವಸ್ಥೆಗೆ ಹೋಗ ಹತ್ತಿತು. ಅದನ್ನು ಕಂಡು ಸದಾಶಿವ ಸ್ವಾಮಿಗಳವರು ಚಿಂತಿಸತೊಡಗಿದರು. ಇದನ್ನು ಕಂಡು ಗುರುವರ್ಯರು ಹತ್ತಿರಕ್ಕೆ ಕರೆದು ಸೇವರಿಸಿ ಕುಮಾರಾ! ನಿನ್ನಲ್ಲಿ ಯೋಗವಿದೆ, ತ್ಯಾಗವಿದೆ. ವಿರತಿಯಿದೆ ಉಪರತಿಯಿದೆ. ಕಾರ್ಯದಕ್ಷತೆಯಿದೆ, ಆಧ್ಯಾತ್ಮಿಕ ಬಲವಿದೆ. ಇನ್ನೇನಾಗಬೇಕು? ಸುಮ್ಮನೆ ಅಂಜದಿರು, ಅಳುಕದಿರು. ಧೈರ್ಯ ಗುಂದದೆ ಸತ್ಕಾರ್ಯ ತತ್ಪರನಾಗು. ಸಮಾಜಸೇವೆಯನೆಸಗು. ಸಮಾಜವು ಯೋಗಬಲ ಹೀನವಾಗಿದೆ. ತ್ಯಾಗಗುಣ ರಹಿತವಾಗಿದೆ. ವಿದ್ಯೆ-ಧರ್ಮಗಳಿಲ್ಲದೆ ಕುರುಡಾಗಿದೆ. ನಿರ್ವೀರ್ಯವಾದ ಸಮಾಜಕ್ಕೆ ಕಳೆತುಂಬಿ ಕಣ್ಣರಳಿಸಲು ನೀನು ಮುಂದೆ ಬರಬೇಕು. ಕೇವಲ ಯೋಗಿಯಾಗಿ-ವಿರಾಗಿಯಾಗಿ ಕಣ್ಮುಚ್ಚಿ ಕುಳಿತರೆ ಸುಖವಿಲ್ಲ. ಸಮಾಜವು ಶಕ್ತಿಗುಂದಿ ಸಣ್ಣಾಗುತ್ತಿರುವಾಗ ಒಬ್ಬನೆ ಮುಕ್ತನಾಗಲು ಹವಣಿಸುವುದು ಹೆಚ್ಚಿನ ಸ್ವಾರ್ಥ. ಸಮಾಜ ಸೇವೆಯೆ ಯುಕ್ತಯೋಗ. ಅದೇ ತಾತ್ವಿಕ ತಪಸ್ಸು. ಸಮಾಜವೇ ನಿನ್ನ ಜೀವನ. ಸಮಾಜ ಸೇವೆಯೆ ನಿನಗೆ ಪಾವನ. ಸಮಾಜದ ಮಕ್ಕಳೆ ನಿನ್ನ ಮಕ್ಕಳು. ಸಮಾಜದೇಳ್ಗೆಯೆ ನಿನ್ನ ಏಳ್ಗೆ. ಸಮಾಜ ಮುಕ್ತಿಯೆ ನಿನ್ನ ಮುಕ್ತಿ. ಯೋಚಿಸಬೇಡ. ಯೋಧನಂತೆ ಧೈರ್ಯತಾಳು. ನಿನಗೆ ದೇವನ ಬೆಂಬಲವಿದೆ. ಆಯುಷ್ಯರೇಖೆಯಿದೆ. ಸಮಾಜವೇ ನಾನೆಂದು ಭಾವಿಸಿ ಸೇವಿಸು. ಇದರಿಂದ ನೀನು ಆದರ್ಶ ಜೀವಿಯಾಗುವೆ. ಅಸಾಧಾರಣ ಶಿವಯೋಗಿ ಯಾಗುವೆ, - ಎಂದು ಹೇಳಿ ತಮ್ಮಯೋಗದ ಸಾಧನ ಸಾಮಗ್ರಿಗಳನ್ನು ಪೂರ್ಣ ಕೃಪಾ ಪ್ರಸಾದಾನುಗ್ರಹ ದೀಕ್ಷೆಯಿತ್ತು, ಶುಭಾಶೀರ್ವಾದವನ್ನು ಕೊಟ್ಟು ಲಿಂಗೈಕ್ಯರಾಗುವರು. ಸ್ವಾಮಿಗಳವರೊ ಗುರು ಅನುಗ್ರಹಿಸಿದುದನ್ನೆ ತಮ್ಮ ಭಾವೀ ಜೀವನದ ಪರಮ ಸಂಪತ್ತೆಂದು ಪರಮಾರ್ಥ ಸಂವಿತ್ತಿಯೆಂದು ಸ್ವೀಕರಿಸಿ ಸಂತೋಷಚಿತ್ತರಾದರು ಆದರೂ ಗುರುವಿರಹದ ವ್ಯಥೆಯನ್ನು ಕೆಲವು ಕಾಲ ಅನುಭವಿಸದೆ ಇರಲಿಲ್ಲ.

---

# ತಪೋಭೂಮಿ - ತತ್ವಪ್ರೇಮಿ

ಆಮೇಲೆ ಏಕಾಂತದಲ್ಲಿ ಏಕಾಂಗಿಯಾಗಿದ್ದು ಏಕಾಗ್ರಚಿತ್ತದಿಂದ ತಪಸ್ಸನ್ನಾಚರಿಸಿ ಭಾವೀ ಸಮಾಜ ಮತ್ತು ಸಂಸ್ಕೃತಿಗಳ ಸೇವೆಗೆ ಆತ್ಮಶಕ್ತಿಯನ್ನು ಸಂಪಾದಿಸಲು ಯೋಗ ಯೋಗ್ಯವಾದ ತಪೋಭೂಮಿಯಾದ ನಿಜಗುಣರಿಗೆ ನಿಜನೆಲೆಯಾದ ಶಂಭುಲಿಂಗನ ಬೆಟ್ಟಕ್ಕೆ ಆಗಮಿಸಿದರು. ಬರುತ್ತ ಬೆಟ್ಟದ ಇಕ್ಕಟ್ಟಾದ ಹಾದಿಗಳಲ್ಲಿ ಹಾಯ್ದು ಮುಂದುವರಿಯುತ್ತಿದ್ದರು. ಒಮ್ಮೊಮ್ಮೆ ಹೋಗುವುದನ್ನೇ ಮರೆತು ಚಣಹೊತ್ತು ನೀಳ್ದಾರಿಯಲ್ಲಿಯೆ ನಿಂತುಬಿಡುತ್ತಿದ್ದರು. ಚಿಂತಾಮಗ್ನರಾಗಿರುತ್ತಿದ್ದರು. ಎಚ್ಚತ್ತು ಮತ್ತೆ ಹತ್ತಿಪ್ಪತ್ತು ಹೆಜ್ಜೆ ಮುನ್ನಡೆದು ಮತ್ತೇನನ್ನೊ ಯೋಚಿಸುತ್ತ ನಿಲ್ಲುತ್ತಿದ್ದರು. ಅಂತು ಇಂತು ದಾರಿ ಸಾಗಿತ್ತು. ನಿಶ್ಚಿತದ ಗುರಿ ಮಾತ್ರ ತೋರದಾಗಿತ್ತು. ಗುರುವರ್ಯರ ಗುರುತರವಾದ ಆಶೀರ್ವಾದದ ಪ್ರತಿಯೊಂದು ಮಾತನ್ನು ತಮಗೆ ಒರೆಹಚ್ಚಿಕೊಳ್ಳುತ್ತಿದ್ದರು. ತಮಗೆ ಆ ಶಕ್ತಿ ಎಲ್ಲಿ? ಆ ಸಾಹಸವೆಲ್ಲಿ ? ಸಂಘಶಕ್ತಿಗೂ ಸಾಧ್ಯವಾಗದ ಆ ಕಾರ್ಯ ನನ್ನಿಂದ ನೆರವೇರುವುದೆಂದರೇನು ? ನೆರವೇರಿಸುವದೆಂದರೇನು ? ಗುರುವಿನಾಜ್ಞೆ. ತೊರೆಯುವಂತಿಲ್ಲ. ಮಾಡುವ ಬಗೆ ಹೇಗೆ ? ಮುಂದೋರದು ಎಂದು ಮುಂತಾಗಿ ಅಂತರಂಗದಲ್ಲಿಯೆ ಆಲೋಚಿಸುತ್ತಿದ್ದರು. ಅಷ್ಟರಲ್ಲಿ ನಿಜಗುಣರು ಹಿಂದೆ ನಿವಾಸಿಸಿ ನಿಯಮವ್ರತಗಳಿಂದ ತಪಸಿದ ಆಶ್ರಮ ಕಣ್ಣಿಗೆ ಬಿತ್ತು. ಅಲ್ಲಿನ ಆ ಅನನ್ಯ ಪ್ರಶಾಂತ ವಾತಾವರಣದಿಂದ ಅದೇ ಇರಬಹುದೆಂದು ಭಾವಿಸಿದರು. ಆ ತಪೋಭೂಮಿಗೆ ತಪೋನೇಮಿಯು ತವಕದಿಂದ ಬಂದು ತಲುಪಿದನು. ತತ್ವಪ್ರೇಮಿಯಾಗಿ ತಂಗಿದನು.

ಆ ತಪೋಭೂಮಿಯ ಭಾಗಗಳನ್ನು ಅಡ್ಡಾಡಿ ಅವಲೋಕಿಸಿದನು. ಒಂದೆಡೆ ಗವಿಯೊಂದು ಕಂಡಿತು. ವಾಸಕ್ಕೆ ನೆಲೆಸಿಕ್ಕಿತೆಂದು ಆನಂದಿಸಿದನು. ಆ ಆನಂದದಿಂದ ವನವೈಭವವನ್ನು ನಿಟ್ಟಿಸಿ ನೋಡಿದನು. ಒಂದೆಡೆಗೆ ಬೆಟ್ಟದ ತುತ್ತುದಿ ನಿಶ್ಚಲವಾಗಿ ನಿಶ್ಚಿಂತೆಯಾಗಿ ನಿಂತಿತ್ತು. ಅದರ ಮಡುಲಲ್ಲಿ

ಅನಂತ ಗಿಡಮರಗಳು ಬೆಳೆದಿದ್ದವು. ವನಮೃಗಗಳು ವಾಸವಾಗಿದ್ದವು. ಕಿರಿದಾದ ತೊರೆಯೊಂದು ಹರಿದಿತ್ತು. ಹಕ್ಕಿಗಳು ಬಾಳಿದ್ದವು. ಇದನ್ನೆಲ್ಲ ನೋಡಿ ಸ್ವಾಮಿಗಳವರ ಕಲ್ಪನೆ ಕೆರಳಿತು, ಬಯಕೆ ಬೇರೂರಿತು. ನಾನೂ ನಿಶ್ಚಲನಾಗಿ ತಪಸ್ಸನ್ನಾಚರಿಸಿದರೆ ನನ್ನಲ್ಲಿ ಸುಗುಣ ವೃಕ್ಷಗಳು ಶಿವರತಿ ಸಮರತಿ ಲತೆಗಳು ಬೆಳೆಯಬಲ್ಲವು. ಶಾಂತಿಜಲ ಪ್ರವಹಿಸಬಲ್ಲುದು. ಸಮಾಜದ ಹಕ್ಕಿಗಳು ಭಯವಿಲ್ಲದೆ ಬಾಳಬಲ್ಲವು. ಇಷ್ಟಾದರು ದುರ್ಜನರೆಂಬ ವನ್ಯ ಪಶುಗಳು ಇಲ್ಲದಿರಲು ಸಾಧ್ಯನಾಗದು. ಇದ್ದರೂ ಇಲ್ಲಿರುವ ವನಮೃಗಗಳಂತೆ ಅವುಗಳ ಆಟವೂ ನಡೆಯದು. ಹಾಗಾದಮೇಲೆ ನಾನೇಕೆ ಹೆದರಬೇಕು. ಅಖಂಡವಾದ ಅಚಲವಾದ ಆತ್ಮಶಕ್ತಿಯನ್ನು ಸಂಪಾದಿಸುವುದೇ ಈಗ ನನ್ನ ಆದ್ಯ ಕರ್ತವ್ಯ; ಆಮೇಲೆ ಅದು ಗಂತವ್ಯಗುರಿ ಎಂದು ಭಾವಿಸಿ ತಪಸ್ಸಿಗೆ ಅಭಿಮುಖರಾದರು; ಮಿಗೆ ಹರುಷಿಸಿದರು.

ನಿತ್ಯವು ತಪ್ಪದೆ ತದೇಕ ಚಿತ್ತದಿಂದ ತಪಸ್ಸಾಧನೆ ಸಾಗಿತು. ತಿಳಿಯಾದ ತಣ್ಣೀರಿನಲಿ ಮಿಂದು ನೀರ್ಗಾವಿಯ ಮಡಿಯುಟ್ಟು ಹೂವು ಹಣ್ಣುಗಳ ತಂದು ಲಿಂಗ ಪೂಜೆಯಲ್ಲಿ ಲೀನವಾಗುವರು. ಸಂಸಿದ್ಧಿಗೇರುವರು. ಜಪದ ಎಣಿಕೆ ನಿಲ್ಲುವುದು. ಕ್ರಮದ ಪ್ರಮೆ ಅಡಗುವುದು ದೃಕ್‌ದೃಶ್ಯವೊಂದಾಗುವವು. ಇದಾದ ಮೇಲೆ ದ್ರಷ್ಟಾ ಇನ್ನೆಲ್ಲಿ? ಹೀಗೆ ತ್ರಿಪುಟಿಯಳಿದು ತನ್ಮಯರಾಗಿ ಇರುತ್ತಿದ್ದರು. ಹೊತ್ತುಹೋದಂತೆ ಮರಳಿ ದೃಶ್ಯದಿಂದ ದೃಕ್ಕು ಬೇರ್ಪಡು ತ್ತಿತ್ತು. ಬಾಹ್ಯಸ್ಮೃತಿ ಬರುತ್ತಿತ್ತು. ಈಶ್ವರನೆ ಸಕಾರನಿರಾಕಾರ ನಾಗಿರುವಂತೆ ಸಾಧನ ಸಿದ್ಧಿಗಳಿಂದ ಭಕ್ತಿಮುಕ್ತಿಗಳಿಂದ ತಪಸ್ವಿ ತೇಜಸ್ವಿಯಾದರು. ಬಾಹ್ಯವಿಧಿ ಭಾವಸಮಾಧಿಗಳಿಂದ ಸಮಾಜದ ಭಾವೀ ಭಾಗ್ಯವಿಧಾತ ರಾದರು.

ಆದರೂ ಅವರಿಗೆ ಸಂಬುಗೆ ನೆರವಾಗಲಿಲ್ಲ. ಹಂಬಲ ಹರಿಯಲಿಲ್ಲ ನಿಜಗುಣರು ಶುಂಭುಲಿಂಗನ, ವಿದ್ಯಾರಣ್ಯರು ಭುವನೇಶ್ವರಿಯ ಪ್ರಾರ್ಥಿಸಿ ದಂತೆ ಸದಾಶಿವಸ್ವಾಮಿಗಳು ತಮ್ಮ ಗುರುಗಳಾದ ಬಸವಲಿಂಗಸ್ವಾಮಿಗಳನ್ನು ಪಾರ್ಥಿಸುವರು.

ತಮ್ಮ ವಾಣಿಯಲ್ಲಿ ನೇರವಾಗಿ ಪ್ರಾರ್ಥಿಸುವ ಮೊದಲು ಗುರುಕರುಣ ವನ್ನೇ ಕೋಗಿಲೆಯನ್ನಾಗಿ ಭಾವಿಸಿ ಹಾಡಿದ ನಿಜಗಣರ ಈ ಪದ್ಯವು

ಸ್ವಾಮಿಗಳ ನೆನಪಿಗೆ ಬರುವುದು. ಸೂಕ್ಷ್ಮವಾದ ಆ ಪದ್ಯದಲ್ಲಿ ಅವರ ಮನಸ್ಸು ಸಂಯುಕ್ತವಾಗಿ ಅವರ ವಾಣಿಯಿಂದ ಹೊರಹೊಮ್ಮುತ್ತದೆ. ಹಾಡ ತೊಡಗುವರು :

ಕೋಗಿಲೆ ದನಿದೋರು ಕರ್ಮವೆಸಿಸುವ ಮಾಗಿ ಪೋದುದಿನ್ನು
ಅನುನಯದಿ ಗುರುಕರುಣವೆಂಬ ಕೋಗಿಲೆ
ಘನವನಂತ ವಿದೆನಗೆ ಸೊಗಸು ಮಿಗೆ ಪ್ರಣವರೂಪಿನ
ಚಿತ್ರತರವಾದ ಕೋಗಿಲೆ ‖ ಪ ‖

ದಳನಾಲ್ಕು ದಳವಾರು ದಳಪತ್ತು ಹನ್ನೆರಡು
ದಳಷೋಡಶ ದ್ವಿದಳವನಾಂತ ಕೋಗಿಲೆ
ನಳಿನ ಕುಲದಿಂದೆಸೆವ ಚಕ್ರವೆಂಬಾರು ತಿಳಿ-
ಗೊಳನ ಕೆಲದಲ್ಲಿ ಘೋರೆಂದು ಕೋಗಿಲೆ
ಸುಳಿವ ಸರಸ್ವತಿ ಗಂಗೆ ಯಮುನೆ ಎಂದೆಂಬ ನದಿ-
ಗಳ ನಡುವೆ ಚೌಕಮಧ್ಯದಲಿ ಕೋಗಿಲೆ
ನಳನಳಿಸಿ ಬೆಳೆದು ಬೆಳಗುವ ಬಿಂದುವೆಂಬಿನಿದು
ದಳಿದ ಮಾಮರದ ಮೇಲಿರ್ದು ಕೋಗಿಲೆ ‖ ೧ ‖

ಶರಧಿಯ ಮೊರಹಿನಂತೆ ಘನಘೋಷದಂತೆ ನಿ-
ರ್ಝರರವದಂತೆ ದುಂದುಭಿ ಸ್ವನದಂತೆ ಕೋಗಿಲೆ
ವರನಾದದಂತೆ ಘಂಟಾ ನಿನದದಂತೆ ಬಂ-
ಧುರದ ಶಂಖಧ್ವಾನದಂತೆ ಕೋಗಿಲೆ
ಮುರಜೆಯ ಸ್ವನದಂತೆ ವಾಸದ ಧ್ವನಿಯಂತೆ
ಮೊರೆವಳಿಯ ಝೇಂಕಾರದಂತೆ ಕೋಗಿಲೆ
ನೆರೆದ ಕಿಂಕಿಣಿಯ ಮೇಲುಲಿಯಂತೆ ವೀಣೆಯಿಂ-
ಚರದಂತೆ ಪೂಸವರಿಗಳಿಂದ ಕೋಗಿಲೆ ‖ ೨ ‖

ಯೋಗಿಗಳಿಗಣಿಮಾದಿ ಸಿದ್ಧಿಗಳು ವಾದಿಗಳಿ-
ಗಾಗಮಂಗಳು ಚಂದನಾದಿ ಕೋಗಿಲೆ
ಭೋಗಿಗಳಿಗೊಲವೀವ ಸವಿಗಲೆಯೊಳಿಹ ಪರ ವಿ-
ರಾಗಿಗಳಿಗಹ ಸುಖಾಳಿಗಳು ಕೋಗಿಲೆ
ಬೇಗದೊಳು ನಿನ್ನ ಧ್ವನಿಗೇಳಿ ಕೈಸಾರುತಿಹ-
ವಾಗಿ ಗುರುಶಂಭುಲಿಂಗವನು ಕೋಗಿಲೆ
ಕೂಗಿ ಕರದೆನಗೆ ತೋರಿಸಿದೆ ನಿನ್ನಂತೆ ಸುಖಿ-
ರಾಗಿ ಮತ್ತಾರುಂಟು ಕೋಗಿಲೆ || ೩ ||

ಹೀಗೆಂದು ಗುರುಕರುಣೆಗಾಗಿ ಹಾಡಿ ಹಾರೈಸುವರು. ನಾುಡೆ,

ಬಸವಲಿಂಗ ಯೋಗೀಶ್ವರ! ನಿನ್ನ ಅಪ್ಪಣೆಯಂತೆ ಅನುಷ್ಠಿಸಿದ ನನ್ನ ಈ ಹನ್ನೆರಡು ವರುಷದ ತಪಃಪ್ರಭಾವವನ್ನು ತಾತ್ವಿಕ ಫಲವನ್ನು ಸಮಾಜದ ಉನ್ನತಿಗೆ ಉದ್ಧಾರಕ್ಕೆ ಧಾರೆಯೆರೆವೆನು, ಸೂರೆಗೈವೆನು. ಈ ಲೋಕದಲ್ಲಿ ನನ್ನದೆಂಬುದು ಯಾವುದು ಇಲ್ಲ. ಸಮಾಜದ ಸೇವಾ ಸೌಭಾಗ್ಯವೊಂದೇ ನನ್ನದು. ಸಮಾಜದ ಅಜ್ಞಾನ ವಿಮುಕ್ತಿಯೆ ನನ್ನ ವಿಮುಕ್ತಿ. ಸಮಾಜದ ವಿದ್ಯಾ ಪ್ರಾಪ್ತಿಯೆ ನನ್ನ ಪ್ರಾಪ್ತಿ. ಸದ್ಧರ್ಮದ ಉದ್ಧಾರವೆ ನನ್ನ ಉದ್ಧಾರ. ಶಿವಯೋಗದ ಅಭ್ಯುದಯವೆ ನನ್ನ ಅಭ್ಯುದಯ. ನನಗೆ ಇದಕ್ಕಿಂತ ಬೇರೆ ಜೀವಿತ ಲಕ್ಷ್ಯವಿಲ್ಲ. ಇದಕ್ಕೆ ನಿನಗಿಂತ ಬೇರೆ ಸಾಕ್ಷ್ಯವಿಲ್ಲ. ಸಮಾಜಕ್ಕಾಗಿ ಆತ್ಮಶಕ್ತಿಯನ್ನು ಪ್ರಜಾಶಕ್ತಿಯನ್ನು ಕೇಂದ್ರೀಕರಿಸಿ ಕೆಲಸಮಾಡುವೆನು. ಸೊಗಸು ನೋಡೆನು. ಸಮಾಜೋನ್ನತಿಯ ಸೊಗಸೆ ನನ್ನ ಸೊಗಸು. ಸಮಾಜದ ಚಿರಾಯುಷವೆ ನನ್ನ ಆಯುಷ. ಸಮಾಜ ಸೇವೆಗೈದು ಒಂದುದಿನ ಬದುಕಿದರ ನಾಲದೇನು? ಅದು ಸಾವೇನು? ಅದುವೆ ಮಹಾನವಮಿ ಯಾಗದೇನು?

ಯೋಗೀಶ್ವರ! ನೀನು ಅನುಗ್ರಹಿಸಿದ ಬುದ್ಧಿಶಕ್ತಿಯಿದೆ, ಶುದ್ಧಿ ಸಂಪತ್ತಿಯಿದೆ. ಸಮಾಜವನ್ನು ಸಂಯುಕ್ತಗೊಳಿಸುವ ಸಿದ್ಧಿಯೊಂದನು ಆಶೀರ್ವದಿಸು. ಇದೊ ನೀನು ಆಶೀರ್ವದಿಸಿದೆಯಾದರೆ ಈಗಳೆ ಇಲ್ಲಿಂದ ಹೊರಡುವೆನು. ತಪದ ತಳಮಿ ಸಾಕಿನ್ನು. ನಮೆಮು ನಣ್ಣಾಗುವ ಸಮಾಜದ

ಆರ್ತತೆಯು ಕರೆ ಗಾಳಿಗೂಡಿ ಬರುತಿದೆ. ಇನ್ನಿರಲಾರೆ, ಸಹಿಸಲಾರೆ, ಎಲ್ಲಿ ದೇವ, ಆಶ್ವಾಸನವೀಯದೆ ಎಲ್ಲಿ ಅಡಗಿರುವೆ? ಅಡಗಿದ ಬೆಡಗನು ಬಿಟ್ಟು ಬಲುಹನು ತೋರೆಯಾ? ಬಾರೆಯಾ?

ಯಾವ ರೂಪದಿಂದ ಬರಲೆಂದು ಚಿಂತಿಸುವಿಯಾ? ಯಾವ ರೂಪಾದ ರೇನು? ಯಾವ ಮುಖವಾದರೇನು? ನಿನ್ನ ಕರುಣೆಯೆ ನನಗೆ ಮುಖ್ಯ. ಅದು ಯಾವ ರೂಪದಿಂದಲಾದರು ಬರಲಿ, ಅದು ನಿನ್ನದೆ. ನೀನಲ್ಲದೆ ಇನ್ನಾರು ಕರುಣಿಸುವವರು? ಇನ್ನಾರ ಕರುಣೆಯೂ ನನಗೆ ಬೇಕಿಲ್ಲ. ನಾನು ನಿನ್ನ ಕಂದ. ನೀನು ನನ್ನ ತಂದೆ. ನಿನ್ನ ಕಂದನ ಮೇಲೆ ನಿನಗೆ ಕರುಣ ವಿಲ್ಲವೆ? ನಿನ್ನ ಕಂದನನ್ನು ಕಂಡವರ ಕರುಣೆಗೆ ಒಪ್ಪಿಸುವುದು ನಿನ್ನ ಧರ್ಮವೆ? ಅದೇ ನನ್ನ ಕರ್ಮವೆ? ಅಲ್ಲದಿರೆ ಬೇಗ ಬಾ! ಕರುಣ ಕಿರಣ ಕಾಣಿಸು. ಕರುಳ ಶಂಕೆಯ ಮಾಣಿಸು. ಸಮಾಜಸೇವೆಗೆ ಸಾಗಿಸು ಎಂದು ಆರ್ತತೆಯುಲಿ ಆಲಾಪಿಸುವರು, ಆತ್ಮೀಯತೆಯುಲಿ ಆಹ್ವಾನಿಸುವರು.

ಹೀಗಿರಲು ಒಂದು ದಿನ ಹುಣ್ಣಿಮೆ. ಹಾಲು ಚೆಲ್ಲಿದಂತೆ ಬೆಳದಿಂಗಳು ಬಿದ್ದಿತ್ತು. ಸ್ವಾಮಿಗಳವರು ಒಂದು ಎತ್ತರದ ಕಲ್ಲುಬಂಡೆಯ ಮೇಲೆ ಕುಳಿತು ಜೀವನಜಂಜಡಕ್ಕೆ ಪರಿಹಾರವೇನೆಂದು ಯೋಚಿಸುತ್ತಿದ್ದರು. ಮನದ ಮಾಯಾ ಪಟಲ ಹರಿವುದೆಂದಿಗೆ ಎಂದು ಬೇಗುದಿಗೊಳ್ಳುತ್ತಿದ್ದರು. ಅಜ್ಞ ಸಮಾಜಕ್ಕೆ ಅರಿವು ತರುವ ಶಕ್ತಿ ಮೈಗೂಡಿಬರುವುದಿನ್ನೆಂದಿಗೆ ಎಂದು ಚಿಂತಿಸು ತ್ತಿದ್ದರು. ಗುರುವೆ, ಕಲ್ಪದ ತರುವೆ! ಇನ್ನೂ ನಿನ್ನ ಮನಸ್ಸು ಕರಗಲಿಲ್ಲವೆ? ಅಂದು ನಿನ್ನ ಕರುಣಾಜನಕ ಕೋಮಲ ಕಂಠದಿಂದ ಕುಮಾರಾ ಎಂದು ಕೂಗಿದೆ. ಕೈವಿಡಿದು ತಲೆದಡವಿ ಸೇವರಿಸಿದೆ. ಇಂದೆಲ್ಲಿ? ಕಾಣದಂತೆ ಏಕೆ ಇರುವೆ? ತಲ್ಲಣಿಸಿದ ಹೃದಯಕ್ಕೆ ತಣ್ಣೀರು ಎರೆಯಲಾರೆಯಾ? ಕಾಣದ ಕಣ್ಣಿಗೆ ಕಿರಣವ ತೋರಲಾರೆಯಾ? ಎಂದೆನ್ನುವಷ್ಟರಲ್ಲಿ ಅವರ ಕಣ್ಮುಂದೆ ಕೋಲ್ಮಿಂಚು ಮಿಣುಕಿದಂತಾಯಿತು. ಮೈ ಜುಮ್ಮೆಂದಿತು. ತೆರೆದ ಕಣ್ಣುಗಳು ತೆರದಂತೆಯೆ ಇದ್ದವು. ಅವುಗಳ ಮುಖದಲ್ಲಿ ಆ ಮಿಂಚಿನ ತೇಜಸ್ಸು ಹೊರಟುಹೋಗಿ ಅಂತರಂಗವನ್ನು ಆವರಿಸಿ ಬಿಟ್ಟಿತ್ತು. ಅಪಾರ ಬೆಳಗ ಮೂಡಿತ್ತು. ಚಂದಿರನು ಹೊರಗಿನ ಸೃಷ್ಟಿಯನ್ನು ಬೆಳಗಿದಂತೆ ಚಿಜ್ಯೋತಿಯು ಚಿತ್ತದ ಪ್ರಪಂಚವನ್ನು ಬೆಳಗಿತು. ವಿಲಕ್ಷಣವಾದ ಶಕ್ತಿ

ವ್ಯೊಗೂಡಿತು. ಯೋಚಿಸುತ್ತಿರುವ ಯೋಚನೆಗಳೆಲ್ಲ ಬಯಲಾಗಿ ಆತ್ಮಸ್ಫೂರ್ತಿ ಸ್ಫುರಿಸಿತು. ಹಾಗೆಯೆ ಎದ್ದು ಬಂದು ಹರ್ಷಚಿತ್ತದಿಂದ ಸಿದ್ಧೆಹೋದರು.

"ನಿಮಿಷವಾಗಲಿ ನಿಮ್ಮ ನೆನಹು ನಿಂದೊಡೆ ಮುಕ್ತಿ"

ಬೆಳಗಾಯಿತು. ಬಾಂದಳದಿ ಜಗಚ್ಚಕ್ಷುವು ಮೊಮ್ಮೂಡಿದನು. ಹೊಂಬೆಳಗ ಹರಡಿದನು. ಮರ ಮಣ್ಣುಗಳ ಹೊನ್ನಾಗಿಸಿದನು. ಹಕ್ಕಿಗಳ ಹಾರಾಡಿಸಿದನು, ಹಾಡಿಸಿದನು.

ತಪಸ್ವಿಗಳಾದ ತೇಜಸ್ವಿಗಳಾದ ಸದಾಶಿವಸ್ವಾಮಿಗಳವರು ಆ ಹಕ್ಕಿಗಳ ಹಾಡಿನೊಡನೆ ಹೊರಹೊರಟರು. ತಮ್ಮ ತಾತ್ವಿಕ ತೇಜಸ್ಸನ್ನು ಸಮಾಜದಲ್ಲಿ ಚೆಲ್ಲಿ ಆ ಜಗಚ್ಚಕ್ಷುವಿನ ಕಾರ್ಯಕ್ಕಿಂತಲು ಮಿಗಿಲಾದ ಕಾರ್ಯ ನೆರವೇರಿಸಲು ಕಾಡ ಬಿಟ್ಟು ನಾಡ ಬಾಂದಳದಿ ಮೂಡಲು ನಾಗಿದರು. ಹಾಡುವ ಹಕ್ಕಿಗಳ ಕಲರವವೆ ಭಾವೀ ಚೈತ್ರಯಾತ್ರೆಗೆ ಜಯಮಂಗಳವಾಯಿತು. ಕಾಡಿನ ಕಿಬ್ಬದಿಯಲ್ಲಿ ಹಾಯ್ದುಹೋಗುತ್ತಿರುವಾಗ ವನಲತೆಗಳ ಬಗೆಬಗೆಯ ಬಣ್ಣದ ನರುಗಂಪಿನ ಹೂಗೊಂಚಲುಗಳು ಸ್ವಾಮಿಗಳವರ ವಿಶಾಲವಾದ ಎದೆಯ ಮೇಲೆ ಬಾಗಿ ತೂಗುತ್ತಿದ್ದುದು ಹಾರಹಾಕಿ ಕೈಮುಗಿಯುವಂತಿದ್ದಿತು.



# ಜನತಾಜಾಗ್ರತಿ - ಜನಿತಕೀರ್ತಿ

ಮೆಟ್ಟಿದ ನೆಲ ಕ್ಷೇತ್ರವನ್ನಾಗಿ ಮುಟ್ಟಿದ ವಸ್ತು ಪವಿತ್ರವನ್ನಾಗಿ ಮಾಡುತ್ತ ಸದಾಶಿವಸ್ವಾಮಿಗಳವರು ನಾಡೊಳಗೆ ನಡೆದರು. ಹಳ್ಳಿಯಲ್ಲಿ ಒಂದಿರುಳು ಪಟ್ಟಣದಲ್ಲಿ ಐದಿರುಳು ಕಳೆಯುತ್ತ ಧರ್ಮ ನೀತಿ ದಾನ ದುಡಿಮೆ ಗಳನ್ನು ಅಲ್ಲಲ್ಲಿಗೆ ತಕ್ಕಂತೆ ಬೋಧಿಸುತ್ತ ಜನಜಾಗ್ರತಿ ಮಾಡುತ್ತ ಅಭಿನವ ಅಲ್ಲಮರಂತೆ ಸುಳಿದರು. ಪ್ರಜಾ ಪ್ರಗತಿಯೆ ಪ್ರತಿಫಲವಲ್ಲದೆ ಬೇರೆ ಯಾವ ವಿಧವಾದ ಪ್ರತಿಫಲಾಕಾಂಕ್ಷೆಯಿಲ್ಲದೆ ಸದ್ಬೋಧೆಯನ್ನು ಮುಂದುವರಿಸು ತ್ತಿದ್ದರು; ಮುಂದಾರಿ ತೋರುತ್ತಿದ್ದರು.

ಸ್ವಾಮಿಗಳವರ ವಾಣಿಯಲ್ಲಿ ಹೃದಯವಿತ್ತು, ವೈಭವವಿತ್ತು : ಮಾಧುರ್ಯ ವಿತ್ತು. ಅವರು ಬರೀ ಮಾತಿನ ಮಲ್ಲರಲ್ಲ. ತಾವು ಆಚರಿಸುತ್ತಿರುವುದನ್ನೆ ಅನ್ಯರಿಗೆ ಉಪದೇಶಿಸುತ್ತಿದ್ದರು. ಪರಿಪೂರ್ಣ ಮನಸ್ಸಿನಿಂದ ಜನಜಾಗ್ರತಿ ಯನ್ನು ಬಯಸುತ್ತಿದ್ದರು. ಜನಜಂಗುಳಿಯಲ್ಲಿರುವ ಅಜ್ಞಾನ ಅಲಸಿಕೆ ಗಳನ್ನು ಕಂಡು ಮಮ್ಮಲ ಮರುಗುತ್ತಿದ್ದರು. ಮನ ಮುಟ್ಟುವಂತೆ ಕೂರಿಸಿ ಕೊಂಡು ತಿಳಿ ಹೇಳುತ್ತಿದ್ದರು, ತಿಳಿವಿಗೆ ತರುತ್ತಿದ್ದರು.

ಮನುಷ್ಯನಿಗೆ ಉದ್ಯೋಗ ವಿದ್ಯೆ ಎರಡೂ ಮುಖ್ಯವಾದವುಗಳು. ಒಂದು ಬಾಹ್ಯಜೀವನವನ್ನು ತೊಂದರೆಯಿಲ್ಲದೆ ಸುಖಮಯವಾಗಿ ಮಾಡಿದರೆ ಇನ್ನೊಂದು ಒಳ ಜೀವನವನ್ನು ಕಾರ್ಗತ್ತಲೆಗೆ ಕೆಡವದೆ ಕ್ರಮಮಾರ್ಗದಲ್ಲಿ ಕಾಪಾಡಬಲ್ಲುದು. ಮನುಷ್ಯನಿಗೆ ಶಾರೀರಕ ಬೌದ್ಧಿಕ ದುಡುಮೆಗಳೆರಡು ಅತ್ಯಗತ್ಯವಾದವು. ಕೃಷಿಯೆ ಕಾಯಕಷ್ಟ. ವಿದ್ಯೆಯೆ ಬೌದ್ಧಿಕ ಶ್ರಮ. ಇವೆರಡೂ ಮನುಷ್ಯನಿಗೆ ಬೇಕೇ ಬೇಕು.

ವಿದ್ಯೆಯಿಂದ ಮನುಷ್ಯನು ಸುಸಂಸ್ಕೃತನಾಗುತ್ತಾನೆ. ಸದ್ಗುಣಶಾಲಿ ಯಾಗುತ್ತಾನೆ. ಪ್ರಭಾವಶಾಲಿಯಾಗುತ್ತಾನೆ. ಪ್ರಜಾದರ್ಶ ಜೀವಿಯಾಗುತ್ತಾನೆ. ಕೃಷಿಕಷ್ಟದಿಂದ ಸಶಕ್ತನಾಗುತ್ತಾನೆ. ಶ್ರೀಮಂತನಾಗುತ್ತಾನೆ. ಸುಖಜೀವಿ ಯಾಗುತ್ತಾನೆ. ಮನಸ್ಸುಮಾಡಿದರೆ ತ್ಯಾಗಮಾಡಿ ಪರಹಿತದ ಪುಣ್ಯ

ಪಡೆಯುತ್ತಾನೆ—ಎಂದು ಮುಂತಾಗಿ ಹೇಳಿ ಹಳ್ಳಿಯ ಜನರನ್ನು ಎಚ್ಚರಿಸುತ್ತಿದ್ದರು; ವಿದ್ಯೆ ಉದ್ಯೋಗಗಳಿಗೆ ಪ್ರಚೋದಿಸುತ್ತಿದ್ದರು.

ಪರಸ್ಪರ ವೈಷಮ್ಯಬೇಡ, ವೈಮನಸ್ಸುಬೇಡ. ಸುಳ್ಳು ಕಳವುಗಳಿಂದ ಸುಖವಿಲ್ಲ. ಕಪಟ ಮೋಸಗಳಿಂದ ಶಾಂತಿಯಿಲ್ಲ. ಆತ್ಮಸ್ತುತಿ ಪರನಿಂದೆಗಳಿಗಿಂತ ಬೇರೆ ಅಪಮಾನವಿಲ್ಲ. ಇವನ್ನೆಲ್ಲ ಬಿಟ್ಟು ನೀತಿ ರೀತಿಗಳಿಂದ ನಡೆವುದೆ ನಿಜವಾದ ನಾಗರಿಕತೆ. ನಡೆವವನೆ ನಿರ್ದುಷ್ಟ ನಾಗರಿಕ ಎಂದು ಅನೇಕ ಬಗೆಯಾಗಿ ನಗರ ನಿವಾಸಿಗಳನ್ನು ಕುರಿತು ಬೋಧಿಸುತ್ತಿದ್ದರು. ಅಷ್ಟೆ ಅಲ್ಲದೆ,

ಋತುಗಳು ನಮಗಾಗಿ ಮರಳಿ ಮರಳಿ ಬರುತ್ತವೆ. ಸೂರ್ಯಾದಿ ಗ್ರಹಗಳು ಪ್ರತಿನಿತ್ಯ ತಪ್ಪದೆ ಮಿಣಗುತ್ತವೆ. ತಿರೆಯು ಘನರೂಪತಾಳಿದೆ. ವಿವಿಧ ವನಸ್ಪತಿಗಳಿಗಾಗರವಾಗಿದೆ. ವನಸ್ಪತಿಗಳು ವರುಷ ವರುಷವು ಹಳೆಯದನ್ನು ಹಳಚಿ ಹೊಸ ಚಿಗುರು ಹಾಕುತ್ತವೆ. ಹೊಸರೂಹು ತೋರುತ್ತವೆ. ಹೊಸಹೂವು ಹೊಸಕಾಯಿ ಕೊಡುತ್ತವೆ. ಇವೆಲ್ಲ ಯಾರಿಗಾಗಿ?

ನಾವು ಮಾತ್ರ ನಮ್ಮ ವೃತ್ತಿ ಪ್ರವೃತಿಗಳನ್ನು ಬದಲಿಸುವುದಿಲ್ಲ. ಆಚಾರ ವಿಚಾರಗಳನ್ನು ಬೆಳಸುವದಿಲ್ಲ. ಸತ್ಕಾರ್ಯ ಔದಾರ್ಯಗಳನ್ನು ಬಳಸುವದಿಲ್ಲ. ಸೃಷ್ಟಿಯ ಪಾಠವನ್ನು ವೃಷ್ಟಿಗೆ ತಂದುಕೊಳ್ಳುವುದಿಲ್ಲ.

ಸ್ವಾರ್ಥ ಸಂಕುಚಿತ ಮನೋಭಾವವನ್ನು ತ್ಯಜಿಸಿ ಸಾರ್ಥಕಜೀವಿಗಳಾಗಬೇಕು. ಆಲಸ್ಯ – ಅಸಹ್ಯ ವೃತ್ತಿ ಪ್ರವೃತ್ತಿಗಳನ್ನು ದೂರೀಕರಿಸಿ ಚಾಕಚಕ್ಯತೆ ಚಾಣಾಕ್ಷತೆಗಳಿಂದ ಮುಂದುವರಿಯಬೇಕು. ಅನೀತಿಯಿಂದ ನೀತಿಗೇರಬೇಕು. ಅಸತ್ಯದಿಂದ ಸತ್ಯಕ್ಕೆ ಸೇರಬೇಕು.

ಪ್ರತಿಯೊಬ್ಬರು ಪ್ರತಿದಿನವು ತಮ್ಮ ಜೀವನದಲ್ಲಿ ಏರುವೆವೊ ಇಳಿಯುವೆವೊ ಎಂಬುದನ್ನು ವಿಚಾರಿಸಿಕೊಳ್ಳಬೇಕು. ಏರಿದರೆ ಲೇಸು, ಇಳಿದರೆ ತ್ರಾಸು.

ಆದ್ಯ ಆಚಾರ್ಯರು, ಬಸವ ಬುದ್ಧರು ಏರು ಬಾಳಿನಿಂದ ಆದರ್ಶವ್ಯಕ್ತಿಗಳಾಗಿದ್ದಾರೆ. ನೈತಿಕ ನಡೆನುಡಿಗಳಿಂದ ಜೀವಂತ ವ್ಯಕ್ತಿಗಳಾಗಿದ್ದಾರೆ, ಜ್ವಲಂತ ಜ್ಯೋತಿಗಳಾಗಿದ್ದಾರೆ. ಅವರ ನಡೆನುಡಿ ನಮ್ಮ ಜೀವನದ ಮುನ್ನುಡಿ; ಬಾಳಿನ ಕೈಗನ್ನಡಿ. ಅವನ್ನು ಬಿಟ್ಟರೆ ನಮ್ಮ ಏರುವೇರುಗಳನ್ನು

ಅಸ್ತವ್ಯಸ್ತಗಳನ್ನು ತಿದ್ದಿ ಸರಿಪಡಿಸಿಕೊಳ್ಳಲಾರೆವು, ಕೊಳ್ಳುತ್ತಿಲ್ಲ. ಅದರಿಂದ ನಾವೀಗ ಇಳಿಬಾಳಿನಲ್ಲಿದ್ದೇವೆ; ಇಳೆಗೆ ಭಾರಾಗಿದ್ದೇವೆ.

ಅವರ ಕನ್ನಡಿಯನ್ನು ಮುಂದಿಟ್ಟುಕೊಂಡು ನಮ್ಮ ಜೀವನ ಸೌಂದರ್ಯ ವನ್ನು ಹೆಚ್ಚಿಸಿಕೊಳ್ಳಬೇಕು. ಅವರ ಹಿತನುಡಿಯ ಮುನ್ನುಡಿಯಿಂದ ನಮ್ಮ ಜೀವನ ಚರಿತ್ರೆಯನ್ನು ಸಮಗ್ರವನ್ನಾಗಿ ಸಮರ್ಪಕವನ್ನಾಗಿ ಮಾಡಿಕೊಳ್ಳ ಬೇಕು.

ದಾರಿಹಿಡಿದು ಸಾಗುವುದು ಮಾನವನ ಗುಣಗಳಲ್ಲಿ ಒಂದು ದೊಡ್ಡ ಗುಣ. ಆದರೆ ಅದನ್ನು ಕೇವಲ ಭೌತಿಕದಲ್ಲಿ ಮಾತ್ರ ಅನುಸರಿಸುತ್ತೇವೆ. ಅಂದರೆ ಬೇರೆ ಊರಿಗೆ ಇಲ್ಲವೆ ಹೊಲನೆಲಗಳಿಗೆ ಹೋಗುವಾಗ ಮಾತ್ರ ಅನುಸರಿಸುತ್ತೇವೆ. ಅದೇ ನೈತಿಕ ಧಾರ್ಮಿಕ ಆಧ್ಯಾತ್ಮಿಕ ವೈಜ್ಞಾನಿಕ ಹೆದ್ದಾರಿಗಳಿದ್ದರು ಅವು ನಮ್ಮ ಕಣ್ಣಿಗೆ ಕಾಣುವದಿಲ್ಲ. ಅವುಗಳಲ್ಲಿ ಕಾಲಿಟ್ಟು ನಡೆಯುವದಿಲ್ಲ. ದಾರಿತಪ್ಪಿ ನಡೆದು ಬಳಲುವವರೆ ಬಹುಮಂದಿ. ಇವಕ್ಕಿಂತ ವಿಪರೀತವುಂಟೆ, ವಿಷಾದವುಂಟೆ ?

ಹೋಗಲಿ, ನಿಸರ್ಗದ ಅನುಕರಣವನ್ನಾದರೂ ಮಾಡುತ್ತಿರುವೆವೆ ? ಅಲ್ಲಿಯೂ ಅಂಧರಾಗಿದ್ದೇವೆ; ಅಂಧಕಾರದಲ್ಲಿದ್ದೇವೆ. ನಿದರ್ಶನಕ್ಕಾಗಿ ನೋಡಿರಿ.

ಹೂವುಗಳು ದಿನದಿನವೂ ಅರಳುತ್ತವೆ, ಸರುಗಂಪ ಬೀರುತ್ತವೆ. ನಮ್ಮ ಹೃದಯ ಕುಸುಮಗಳು ಹಾಗೆ ಅರಳುತ್ತಿವೆಯೆ ? ಪ್ರತಿಯಾಗಿ ಮುದುಡಿ ಮಂಕಾಗುತ್ತಿವೆ. ಇದು ಚೋದ್ಯವಲ್ಲವೆ, ಚಿಂತಾಜನಕವಲ್ಲವೆ ? ಮಾನವ ಹೃದಯ ಪ್ರತಿದಿನ ಅರಳಬೇಕು ; ಅನುಕಂಪ ಬೀರಬೇಕು.

ವನಲತಾದಿಗಳು ಆಗಾಗ ಚಿಗುರುತ್ತವೆ; ಚೆಂಬಣ್ಣದ ಚಿಮ್ಮುತ್ತವೆ. ನಮ್ಮ ಮತಿ ಮತ್ತು ಪ್ರೀತಿಲತೆಗಳು ಮೊಟಕಾಗುತ್ತಿವೆ. ಅವು ತಮ್ಮ ಚೆಂಬಣ್ಣದಿಂದ ಚಂದಾಗಿ ತೋರಿ ಎಲ್ಲರಿಗು ಮುದ್ದಾಗುತ್ತವೆ. ನಾವು ದುರ್ಮತಿಯಿಂದ ಕ್ರೋಧಾವೇಶದಿಂದ ಭೀಕರವಾಗಿ ತೋರಿ ಮತ್ತೊಬ್ಬರ ಒಲುಮೆಗೆ ವಂಚಿತರಾಗುತ್ತಿದ್ದೇವೆ. ವಿದ್ವೇಷಕ್ಕೆ ಕಾರಣರಾಗುತ್ತಿದ್ದೇವೆ. ತರುಲತಾದಿಗಳಿಗಿಂತಲೂ ತೀರ ಹೀನರಾಗಿ ದೀನರಾಗಿ ಬಾಳುವುದು ಮಾನವನಿಗೆ ಹಾಸ್ಯಾಸ್ಪದವಲ್ಲವೆ ? ಹೀನಾಸ್ಪದವಲ್ಲವೆ ?

ಪರಹಿತಕ್ಕಾಗಿ ಜಲ ಪ್ರವಹಿಸುತ್ತಿದೆ. ಪರಹಿತಕ್ಕಾಗಿ ನೆಲ ಬೆಳೆಯುತ್ತಿದೆ. ಪರಹಿತಕ್ಕಾಗಿ ಬೆಂಕಿ ಪ್ರಜ್ವಲಿಸುತ್ತಿದೆ. ಗಾಳಿ ಸುಳಿಯುತ್ತಿದೆ. ಪರೋಪಕಾರಕ್ಕಾಗಿಯೆ ಮರ ಫಲಿಸುತ್ತಿವೆ. ಹಸು ಕರೆಯುತ್ತಿವೆ. ಆದರೆ ಮನುಷ್ಯನು ಪರಹಿತಮಾಡುವುದೊಂದೆಡೆಗಿರಲಿ ಸ್ವಹಿತಕ್ಕಾದರು ಸತ್ಕಾರ್ಯಗಳನ್ನು ಮಾಡಲಾರದವನಾಗಿದ್ದಾನೆ, ಮಾತಾಡಲಾರದವನಾಗಿದ್ದಾನೆ. ಅದೇನು ಕಾಲಗುಣವೊ, ಕರ್ಮಗುಣವೊ ?

ದಿನ ದಿನಕ್ಕೆ ಮಾನವನು ಮನುಷ್ಯತ್ವದಿಂದ ಹಿಂದಕ್ಕೆ ಹೋಗುತ್ತಿದ್ದಾನೆ. ತನ್ನ ಉದಾತ್ತ ಶಕ್ತಿಯಿಂದ ವಂಚಿತನಾಗುತ್ತಿದ್ದಾನೆ. ಉನ್ನತಸ್ಥಾನದಿಂದ ಚ್ಯುತನಾಗುತ್ತಿದ್ದಾನೆ. ವಿಶ್ವಶಾಂತಿಗೆ ಜಲಾಂಜಲಿಯನ್ನೀಯುತ್ತಿದ್ದಾನೆ, ನೀಲಾಕಾಶವನ್ನು ನೋಡುತ್ತಿದ್ದಾನೆ.

ಆತ್ಮನೀತಿಗಾಗಿ ಆತ್ಮಪ್ರಗತಿಗಾಗಿ ಆರಂಭವಿಲ್ಲ. ಪರಿಪೂರ್ಣತೆಗಾಗಿ ಪರಿಶ್ರಮವಿಲ್ಲ. ಪಶುಜೀವನ ಪಾಮರಜೀವನಗಳಿಗೆ ಪಾಲುಪಾರಿದ್ದೇವೆ, ಪಾಳು ಬೀಳುತ್ತಿದ್ದೇವೆ.

ಋತುಗಳು ಮರಳಿ ಮರಳಿ ಸುಳಿವಂತೆ ನಮ್ಮಲ್ಲಿ ರುಜುಗುಣಗಳು ಮತ್ತೆ ಮತ್ತೆ ಮೂಡಿಬರುತ್ತಿರಬೇಕು. ಗ್ರಹಗಳಂತೆ ಮಾನವರು ಜ್ಞಾನ ವಿಜ್ಞಾನಗಳಿಂದ ಜೀವನಾಕಾಶದಲ್ಲಿ ಮಿರ್ರನೆ ಮಿಣುಗಬೇಕು. ಭೂಮಿಯಂತೆ ಸಹನಶಕ್ತಿ ಭೂರುಹಗಳಂತೆ ಪರಹಿತಾಸಕ್ತಿ ಮೈದಾಳಿಬರಬೇಕು. ಆಗ ಮಾನವನು ಮಾನವನಾಗುತ್ತಾನೆ, ಮಹೋನ್ನತನಾಗುತ್ತಾನೆ ಎಂದು ಉದ್ಬೋಧಿಸುತ್ತಿದ್ದರು, ಉತ್ತೇಜನಕೊಡುತ್ತಿದ್ದರು. ಇದರಿಂದಾಗಿ ಸ್ವಾಮಿಗಳವರ ಸತ್ಯಕೀರ್ತಿ ಸುತ್ತು ಹಬ್ಬಿತು.

ಹೀಗೆ ಬೋಧಿಸುತ್ತ ಒಮ್ಮೆ ಸೊರಬಪ್ರಾಂತಕ್ಕೆ ದಯೆಮಾಡಿಸುತ್ತಾರೆ. ಸ್ವಾಮಿಗಳ ಕೀರ್ತಿವಾರ್ತೆಯನ್ನು ಮೊದಲೆ ಕೇಳಿ ತಿಳಿದಿದ್ದ ಉಳವಿಮಠದ ಗುರುಬಸವಯ್ಯನವರು, ಮಳಗದ್ದಿ ಕೆಂಡಪ್ಪಗೌಡರು ಎಂಬ ಆ ಭಾಗದ ಪ್ರಮುಖರಿಬ್ಬರು ಸ್ವಾಮಿಗಳವರ ಸನ್ನಿಧಿಗೆ ಬಂದು ಸಂದರ್ಶನ ಪಡೆದು ಸಂಭಾಷಣೆ ಕೇಳಿ ಮನಮೆಚ್ಚಿ ಶಿಷ್ಯರಾಗುತ್ತಾರೆ. ಇವರುಗಳ ಆತ್ಮೀಯ ಆಗ್ರಹದ ಮೇರೆಗೆ ಅಲ್ಲಿ ಕೆಲವು ದಿನ ನಿಲ್ಲುವ ಪ್ರಸಕ್ತಿ ಪ್ರಾಪ್ತವಾಗುತ್ತದೆ.

ಆಗ ಸ್ವಾಮಿಗಳು ಸುಮ್ಮನಿರದೆ ವಿಚಾರ ಬೋಧೆಯೊಡನೆ ಆಚಾರ ಬೋಧೆಯು ನಡೆಯಲೆಂಬ ಸಮುದ್ದೇಶದಿಂದ ಆ ಭಾಗದಲ್ಲೆಲ್ಲ ಪ್ರಸಿದ್ಧವಾಗಿದ್ದ ಕೆಳದಿ ರಾಜರ ಪಂಚಮಠಗಳಲ್ಲೊಂದಾದ ಕ್ಯಾಸನೂರು ಮಠದಲ್ಲಿರುವ 'ಪಟ್ಟಾಧ್ಯಕ್ಷರಾದ ಗುರುಬಸವಸ್ವಾಮಿಗಳವರ' ಗದ್ದುಗೆಯಲ್ಲಿ ಮರಳಿ ಅನುಷ್ಠಾನ ಆರಂಭಿಸುತ್ತಾರೆ.

ಲಿಂಗಪೂಜೆಯೆಂದರೆ ಸ್ವಾಮಿಗಳವರಿಗೆ ತುಂಬಾ ಪ್ರೇಮ. ಆದರೂ ಅದನ್ನು ಸಮಯ ಸಿಕ್ಕಾಗ ಉಪಯೋಗಿಸುತ್ತಿದ್ದರು. ಜನತಾಸೇವೆಯ ಸಮಯದಲ್ಲಿ ಶಿವಪೂಜೆಯೆಂದು ಎಂದೂ ಕುಳಿತುಕೊಳ್ಳುತ್ತಿರಲಿಲ್ಲ. ಜನತಾ ಸೇವೆಯೆ ಜನಾರ್ದನ ಸೇವೆಯೆಂದು ಭಾವಿಸಿ ಅದರಂತೆ ನಡೆಯುವ ಕೆಲವೇ ಕೆಲವು ಮಹನೀಯರಲ್ಲಿ ಸ್ವಾಮಿಗಳು ನಿಜವಾಗಿಯೂ ಒಬ್ಬರಷ್ಟೇ ಅಲ್ಲ ಅಗ್ರಗಣ್ಯರು.

ಲಿಂಗಪೂಜೆಯಲ್ಲಿ ಲೀನವಾಗುವುದೆಂದರೆ ಅವರಿಗೊಂದು ಲೀಲಾಜಾಲ ವಾಗಿತ್ತು. ಲಿಂಗ ನೋಟ ಅವರಿಗೆ ಪರಮಸುಖವಾಗಿತ್ತು. ಲಿಂಗಸೇವೆ ಅವರಿಗೆ ಕ್ರೀಡಾಕಾಯಕವಾಗಿತ್ತು. ತ್ರಿಕರಣ ತುಂಬಿ ಕೆಲವು ದಿನ ತಪಸ್ಸು ಮಾಡಿದರು.

ಹರನರ್ಚನೆ, ಪುಷ್ಪವೃಕ್ಷಗಳಿಗೆ ಜಲಸೇಚನೆ ಮುಂತಾದ ಕಾಯತಪಸ್ಸ ನ್ನಾಚರಿಸಿದರು. ಶಿವಾನುಭವ ಗ್ರಂಥಪಠನ 'ಗುರುಭಜನೆ' ಬಂದ ಭಕ್ತ ವೃಂದಕ್ಕೆ ಹಿತಬೋಧನೆ ಮುಂತಾದ ವಾಚಕತಪಗೈದರು. ಶಮೆ ದಮೆ ಮಂತ್ರಜಪ ವಿವೇಕ ವಿರಕ್ತಿ ಯೋಗ ಮುಂತಾದ ಮಾನಸಿಕ ಅನುಷ್ಠಾನವನ್ನು ಆಚರಿಸಿದರು. ಹೆಚ್ಚು ಹೇಳುವದೇನು, ಒಂದು ಮಾತಿನಲ್ಲಿ ಹೇಳುವ ದಾದರೆ,

"ಬಚ್ಚ ಬರಿಯ ಚಿತ್ಸುಧಾರಸಾಂಬು ನಿಧಿಯೊಳು ಮುಳುಗಿ
ಎಚ್ಚರಿಲ್ಲದ ಅಮಳ ಸುಖದ ಸುಗ್ಗಿ ಪಡೆಯುತ
ಬಿಚ್ಚಿ ಬೇರೆ ದೋರದಂತೆ ಶಂಭುಲಿಂಗವನಪ್ಪಿ
ಎಚ್ಚರಡಗಿದ ಅಚ್ಚ ಪರವಶದೊಳು ನಿಂದೆನು."

ಎಂಬ ನಿಜಗುಣರ ನುಡಿಯಂತೆ ತಾವೇತಾವಾಗಿ ನಿಬ್ಬೆರಗಿನಲಿ ನಿಂದು ನಿರಾಳವಾದ ತಪವನಾಚರಿಸಿದರು.

ಅದರ ಪ್ರಭಾವದಿಂದ ಆಕರ್ಷಿತವಾದ ಜನತೆಯು ತಂಡೋಪತಂಡವಾಗಿ ದರ್ಶನಾಶೀರ್ವಾದಗಳಿಗೆ ಬರತೊಡಗಿತು. ಸ್ವಾಮಿಗಳ ಸಂತೋಷಕ್ಕೆ ಮೇರೆ ಯಿಲ್ಲದಾಯಿತು. ಆತ್ಮಸಾಕ್ಷಾತ್ಕಾರದಂತಹ ತಮ್ಮ ದಿವ್ಯ ಶಕ್ತಿಯನ್ನು ಭವ್ಯ ಸಂಪತ್ತನ್ನು ಜನತೆಯ ಕ್ಷೇಮಕ್ಕೆ ಜೀವನದ ಏಳಿಗೆಗೆ ಧಾರೆಯೆರೆದರು. ಜನಾಂಗದ ಒತ್ತಡ ಹೆಚ್ಚಿತು. ಸ್ವಾಮಿಗಳ ಸದ್ಬೋಧೆ ಸಾಂಗವಾಗಿ ಸಂತೃಪ್ತಿ ಕರವಾಗಿ ನಿತ್ಯವೂ ನಡೆಯತೊಡಗಿತು. ಜನಗಳು ಸ್ವಾಮಿಗಳ ಉಪದೇಶಾ ಮೃತದ ಸವಿಗೆ ಶಾಂತಿಕಲೆಯ ಶಿವಸ್ವರೂಪಕ್ಕೆ ಮನಸೋತರು, ಮುಗ್ಧರಾದರು.

ಈ ರೀತಿಯಾಗಿ ಭರದಿಂದ ಜನತಾಜಾಗ್ರತಿ ಜರಗತೊಡಗಿತು ; ಕೀರ್ತಿಯು ಜನಜನಿತವಾಗಿ ಹರಿದುಹಬ್ಬಿತು.



# ಮಠಾಧಿಪತ್ಯ - ಪಾಠಶಾಲಾಕೃತ್ಯ

ಅದೇ ಕಾಲಕ್ಕೆ ಸಮಾಜದ ವಿರಕ್ತ ಮುಖ್ಯ ಮಠಗಳಲ್ಲಿ ಒಂದಾದ ಚಿತ್ರದುರ್ಗ ಮಠಕ್ಕೆ ಮೂರ್ತಿಗಳಿಲ್ಲದಿತ್ತು. ಆ ಭಾಗದ ಪ್ರಮುಖರನೇಕರು ಯೋಚಿಸಿ ಯೋಗ್ಯಮೂರ್ತಿಗಾಗಿ ಹೆಸರುವಾಸಿಯಾದ ಸದಾಶಿವಸ್ವಾಮಿಗಳವರ ಬಳಿಗೆ ಬಂದರು, ಬಿನ್ನವಿಸಿಕೊಂಡರು. ಆದರೆ ಸಮಾಜಸೇವೆಗಾಗಿ ತ್ರಿಕರಣಗಳನ್ನು ಮೀಸಲಾಗಿರಿಸಿದ ಸ್ವಾಮಿಗಳು ಆ ಜಗದ್ಗುರು ಮಠಾಧಿಪತ್ಯಕ್ಕೆ ಮನಸ್ಸುಮಾಡಲಿಲ್ಲ. ಬಂದವರ ಆಗ್ರಹ ಅತಿಶಯವಾಯಿತು. ಅದಕ್ಕೆ ಸ್ವಾಮಿಗಳು ತಮಗೆ ಪರಿಚಯವಿದ್ದ ಮತ್ತೊಬ್ಬರ ಹೆಸರನ್ನು ಸೂಚಿಸಿದರು. ಅವರೇ ಈಗ ಬೃಹನ್ಮಠದಲ್ಲಿ ವಿರಾಜಿಸುತ್ತಿರುವ ಶ್ರೀ. ಮ. ನಿ. ಜ. ಜಯದೇವ ಮುರಘರಾಜೇಂದ್ರಸ್ವಾಮಿಗಳವರು. ಇವರು ಆಗ ಕಾಶಿಯಲ್ಲಿ ಓದುತ್ತಿದ್ದರು. ಸ್ವಾಮಿಗಳವರ ಸಹಾಯಕ್ಕೆ ಭಾಗಿಗಳಾಗಿದ್ದರು. ಇವರನ್ನು ಅಲ್ಲಿಂದ ಕರೆಯಿಸಿ ಬೃಹನ್ಮಠದ ಅಧಿಕಾರಕ್ಕೆ ಭಾಗಿಗಳನ್ನಾಗಿಮಾಡಿದರು.

"ಲೌಕಿಕ ಮತ್ತು ಪಾರಮಾರ್ಥಿಕ ವಿದ್ಯಾಭ್ಯಾಸಗಳನ್ನು ಮಾಡುತ್ತಿದ್ದ ನಮ್ಮ ಜನಾಂಗದವರಿಗೆ ಕೈಲಾದ ಮಟ್ಟಿಗೆ ಮೊದಲಿನಿಂದಲೂ ಸಹಾಯ ಮಾಡುತ್ತಿದ್ದರೆಂಬುದಕ್ಕೆ ಕಾಶಿಯಲ್ಲಿ ಅಭ್ಯಾಸಮಾಡುವಾಗ ನಮಗೂ ಇನ್ನಿತರರಿಗೂ ಸಹಾಯಮಾಡಿದುದೇ ನಿದರ್ಶನವಾಗಿದೆ.

ನಮ್ಮನ್ನು ಶ್ರೀ ೧೦೮ ಜಗದ್ಗುರು ಪೀಠಾಧಿಕಾರಕ್ಕೆ ಬರಮಾಡಿದವರು ಇವರೇ."

ಎಂದು ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಸ್ಮಾರಕ ಚಂದ್ರಿಕೆಗೆ ಸಂದೇಶ ಬರೆಯುತ್ತ ಈ ಮೇಲಿನಂತಹ ಮಾತುಗಳನ್ನು ಸ್ವತಃ ಚಿತ್ರದುರ್ಗದ ಮಹಾಸ್ವಾಮಿಗಳವರು ಬರೆದಿದ್ದಾರೆ. ಇದರಿಂದ ಸ್ವಾಮಿಗಳವರ ನಿರಾಶೆ ಪರಹಿತಾಭಿಲಾಷೆ ಎಷ್ಟಿದ್ದವೆಂಬುದು ವ್ಯಕ್ತವಾಗುತ್ತದೆ.

ಬಂದೊದಗಿದ ಈ ಪೀಠಾಧಿಪತ್ಯವನ್ನು ಈರೀತಿ ತಪ್ಪಿಸಿಕೊಳ್ಳುವಷ್ಟರಲ್ಲಿ ಮತ್ತೊಂದು ಮಠಾಧಿಪತ್ಯವು ಇವರನ್ನು ನಿರೀಕ್ಷಿಸಿಕೊಂಡು ಬಂದಿತು. ಅದೇ

ಹಾನಗಲ್ಲ ಮಠಾಧಿಪತ್ಯ. ಆ ಮಠಾಧಿಕಾರಿಗಳಾದ ಶ್ರೀ. ಮ. ನಿ. ಫಕೀರ ಸ್ವಾಮಿಗಳವರು ತೀರ ಮುಪ್ಪಿನವರಾಗಿದ್ದರು. ಧೀರ ವಿರತಿ ಸಂಪನ್ನರು ವಾಕ್‌ಸಿದ್ಧಿ ಸಮನ್ವಿತರು ಆಗಿದ್ದರು. ತಮ್ಮ ವೃದ್ಧಾಪ್ಯ ಕಾಲವಾದ್ದರಿಂದ ಉತ್ತರಾಧಿಕಾರವನ್ನು ಮತ್ತೊಬ್ಬ ಸಮರ್ಥವಟುವಿನ ಹೆಗಲ ಮೇಲಿರಿಸಲು ಮನಸ್ಸುಮಾಡಿದರು. ಮಂತ್ರಾಲೋಚನೆ ಮಾಡಿ ಒಂದು ನಿರ್ಧರಕ್ಕೆ ಬಂದರು. ಆ ಕ್ಷಣದಲ್ಲಿಯೆ ಅದೇ ನೂರಬ ಪ್ರಾಂತದ ಪ್ರಮುಖರಾದ ಮತ್ತು ಸದಾಶಿವಸ್ವಾಮಿಗಳಂತೆ ತಮಗೂ ಆಪ್ತಶಿಷ್ಯರಾಗಿದ್ದ ಶ್ರೀ ಉಳವಿ ಗುರುಬಸವಯ್ಯನವರಿಗು ಕೆಂಡಪ್ಪಗೌಡರಿಗು ಸಹ ಸ್ವಾಮಿಗಳವರನ್ನು ಹೇಗಾದರು ಮಾಡಿ ಕರೆದುಕೊಂಡು ಬರಲು ಕಾಗದ ಬರೆಯಿಸಿದರು. ಅದರಂತೆ ಈ ಇಬ್ಬರು ಆಪ್ತಶಿಷ್ಯರು ಸದಾಶಿವಸ್ವಾಮಿಗಳವರ ಹತ್ತಿರಕ್ಕೆ ಬಂದು ಮಹಾಸ್ವಾಮಿ, ತಮ್ಮ ತಪಸ್ಸಾಧನೆಗೆ ಸಮಾಜಸೇವೆಗೆ ವಾಕ್‌ಸಿದ್ಧಿಯುಳ್ಳ ಹಾನಗಲ್ಲ ಫಕೀರ ಮಹಾಸ್ವಾಮಿಗಳವರ ಕೃಪೆಯಾದರೆ ಇನ್ನೂ ಚೆನ್ನಾಗಿರುತ್ತದೆ. ಆದಕಾರಣ ಅಲ್ಲಿಗೆ ಹೋಗಿ ದರ್ಶನಪಡೆಯುವುದು ಒಳತಲ್ಲವೆ ? ಎಂದು ಬಿನ್ನವಿಸಿಕೊಂಡು ಉಪಾಯವಾಗಿ ಹಾನಗಲ್ಲಿಗೆ ಕರೆದುಕೊಂಡು ಹೋದರು. ಸ್ವಾಮಿಯ ದರ್ಶನವಾಯಿತು. ಫಕೀರಸ್ವಾಮಿಗಳವರು ತಮ್ಮ ಮಠದ ಉತ್ತರಾಧಿಕಾರದ ವಿಷಯವನ್ನು ಅಪ್ಪಣೆಮಾಡಿದರು. ಸ್ವಾಮಿಗಳವರು ಒಪ್ಪದೆ ನಾನೊಬ್ಬ ಸಮಾಜಸೇವಕ. ನನಗೇಕೆ ಈ ಬೃಹನ್ಮಠದ ಆಧಿಪತ್ಯ. ಅಪ್ಪಣೆಯಾದರೆ ಹೋಗಿಬರುವೆನು ಎಂದು ಹೇಳಿ ಹೊರಡ ಹತ್ತಿದರು. ನಿಲ್ಲಿಸಿ ತಮ್ಮಾ! ನಿನಗೆ ತಿಳಿಯದು. ಸಮಾಜ ಸೇವೆಗೆ ಬರೀ ಒಂದು ವ್ಯಕ್ತಿತ್ವ ಸಾಲದು. ಆಧಿಪತ್ಯದಿಂದ ಆಗುವಷ್ಟು ಆಗದು. ಮಠಾಧಿಕಾರವಹಿಸಿದರೆ ವ್ಯಕ್ತಿತ್ವಕ್ಕು ವಕ್ತೃತ್ವಕ್ಕು ಬೆಲಬರುತ್ತದೆ. ಅದರಿಂದ ಸಮಾಜಸೇವೆಯನ್ನು ಯಥೇಪ್ಸಿತವಾಗಿ ಮಾಡಬಹುದು. ಮಠಾಧಿಪತ್ಯವನ್ನು ವಹಿಸುವುದು ಸಮಾಜಸೇವೆಗಾಗಿಯೆ ಹೊರತು ಸ್ವಾರ್ಥಕ್ಕಾಗಿಯಲ್ಲ. ಆದ್ದರಿಂದ ಗುರುವಚನವನ್ನು ಮೀರಬೇಡ. ಅಧಿಕಾರಕ್ಕೆ ಅಂಗೀಕರಿಸು ಎಂದು ಅಪ್ಪಣೆಕೊಡಿಸಿದುದನ್ನು ಸ್ವಾಮಿಗಳು ಆಲೋಚಿಸುತ್ತಿರುವಾಗಲೆ ಪಕ್ಕದಲ್ಲಿದ್ದ ಪ್ರಮುಖರ ಒತ್ತಾಯವೂ ವಿಶೇಷವಾಯಿತು. ಈ ಎರಡೊಂದು ಕಾರಣದಿಂದ ವಿಧಿಯಿಲ್ಲದೆ ಒಪ್ಪಬೇಕಾಯಿತು.

ಒಪ್ಪುವ ಮೊದಲು ಒಂದು ವಿಜ್ಞಾಪನೆಯನ್ನು ಸ್ವಾಮಿಗಳವರು ಸಲ್ಲಿಸಿದರು. ಏನೆಂದರೆ ಸುಮ್ಮನೆ ಬಂದ ಮಾತ್ರಕ್ಕೆ ಮಠಾಧಿಕಾರಕ್ಕೆ ನನ್ನ ಮನಸ್ಸು ಒಪ್ಪದು. ಕೆಲವುದಿನ ತಮ್ಮ ಸೇವೆ ಸಲ್ಲಿಸಿದ ನಂತರ ಆಗಬಹುದು ಎಂದು. ಇದಕ್ಕೆ ಫಕೀರಸ್ವಾಮಿಗಳವರೂ ಒಪ್ಪಿದರು.

ಮಠದಲ್ಲಿರುವ ದಾಸೋಹದಿಂದಲೆ ಸದಾಶಿವಸ್ವಾಮಿಗಳ ತೃಪ್ತಿತೀರದೆ ಒಂದು ಪಾಠಶಾಲೆಯನ್ನು ಸ್ಥಾಪಿಸಿ ಅದರ ಪುರೋಭಿವೃದ್ಧಿಗಾಗಿ ಮಲೆನಾಡ ಭಾಗಕ್ಕೆ ಬಹುದೂರ ಭಿಕ್ಷಕ್ಕೆ ದಯಮಾಡಿಸಿದ್ದರು. ಆ ಸಂದರ್ಭದಲ್ಲಿ ಫಕೀರಸ್ವಾಮಿಗಳವರಿಗೆ ಕಾಹಿಲೆಯಾಗಿ ಅವರು ಆ ಸಮಯಕ್ಕೆ ತಮ್ಮಲ್ಲಿಗೆ ಬಂದಿದ್ದ ಬಿದರಿ ಶ್ರೀ ಕುಮಾರಸ್ವಾಮಿಗಳವರಿಗೆ ಅಧಿಕಾರವಹಿಸಿ ಲಿಂಗೈಕ್ಯರಾದರು.

ಈ ಸಮಾಚಾರ ತಿಳಿದು ಮಲೆನಾಡಿನಿಂದ ಸದಾಶಿವಸ್ವಾಮಿಗಳವರು ಬಂದರು. ಬಿದರಿ ಶ್ರೀ ಕುಮಾರ ಶ್ರೀಗಳವರು ಉತ್ತರಾಧಿಕಾರವನ್ನು ಬಹು ವೈಭವದಿಂದ ಸದಾಶಿವಸ್ವಾಮಿಗಳವರಿಗೆ ಮಾಡಿದರು. ಹಾನಗಲ್ಲ ಕುಮಾರ ಸ್ವಾಮಿಗಳೆಂದು ಹೆಸರನ್ನಿಟ್ಟರು. ಏಕಕಾಲದಲ್ಲಿಯೆ ಸದಾಶಿವಸ್ವಾಮಿಗಳವರು ಹಾನಗಲ್ಲ ಮಠಾಧಿಪತ್ಯವನ್ನು ಪಾಠಶಾಲಾಕೃತ್ಯವನ್ನು ವಹಿಸಿದರು ; ನಿರ್ವಹಿಸಲನುವಾದರು.

ಹೀಗೆ ಪಾಠಶಾಲಾಕೃತ್ಯವನ್ನು ನೆರವೇರಿಸುತ್ತ ಮಠದ ಆಧಿಪತ್ಯವನ್ನು ನಿರ್ವಹಿಸುವುದು ಸ್ವಾಮಿಗಳವರ ಕಾರಣಿಕತನದ ಒಂದು ಕುರುಹು ಅಲ್ಲವೆ ?



# ಮಹಾಸಭೆಯ ಸಂಸ್ಥಾಪನೆ

ಬಹುದಿನಗಳಿಂದ ದಕ್ಷಿಣಭಾರತದಲ್ಲಿ ವೀರಶೈವ ಸಮಾಜವು ತನ್ನದೇ ಆದ ಒಂದು ವೈಶಿಷ್ಟ್ಯದಿಂದ – ವೈಭವದಿಂದ ಬೆಳೆದು ಬಂದಿತ್ತು; ಬೆಳಗಿ ನಿಂತಿತ್ತು. ಅದರಲ್ಲಿಯು ಕನ್ನಡ ನಾಡಿನಲ್ಲಿ ಅದರ ವೈಭವ ವೈಶಿಷ್ಟ್ಯಗಳಿಗೆ ಪಾರವೆ ಇರಲಿಲ್ಲ. ತಮಿಳುನಾಡಿನಿಂದ ಸೆಲೆಯೊಡೆದು ಬಂದಿದ್ದರು ಕನ್ನಡ ನಾಡೆ ಅದರ ತಾಯ್ನಾಡು. ಕನ್ನಡ ನುಡಿಯೆ ಅದರ ತಾಯ್ನುಡಿ ಯಾವ ಕೊರತೆಯಿರಲಿಲ್ಲ. ಯಾವುದರಲ್ಲಿಯು ಕಮ್ಮಿಯಾಗಿರಲಿಲ್ಲ.

ಅಂತಹ ಸಮಾಜವು ನೂರಾರು ವರುಷಗಳ ಹಿಂದೆ ಎಲ್ಲ ಬಗೆಯಿಂದಲು ಕಳೆಗುಂದಿತ್ತು; ಕೃಷ್ಣಪಕ್ಷದಲ್ಲಿ ಕಾಲಿಟ್ಟಿತ್ತು. ಸುಮಾರು ಐವತ್ತುಲಕ್ಷ ಜನ ಸಂಖ್ಯೆಯುಳ್ಳ ಸಮಾಜಕ್ಕೆ ಯಾವ ಸ್ವತಂತ್ರ ಅಸ್ತಿತ್ವವಿರಲಿಲ್ಲ. ತನ್ನದೇ ಆಗಿದ್ದ ಸ್ವತಂತ್ರ ವೈಭವವನ್ನು ಸಹ ಕಳೆದುಕೊಂಡು ಅತಂತ್ರವಾಗಿತ್ತು; ಪರತಂತ್ರವಾಗಿತ್ತು.

ತನ್ನಲ್ಲಿರುವ ಪರಿಶುದ್ಧವಾದ ಪರಾಕಾಷ್ಠವಾದ ಶಿವಾನುಭವ ತತ್ವವನ್ನು ತಾನೇ ಮರೆತು ಕುಳಿತಿತ್ತು, ಮತ್ತೊಂದು ತೋರದ ತತ್ವಕ್ಕೆ ತಲೆಬಾಗಿತ್ತು. ಉತ್ಸಾಹಕಾರಕವು ಉಲ್ಲಾಸ ಜನಕವು ಆದ ತನ್ನ ಅಪಾರ ಸಾಹಿತ್ಯವನ್ನು ತಾನೇ ಕಣ್ಣೆತ್ತಿ ನೋಡದೆ, ಕಾಸಿತ್ತು ಪ್ರಚುರಿಸದೆ ಪವಡಿಸಿತ್ತು; ಬೇರೊಂದು ಸತ್ವವಿಲ್ಲದ ಸಾಹಿತ್ಯಕ್ಕೆ ಬಾಯ್ನೀರು ಬಿಡುತ್ತಿತ್ತು. ಉತ್ಕ್ರಾಂತಿಯುತವು ಉಜ್ವಲಕಾಂತಿ ಸಹಿತವು ಆದ ಸಂಸ್ಕೃತಿಯು ತನಗಿದ್ದರು ತಾನರಿಯದೆ ತೆಗೆದು ತೋರದೆ ತೇಜೋಹೀನವಾಗಿತ್ತು; ತರಗಲಾಗಿತ್ತು.

ಸಾಲದ್ದಕ್ಕೆ ಇಪ್ಪತ್ತನೆಯ ಶತಮಾನದ ಸುಧಾರಣೆಯನ್ನು ಸಮಾಜವು ಬಳಸಿಕೊಂಡಿರಲಿಲ್ಲ. ಪಾಶ್ಚಿಮಾತ್ಯ ವಿದ್ಯೆಯ ಗಂಧವನ್ನು ಆಘ್ರಾಣಿಸಿರಲಿಲ್ಲ. ವೈಜ್ಞಾನಿಕ ಸಹಾಯ ಸೌಕರ್ಯಗಳನ್ನು ಪಡೆಯಲು ಸಿದ್ಧವಾಗಿರಲಿಲ್ಲ. ಹಿಂದಿನ ಹಳೆಯ ಜಾಡಿನಲ್ಲಿಯೆ ಕುಂಟುತ್ತ ಕೂರುತ್ತ ನಡೆದಿತ್ತು. ಅನಾಗರಿ

ಕತೆಯಿಂದ ಕುರುಡಾಗಿತ್ತು. ಅನೈಕ್ಯದ ಮುರುಕು ಕೋಲನ್ನೆ ಕೈಯಾಧಾರವನ್ನಾಗಿ ಮಾಡಿಕೊಂಡಿತ್ತು.

ಈ ದುರ್ಗತಿಗೀಡಾದ ಸಮಾಜವನ್ನು ಸುಧಾರಿಸಲು ಯಾವ ಮಹಾಪುರುಷನು ಮುಂದು ಬಂದಿರಲಿಲ್ಲ, ಮನಸ್ಸುಮಾಡಿರಲಿಲ್ಲ. ಆಗ ಕಾರಣಿಕನಾದ ಕುಮಾರಯೋಗಿಯ ಕಾಂತಿಯುತವಾದ ಕಣ್ಣು ಇತ್ತ ಹೊರಳಿತು. ಮುಕುರದಂತಿದ್ದ ಮನಸ್ಸು ಇದನ್ನು ಗ್ರಹಿಸಿತು; ಮುಂದಾಲೋಚನೆ ಮಾಡಿತು.

ಇದರಿಂದಾಗಿ ತಮ್ಮ ಸುಖ ಸೌಕರ್ಯಗಳನ್ನು ಸ್ವಸ್ತಿ ಸಂತೋಷಗಳನ್ನು ಆಶಿಸದೆ ಸಮಾಜದ ಸರ್ವೋನ್ನತಿಗಾಗಿ ಸಾಹಸಪಡುವ ಹೆಚ್ಚಿನ ಕೆಲಸ ಕುಮಾರೇಶ್ವರರ ಕೊರಳಿಗೆ ತಗಲುಬಿತ್ತು. ಅದರಂತೆ ಅವರ ಕರುಳು ಕೊರೆಯ ಹತ್ತಿತು. ಹೃದಯ ಮಿಡಿಯುಹತ್ತಿತು.

ಇಡೀ ಸಮಾಜವೆ ಹೀಗೆ ಅಜ್ಞಾನಾಂಧಕಾರದಲ್ಲಿರುವಾಗ ಅನೈಕ್ಯದ ಕಾಡುಸ್ಥಿತಿಯಲ್ಲಿರುವಾಗ ಇದೊಂದು ಪಾಠಶಾಲೆಯಿಂದ ಅದಕ್ಕೆ ಏನಾಗಬೇಕು ? ಇಡೀ ಹಿರಿಮನೆಯ ಕತ್ತಲೆಯನ್ನೆಲ್ಲ ಒಂದೇ ಒಂದು ಮಿಣುಕುವ ಸೊಡರು ಹೇಗೆ ಕಳೆಯ ಬಲ್ಲುದು ? ಎಂದು ಮುಂತಾಗಿ ಯೋಚಿಸಿ ಇದಕ್ಕಿಂತಲು ಮಿಗಿಲಾದ ಕಾರ್ಯವನ್ನು ಕೈಕೊಳ್ಳಬೇಕು. ಸಮಾಜದ ಪ್ರತಿಯೊಂದು ವ್ಯಕ್ತಿಯು ಸುಧಾರಣೆಯನ್ನು ಹೊಂದಬೇಕು. ಸಾಂಪತ್ತಿಕ ಶೈಕ್ಷಣಿಕ ನೈತಿಕ ಮೊದಲಾದ ಸಕಲ ಕಲೆಗಳು ಊರ್ಜಿತಸ್ಥಿತಿಗೆ ಬರಬೇಕು ಎಂಬ ಉದಾತ್ತವಾದ ಉದಾರವಾದ ಯೋಚನೆಯನ್ನುಮಾಡಿ ಅದಕ್ಕಾಗಿ ಅಲ್ಲಲ್ಲಿ ಸಂಚರಿಸುತ್ತ ಬೋಧಿಸುತ್ತ ಜನರನ್ನು ಹುರಿದುಂಬಿಸುತ್ತ ಒಮ್ಮೆ ಶ್ರೀಗಳವರು ಧಾರವಾಡಕ್ಕೆ ಬಂದರು. ಮಹಾಸಭೆಯ ಆಲೋಚನೆಯನ್ನು ಪ್ರಸ್ತಾಪಿಸಿದರು. ಈ ವಿಷಯದಲ್ಲಿ ಶ್ರೀ ಶಿರಸ್ತೆದಾರ್ ಆದ ಕೊಂಗವಾಡದ ಚನ್ನಪ್ಪಗೌಡರು, ಶ್ರೀಯುತ ಕಿತ್ತೂರು ರೇವಣಸಿದ್ಧಪ್ಪನವರು, ಶ್ರೀ ಮರೆವಾಡದ ಸಿದ್ಧಲಿಂಗಯ್ಯನವರು ಮುಂತಾದವರು ಸ್ವಾಮಿಗಳವರೊಡನೆ ಸಹಕರಿಸಿ ಕೆಲಸಮಾಡ ತೊಡಗಿದರು. ಕ್ರಿ. ಶ. ೧೯೦೩ ರಲ್ಲಿ ಇಡೀ ಒಂದು ವರುಷ ಮಹಾಸಭೆಯ ಸ್ಥಾಪನೆಯ ವಿಷಯವಾಗಿ ಸ್ವಾಮಿಗಳವರು ಕೃಷಿಮಾಡಿದರು. ಅನೇಕ ಪ್ರಮುಖರೊಡಗೂಡಿದ ಒಂದು ಸಮಾಲೋಚನೆಯ ಸಭೆಯನ್ನು ಕೂಡಿಸಿದರು.

ಇದೆಲ್ಲದರ ಫಲವಾಗಿ ಕ್ರಿ. ಶ. ೧೯೦೪ ಮೇ ತಿಂಗಳಲ್ಲಿ ಕೈ. ಶ್ರೀಮಂತ ಲಿಂಗಪ್ಪ ಜಾಯಪ್ಪ ಸರ್ ದೇಸಾಯಿ ಶಿರಸಂಗಿ ಇವರ ಅಧ್ಯಕ್ಷತೆಯಲ್ಲಿ ಶ್ರೀಮದ್ವೀರಶೈವ ಮಹಾಸಭೆಯನ್ನು ಸಂಸ್ಥಾಪಿಸಿದರು. ಆಗಳೆ ತಮ್ಮ ದೀರ್ಘವಾದ ಸಾಹಸದಿಂದ ಪ್ರೇರಣೆಯಿಂದ ಒಂದು ಲಕ್ಷದ ವರೆವಿಗು ಹಣ ಶೇಖರಿಸಿ "ಲಿಂಗಾಯತ ಎಜ್ಯುಕೇಷನಲ್ ಫಂಡಾಗಿ" ಇರಿಸಿದರು. ಅದರ ಬಡ್ಡಿಯಿಂದ ಬಡವಿದ್ಯಾರ್ಥಿಗಳಿಗೆ ಸಹಾಯ ಸಿಕ್ಕಹತ್ತಿತು. ಅದು ಮೊದಲ್ಗೊಂಡು ಸಮಾಜದಲ್ಲಿ ಆಂಗ್ಲವಿದ್ಯಾವಂತರು ಕಾಣ ತೊಡಗಿದರು.

ಸಮಾಜದಲ್ಲಿ ಜನಜಾಗ್ರತಿಯಿಲ್ಲದ ವಿಜ್ಞಾನ ವಿಚಾರದ ಗಾಳಿಯಿಲ್ಲದ ಆ ಕಾಲದಲ್ಲಿ ಇಂತಹದೊಂದು ಮಹಾಸಭೆಯನ್ನು ಸ್ಥಾಪಿಸಿದ್ದು ಸ್ವಾಮಿಗಳವರಲ್ಲಿರುವ ಅದ್ವಿತೀಯವಾದ ಬುದ್ಧಿಸಾಮರ್ಥ್ಯವನ್ನು ಸಮಾಜೋನ್ನತಿಯ ಉತ್ಕಂಠತೆಯನ್ನು ವ್ಯಕ್ತಮಾಡುವದಿಲ್ಲವೆ ?

ಮಹಾಸಭೆಯು ಪ್ರತಿವರ್ಷವು ಸ್ವಾಮಿಗಳವರ ನೇತೃತ್ವದಲ್ಲಿ ನಡೆಯ ತೊಡಗಿತು. ಅದರಿಂದ ಸಮಾಜದಲ್ಲಿ ಆದ ಕ್ರಾಂತಿಗಳು ಅಸಿತಿಸಿತಲ್ಲ. ಸಾಮಾಜಿಕ ಶೈಕ್ಷಣಿಕ ಸಾಂಪತ್ತಿಕ ಸಾಹಿತ್ಯಕ ಮುಂತಾದ ಕಾರ್ಯಕ್ಷೇತ್ರಗಳಲ್ಲಿ ಸುಧಾರಣೆಯು ಭರದಿಂದ ಸಾಗಹತ್ತಿತು. ಈರೀತಿ ಆರೇಳು ವರುಷ ಸ್ವಾಮಿಗಳವರ ಸಾಹಸದಿಂದ ಸಭೆಯು ತಪ್ಪದೆ ಯಶಸ್ವಿಯಾಗಿ ಸಾಗಿ ಕೆಲಸ ಮಾಡಿತು. ಶ್ರೀಮಂತ ಶಿರಸಂಗಿ ಲಿಂಗರಾಜರು, ಸರ್. ಕೆ. ಪಿ. ಪುಟ್ಟಣ್ಣ ಚೆಟ್ಟರು, ವಂಟಮುರಿ ರಾಜಾಲಖಮನಗೌಡ ಬಸವಪ್ರಭು ದೇಸಾಯರು, ಸೊನ್ನಲಾಪುರದ ವಾರದ ಮಲ್ಲಪ್ಪನವರು, ಹಂದಿಗನೂರು ಬುಳ್ಳಪ್ಪ ಬಸವಂತಪ್ಪ ದೇಸಾಯರು, ರಾವಬಹದ್ದೂರ್ ಅರಟಾಳ ರುದ್ರಗೌಡರು, ಮೊದಲಾದ ಸಮಾಜ ಪ್ರಮುಖರು ಸ್ವಾಮಿಗಳವರ ಪ್ರಭಾವಕ್ಕೆ ಒಳಪಟ್ಟು ಶ್ರದ್ಧೆವಹಿಸಿ ಮಹಾಸಭೆಯ ಅಧ್ಯಕ್ಷರಾಗಿ ಕೆಲಸಮಾಡಿದರು. ಸಮಾಜದ ಶ್ರೀಮಂತರು ಧೀಮಂತರು ಈ ಸಭೆಯಲ್ಲಿ ಭಾಗವಹಿಸಿದರು. ಸಮಾಜದ ಏಳ್ಗೆಗೆ ಮನಸ್ಸುಮಾಡಿದರು, ಮುಂದುವರಿದರು.

ಆಮೇಲೆ ಸ್ವಾಮಿಗಳವರು ಧರ್ಮೋತ್ತೇಜಕ ಸಭೆ, ಶಿವತೋಷಿಣೀ ಸಭೆ ಮುಂತಾದವುಗಳನ್ನು ಸ್ಥಾಪಿಸಿ ಅಲ್ಲಲ್ಲಿ ನೆರವೇರಿಸಿದರು. ಹಳ್ಳಿ ಹಳ್ಳಿಗೆ ಧರ್ಮನೀತಿಗಳ ಸಂದೇಶ ಬೀರಿದರು.

ಮಹಾಸಭೆಯು ಸಂಸ್ಥಾಪಿತವಾದ ಮೇಲೆ ಅದಕ್ಕೆ ಅಂಗವಾಗಿ ಅಖಿಲ ಭಾರತ ವೀರಶೈವ ಮಹಿಳಾ ಪರಿಷತ್ತು, ವೀರಶೈವ ತರುಣ ಪರಿಷತ್ತು, ಶಿಕ್ಷಣ ಸಮ್ಮೇಲನ, ವೈದ್ಯ ಸಮ್ಮೇಲನ ಮೊದಲಾದ ಸಾಂಘಿಕ ಚಟವಟಿಕೆಗಳು ಉದಯವಾಗಿವೆ; ಉತ್ತೇಜಿತವಾಗಿವೆ. ಇವೆಲ್ಲವುಗಳ ಪ್ರಭಾವದಿಂದ ಸಮಾಜದ ಸ್ತ್ರೀಪುರುಷರಲ್ಲಿ ಪಂಡಿತ ಪಾಮರರಲ್ಲಿ ಆಬಾಲವೃದ್ಧರಲ್ಲಿ ನವೀನವಾದ ಜಾಗ್ರತಿ ಮೈದೋರಿತು. ಆ ಕಾಲವು ವೀರಶೈವರ ಉತ್ಕ್ರಾಂತಿಯ ಕಾಲವಾಯಿತು. ಸಮಾಜದಲ್ಲಿ ವಿದ್ಯಾಭಾನು ಉದಯವಾದನು. ಅಂಧಕಾರ ಅಳಿಯಿತು. ಜನಾಂಗ ಜಡನಿದ್ದೆಯಿಂದ ಜಾಗ್ರತವಾಯಿತು. ಇದಕ್ಕೆಲ್ಲ ಕುಮಾರಯೋಗಿಯು ಮೂಲಕಾರಣನಾದನು.



# ಸಮಾಜ ಸಂಸ್ಕರಣ, ಸಂಸ್ಕೃತಿ ಸಂರಕ್ಷಣ

ವೀರಶೈವ ಮಹಾಸಭೆಯ ಸ್ಥಾಪನೆಯಿಂದ ಅದರ ಸೇವೆಯಿಂದ ಸ್ವಾಮಿಗಳವರಿಗೆ ಸಂತೃಪ್ತಿಯಾಗಲಿಲ್ಲ. ಸಮಾಜದೇಳ್ಗೆಯ ಕಾರ್ಯವು ಎಷ್ಟು ಮುಖಗಳಿಂದ ನಡೆದರೂ ಇನ್ನೂ ಹಲವು ಮುಖಗಳಿಂದ ನಡೆಯಬೇಕೆಂಬ ಒತ್ತಾಸೆ ಸ್ವಾಮಿಗಳವರದು. ಸಮಾಜದಲ್ಲಿರುವ ಇನ್ನಿತರ ಕೊರತೆಗಳಿಗಾಗಿ ಸ್ವಾಮಿಗಳವರು ಹಗಲಿರುಳು ಕನವರಿಸುತ್ತಿದ್ದರು. ಸಮಾಜದ ಪ್ರತಿಯೊಂದು ವಿಷಯ ಹೇಗೆ ಮುಂದಕ್ಕೆ ಬರುವದೆಂದು ಸದಾ ಯೋಚಿಸುತ್ತಿದ್ದರು. ಸಮಾಜದ ಸರ್ವಾಂಗದೇಳ್ಗೆಯ ಆಸಕ್ತಿಯು ಅವರ ರಕ್ತದ ಪ್ರತಿ ಕಣದಲ್ಲಿಯು ಬೆರೆತಿದ್ದಿತು. ಅದಕ್ಕಾಗಿ ಅವರು ಪಟ್ಟ ಪರಿಶ್ರಮವನ್ನು ಊಹಿಸುವುದೆ ಅಸಾಧ್ಯ. ಸಮಾಜದಲ್ಲಿರುವ ಕಸವನ್ನೆಲ್ಲ ರಸವನ್ನಾಗಿ ಮಾಡಲು ಪ್ರಯತ್ನಪಟ್ಟರು. ಆ ಸಮಯದಲ್ಲಿ ತಮ್ಮ ಶರೀರದ ಸೌಖ್ಯವನ್ನು ಶ್ರಮವನ್ನು ಗಣಿಸಲಿಲ್ಲ. ಆ ಕಾರ್ಯದಲ್ಲಿ ಪ್ರವೃತ್ತರಾದಾಗ ಅವರಿಗೆ ಬಿಸಿಲು ಬೆಳದಿಂಗಳಾಗಿಯು ಉಪವಾಸವು ಊಟದಂತೆಯು ಯೋಚನೆಯೆ ಜಪವಾಗಿಯು ಪರಿಣಮಿಸಿದವು. ಪರಳಿಯ ಪ್ರಕರಣದಲ್ಲಿ ಪ್ರಬಲವಾಗಿ ಹೋರಾಡಿ ಗಳಿಸಿದ ಜಯಕ್ಕೆ ಶ್ರೀಗಳು ಬಹುಮಟ್ಟಿಗೆ ಕಾರಣರಾದ ವಿಷಯ ಚಿರಸ್ಮರಣೀಯವಾಗಿದೆ. ಶಿರಸಂಗಿ ದೇಶಗತಿಯ ವ್ಯಾಜ್ಯದ ನಿರ್ಣಯವು ಲಿಂಗಾಯತ ಫಂಡಿನಂತೆ ಆಗುವದರ ಸಲುವಾಗಿ ಸ್ವಾಮಿಗಳವರು ಹೇರಳ ಹಣವನ್ನು ಕೂಡಿಸಿ ಕೊಟ್ಟದಲ್ಲದೆ ದೇಹತೀರದಷ್ಟು ಅಹೋರಾತ್ರಿ ಅವಿಶ್ರಾಂತ ಶ್ರಮವಹಿಸಿ ಕೆಲಸಮಾಡಿದ್ದನ್ನು ವೀರಶೈವ ಸಮಾಜವು ಎಂದಿಗೂ ಮರಯುವಂತಿಲ್ಲ. ಕಲಘಟಗಿ ಸಿದ್ಧಾಪುರ ಮೊದಲಾದ ಕಡೆಗಳಲ್ಲಿ ಹೋಗಿ ಅಲ್ಲಿರುವ ಜನಗಳ ವಾಗದ್ವೈತದ ಹುಚ್ಚನ್ನು ಬಿಡಿಸಿ ಲಿಂಗಯೋಗದ ತತ್ವವನ್ನು ಬೀರಿದರು. 'ಹಾನಗಲ್ಲ ಶ್ರೀಗಳವರ ಸಿದ್ಧಾಪುರದ ವಾಘು ನಿರಸನ.' ಎಂಬ ತಲೆಬರಹದ ಲೇಖನವನ್ನು 'ಮೈಸೂರು ಸ್ಟಾರ್' ಪತ್ರಿಕೆಯಲ್ಲಿ ಓದಿದ್ದು ನೆನಪಿನಲ್ಲಿದೆ. ಜನರ ಸಣ್ಣ ಪುಟ್ಟ ವ್ಯಾಜ್ಯಗಳನ್ನು ತಮ್ಮ ಬುದ್ಧಿಬಲದಿಂದ ಬಗೆಹರಿಸಿ ಕೋರ್ಟುಕಚೇರಿಗಳಿಗೆ ಮುಟ್ಟು

ಸುರಿಯುದಂತೆ ಮಾಡುತ್ತಿದ್ದರು. ವಿವಾಹ ಕಾರ್ಯಗಳಲ್ಲಿ ಮಗ್ಗು ಮೆರವಣಿಗೆ ಗಳಿಗೆ ಮತ್ತಿತರ ಮೂಢಕಾರ್ಯಗಳಿಗೆ ಮಾಡುತ್ತಿದ್ದ ಅತಿವ್ಯಯವನ್ನು ಎಷ್ಟೋ ಕಡೆಗಳಲ್ಲಿ ಕಡಿಮೆಮಾಡಿಸಿದರು. 'ಕಾಯಕವೆ ಕೈಲಾಸ' ಎಂಬ ಶಿವಶರಣರ ದಿವ್ಯ ಬೋಧೆಯನ್ನು ಸಾರಿದರು. ಪ್ರತಿ ಕ್ಷಣದಲ್ಲಿಯು ಜನಜೀವನದಲ್ಲಿ ಬೆರೆದು ಬೋಧಿಸಿದರು. ಪ್ರತಿಯೊಂದು ಸಣ್ಣವುಟ್ಟ ದೋಷವನ್ನು ತಿದ್ದಿದರು. ಪ್ರತಿಯೊಂದು ಕಣವನ್ನು ಅನ್ಯಾಯಕ್ಕೆ ವ್ಯಯಮಾಡದಂತೆ ಪ್ರತಿ ಪಾದಿಸಿದರು.

ಎರಡನೆಯದಾಗಿ ಅವರಿಗೆ ಸಂಸ್ಕೃತಿಯಲ್ಲಿ ಅಪಾರವಾದ ಅಭಿಮಾನ ವಿತ್ತು. ಅದಕ್ಕಾಗಿ ಅವರು ತಮ್ಮ ತ್ರಿಕರಣಗಳನ್ನು ಸವೆಸಿದರು. ಅಲ್ಲಲ್ಲಿ ಸಭೆಗಳನ್ನು ಕರೆಯುತ್ತ ಸಮ್ಮೇಳನಗಳನ್ನು ಬೀರುತ್ತ ಸಂಚರಿಸುವಾಗ ಹಲವು ಕಡೆ 'ಫಂಡು' ಮಾಡಿ ಪಾಠಶಾಲೆಗಳನ್ನು ಸ್ಥಾಪಿಸಿದರು. ಹಾವೇರಿ ಹುಬ್ಬಳ್ಳಿ ಬಾಗಲಕೋಟೆ ಅಬ್ಬಿಗೇರಿ ಅಕ್ಕಿ ಆಲೂರು ರೋಣ ಇಟಕಲ್ಲು ಸೀರಡಗುಂಬ ಅನಂತಪುರ ಕೆಳದಿ ಚಿತಾಪುರ ಮುಂತಾದ ಊರುಗಳಲ್ಲಿ ಕೆಲವು ಸ್ವಂತಪ್ರಯತ್ನದಿಂದ ಕೆಲವು ಪ್ರೇರಣೆ ಪ್ರೋತ್ಸಾಹಗಳಿಂದ ಸ್ಥಾಪಿಸಲ್ಪಟ್ಟವು. ಅವುಗಳಲ್ಲಿ ಈಗ ಕೆಲವು ನಡೆಯುತ್ತಿವೆ. ಕೆಲವು ನಿಂತುಹೋಗಿವೆ. ಮೊತ್ತ ಮೊದಲು ಸ್ವಾಮಿಗಳವರ ಉಪದೇಶದಿಂದಲೆ ವೀರಶೈವರಲ್ಲಿ ವಾಚನ ಮಂದಿರಗಳು ಸ್ಥಾಪಿತವಾದವು. ಪ್ರಾಚೀನ ಗ್ರಂಥಗಳ ಸಂಶೋಧನವನ್ನು ಮಾಡಲಿಕ್ಕೆ ಒಂದು ಮಂಡಳವನ್ನು ಏರ್ಪಡಿಸಲು ಸ್ವಾಮಿಗಳವರು ಪ್ರಯತ್ನ ಪಟ್ಟರು. ಜನ ಧನ ಸಹಾಯವು ಸಾಕಷ್ಟಾಗದೆ ಅದು ಸಂಪೂರ್ಣ ಸಿದ್ಧಿಗೆ ನಿಲುಕಲಿಲ್ಲ. ಆದರೂ ಶ್ರೀಗಳವರು ಕೆಲವು ಮಂದಿ ಪಂಡಿತರನ್ನು ತ್ರಾವಣ ಕೋರ ತಂಜಾವರ ಮದ್ರಾಸ್ ಮೊದಲಾದ ಸ್ಥಳಗಳಿಗೆ ಕಳುಹಿಸಿ ಕೆಲವು ಮಹತ್ವದ ಮತಗ್ರಂಥಗಳನ್ನು ಸಂಗ್ರಹಿಸಿ ಅವುಗಳ ಸಂಶೋಧನವನ್ನು ಮಾಡಿ ಸಿರುವರು. ಶಿವಯೋಗ ಮಂದಿರದಲ್ಲಿ ವೀರಶೈವ ಶಿಕ್ಷಣ ಸಮ್ಮೇಲನವನ್ನು ಸ್ಥಾಪಿಸಿದ್ದರು. ಅದು ಒಂದು ವರುಷಮಾತ್ರ ನಡೆಯಿತು. ಇದಲ್ಲದೆ ಶ್ರೀ. ವೀರಬಸವಶ್ರೇಷ್ಠಿ ಬಿ. ಎ. ಅವರನ್ನು ಪಾಶ್ಚಾತ್ಯ ದೇಶಗಳಿಗೆ ಉಪದೇಶಕ್ಕಾ ಕಳಿಸಿ ಸಂಸ್ಕೃತಿಯ ಪ್ರಚಾರ ಮಾಡಬೇಕೆಂಬ ಮಹತ್ವಾಕಾಂಕ್ಷೆ ಶ್ರೀಗಳವ ರಲ್ಲಿತ್ತು. ಅದರಂತೆ ಒಮ್ಮೆ ಸಾಹಸಮಾಡಿದರು. ಕಾರಣಾಂತರಗಳಿಂದ

ಕಾರ್ಯ ಕೊನೆಗಾಣಲಿಲ್ಲ. ಶ್ರೀಗಳವರ ಪ್ರಯತ್ನ ವಿಶೇಷದಿಂದಲೆ ಪರಿಶೋಧ ಪರಿಶ್ರಮದಿಂದಲೆ ಹುಳದ ಬಾಯಿಗೆ ಬಿದ್ದು ಹಾಳಾಗಿ ಹೋಗುತ್ತಿದ್ದ ಎಷ್ಟೋ ವಾಙ್ಮಯವು ಬದುಕಿ ಬೆಳಕಿಗೆ ಬಂದಿತು. ಹೊಸಗ್ರಂಥಗಳಿಗೆ ಶ್ರೀಗಳವರು ಮುಕ್ತಹಸ್ತದಿಂದ ಸಹಾಯಮಾಡುತ್ತಿದ್ದರು. ಕನ್ನಡ ಸಂಸ್ಕೃತ ಮತ್ತು ಇಂಗ್ಲೀಷ ಓದುವವರಿಗೆ ಹಲವು ವಿಧವಾಗಿ ಸಹಾಯಮಾಡಿದರು. ಮೊದಲು ಕಾಶಿಯಲ್ಲಿ ಸಂಸ್ಕೃತಾಭ್ಯಾಸ ಮಾಡುತ್ತಿದ್ದ ಶ್ರೀ. ಮ. ನಿ. ಜಗದ್ಗುರು ಜಯದೇವ ಮುರಘರಾಜೇಂದ್ರ ಸ್ವಾಮಿಗಳವರಿಗು, ಶ್ರೀ ಬಾಳೇಹಳ್ಳಿ ಪೀಠಸಿಂಹಾಸನಾಧೀಶ್ವರ ಜಗದ್ಗುರು ಶಿವಾನಂದಸ್ವಾಮಿಗಳವರಿಗು ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ಧನಸಹಾಯ ಮಾಡಿದ್ದಾರೆ. ಅವರಿಂದ ಸಹಾಯ ಪಡೆದ ಉಳಿದ ಜನರನ್ನು ಹೆಸರಿಸಲು ಸಾಧ್ಯವೇ ಇಲ್ಲ. 'ಧರ್ಮತರಂಗಿಣಿ' 'ಶಿವಪ್ರತಾಪ' ಮೊದಲಾದ ಮಾಸಪತ್ರ ವಾರಪತ್ರಿಕೆಗಳು ಶ್ರೀಗಳ ಕೃಪೆಯಿಂದಲೆ ಹೊರಡುತ್ತಿದ್ದವು. ಹೀಗೆ ಒಂದಲ್ಲ ಎರಡಲ್ಲ ಹಲವು ವಿಧವಾಗಿ ಸ್ವಾಮಿಗಳವರು ಸಂಸ್ಕೃತಿಯ ಸಂರಕ್ಷಣೆಯನ್ನು ಮಾಡಿದರು.

ಸ್ವಾಮಿಗಳವರು ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆದರ್ಶ ಪುರುಷರು, ಧಾರ್ಮಿಕ ಹೃದಯರು. ಅವರು ಅರ್ಜನಾನುಭವ ಜೀವಿಗಳು. ವೀರವಿರಾಗಿಯಾಗಿ ಯುಕ್ತಯೋಗಿಯಾಗಿ ಸತ್ಯಸ್ವಾಮಿಯಾಗಿ ಬಾಳಿದರು. ಜನಾನುರಾಗಿಗಳಾಗಿ ಜೀವನ್ಮುಕ್ತರಾಗಿ ಜಸ ಪಡೆದರು. ಅವರು ಸಮಾಜ ವಿರಾಜಮಾನವಾಗಿಮಾಡಿದ ದಿವ್ಯಜ್ಯೋತಿ. ಸಂಗೀತ ಸಾಹಿತ್ಯ ವೈದ್ಯ ಉದ್ಯೋಗಗಳ ಸಂರಕ್ಷಿಸಿ ಸಂವರ್ಧಿಸಿದ ಸಾಂಸ್ಕೃತಿಕ ಸಿದ್ಧಮೂರ್ತಿ. ವಿದ್ಯೆ ವಿಜ್ಞಾನಗಳ ಅಭಿವೃದ್ಧಿಗೊಳಿಸಿದ ವಿದ್ಯಾಭಿಮಾನಿ. ಪುರಾಣ ಪ್ರವಚನ ಕೀರ್ತನ ಭಾಷಣ ಕಲಾಶಿಕ್ಷಣಾಚಾರ್ಯ. ನೀತಿ ಭಕ್ತಿ ನಡೆ ನುಡಿ ಸ್ತ್ರೀಸುಧಾರಣೆ ಕಲಿಸಿದ ಪ್ರಮುಖಪುಂಗವ. ದೀನರನ್ನು ದರಿದ್ರರನ್ನು ದುರ್ಮಾರ್ಗಿಗಳನ್ನು ಉದ್ಧರಿಸಿದ ಉದಾರಚರಿತ. ತನ್ನ ನಡೆನುಡಿಯಿಂದ ಲೋಕದ ಬಾಳನ್ನು ತಿದ್ದಿ ಸಚೇತನಗೊಳಿಸಿದ ಸಂತ. ತನ್ನ ಆಯುಷ್ಯವನ್ನು ಆರೋಗ್ಯವನ್ನು ಲೋಕೋದ್ಧಾರಕ್ಕಾಗಿಯೆ ಧಾರಯೆರೆದ ಮಹಾತ್ಮ. ಪುರಾತನ ಪ್ರಮುಖರ ಆಚಾರ್ಯರ ಪಙ್ಕ್ತಿಯಲ್ಲಿ ಪಜ್ಜ

ಯಿಕ್ಕಿ ಗಮ್ಯವನ್ನು ಸೇರಿದ ಗುರಿಯನ್ನು ಸಾರಿದ ಪರಿಪೂರ್ಣ. ಆಚಾರ್ಯರ ಹೊಣೆಯನ್ನು ಹೊತ್ತು ನಿತ್ತರಿಸಿದ ಆರ್ಯ.

ಅತ್ಯಂತ ವೈಭವಯುಕ್ತವಾದ ಹಾನಗಲ್ಲ ವಿರಕ್ತಮಠವನ್ನು ಹಿಡಿದು ಪಲ್ಲಕ್ಕಿಯನೇರಿ ಮೆರೆಯ ಬಹುದಿತ್ತು. ಅದಕ್ಕೆ ಅವರು ಮನಸ್ಸುಮಾಡಲಿಲ್ಲ. ಆಗಾಗ ಅನೇಕರು ಅನೇಕ ಕಡೆಗಳಲ್ಲಿ ಅಂದಣವನೇರಲು ಬಲವಂತಿಸಿದರು ಎಳ್ಳಷ್ಟು ಮನಸ್ಸು ಮಾಡದೆ ಮತ್ತೊಬ್ಬರಿಗೆ ಆ ಉತ್ಸವದ ಭಾಗ್ಯವನ್ನು ಧಾರ ಯೆರೆಯುತ್ತಿದ್ದರು. ಅದು ವೈಭವವೆಂದು ವೈಶಿಷ್ಟ್ಯವೆಂದು ಅವರು ಭಾವಿಸ ಲಿಲ್ಲ, ಭ್ರಮಿಸಲಿಲ್ಲ. ಜನತಾರೂಪಿ ಜನಾರ್ದನನ ಸೇವೆಗೆ ಮನಸ್ಸು ಮಾಡಿದರು. ಮೈಮುಡಿಸಿದರು. ಹಗಲಿರುಳೆನ್ನದೆ ನಾಡ ಸುತ್ತಿದರು; ಕಾಡ ಸುತ್ತಿದರು. ಸಂತಲ್ಲಿಯೆ ಧಾರ್ಮಿಕ ಜಾಗ್ರತಿ ಮಾಡಿದರು. ಕುಂತಲ್ಲಿಯೆ ದೇವ ಚಿಂತನೆಗೈದರು. ಆತ್ಮಪೂಜೆಯ ನೆನಗಿದರು. ಅವರಲ್ಲಿ ಅದ್ಭುತವಾದ ಜನಾಕರ್ಷಣ ಶಕ್ತಿಯಿತ್ತು. ಅನುಪಮವಾದ ಬೋಧನಾಶಕ್ತಿಯಿತ್ತು. ಅನುವಾದ ಅಲ್ಪಕಾಲದಲ್ಲಿಯೆ ಭಕ್ತಿಪ್ರವೃತ್ತಿಯಿಂದ ಶಿವಪೂಜೆಮಾಡುತ್ತಿದ್ದರು. ಭಾವಪ್ರಪೂರ್ತಿಯಿಂದ ಶಿವಾನುಭವ ಜರಗಿಸುತ್ತಿದ್ದರು. ಸಾಮಾನ್ಯ ಜನರು ದರ್ಶನಕ್ಕೆ ಬಂದರೆ ಅವರ ಉನ್ನತಿಯ ಉಪದೇಶ. ಸಮಾಜ ಪ್ರಮುಖರು ಬಂದರೆ ಅವರೊಡನೆ ಸಮಾಜೋನ್ನತಿಯ ಸಮಾಲೋಚನೆ. ತಮ್ಮ ಬಳಿಯಲ್ಲಿ ರುವ ಶಿಷ್ಯರು ಬಂದರೆ ಪಾಠ ಪ್ರವಚನ. ಯಾರೂ ಇಲ್ಲದಿದ್ದರೆ ಆತ್ಮಚಿಂತನ. ಹೀಗೆ ಯಾವಜ್ಜೀವನವು ಕ್ಷಣಕಾಲ ವ್ಯರ್ಥಕಳೆಯದೆ ಸಮಾಜ ಸಂಸ್ಕೃತಿ ಆತ್ಮ ಕಲ್ಯಾಣ ಸಾಧನೆಯಲ್ಲಿಯೆ ನಿರತರಾಗಿದ್ದರು. ಪರೋಪಕಾರಕ್ಕಾಗಿ ದೇಹವನ್ನು ದಣಿಸಿದರು. ಪರಮಾತ್ಮಧ್ಯಾನ ಧಾರಣ ಸಮಾಧಿಗಳಲ್ಲಿ ಮನವನ್ನು ತಣಿಸಿದರು. ಶ್ರೀಗಳು ಲೋಕಚರಿತರು; ಲೋಕೋತ್ತರ ಚರಿತರು.

ಸಂಸಾರಿಯಾಗಲಿ ಸಂನ್ಯಾಸಿಯಾಗಲಿ ಸ್ವಾರ್ಥವಿಲ್ಲದೆ ಸಮಾಜ - ಸಂಸ್ಕೃತಿ ಗಳ ಸೇವೆ ಮಾಡಬೇಕೆಂಬುದೆ ಅವರ ಮನೀಷೆ; ಮಹತ್ವಾಕಾಂಕ್ಷೆ. ಅದನ್ನೇ ಅವರು ಬೋಧಿಸುತ್ತಿದ್ದರು, ಸಾಧಿಸುತ್ತಿದ್ದರು. ಬೋಧನೆಗೆ ಸಾಧನೆಗೆ ಸಿದ್ಧ ರಾಗಿರುವವರನ್ನು ಅವರು ಮನಸಾರೆ ಮನ್ನಿಸುತ್ತಿದ್ದರು. ಹೃದಯಾರೆ ಹರಸು ತ್ತಿದ್ದರು. ಆದರೆ ಅಂಥವರ ಸಂಖ್ಯೆ ತೀರ ಕಮ್ಮಿಯಿತ್ತು. ಸಮಾಜದ ವಿಸ್ತಾರ ದೃಷ್ಟಿಯಲ್ಲಿ ಅಲ್ಲಲ್ಲಿ ಒಬ್ಬಿಬ್ಬರಿರುವ ಸಣ್ಣ ಸಂಖ್ಯೆ ಯಾತಕ್ಕು ನಿಲುಕದಾಗಿತ್ತು.

ಸಮಾಜ ಸಂಸ್ಕೃತಿ ಸೇವಕರ ಗುಂಪಿನ ಆವಶ್ಯಕತೆ ಸ್ವಾಮಿಗಳವರ ಮನಸ್ಸಿನಲ್ಲಿ ಮುಮ್ಮೊಡಿಸಿಂತಿತು.

ಸ್ವಾಮಿಗಳವರ ಪ್ರವೃತ್ತಿ ಧರ್ಮವಿವೇಚನೆಯ ಮೇಲೆ ವಿಶೇಷವಾಗಿತ್ತು. ಈ ಅವರ ಬಂಧಕೆ. ಈಚೆಗೆ ವೀರಶೈವ ಮಹಾಸಭೆಯಲ್ಲಿ ನೆರವೇರಲು ಆತಂಕ ವಾಯಿತು. ಆಂಗ್ಲ ವಿದ್ಯೆಯ ಪದವೀಧರರು ಹೆಚ್ಚಾಗಿ ಸಭೆಯಲ್ಲಿ ಸೇರಿ ಧಾರ್ಮಿಕ ವಿಚಾರಕ್ಕೆ ಕ್ರಮವಾಗಿ ಕೊಡಲಿ ಪೆಟ್ಟು ಬಿದ್ದಿತು. ಅದರಿಂದಾಗಿ ಸ್ವಾಮಿಗಳವರು ಕ್ರಿ. ಶ. ೧೯೧೯ ರಲ್ಲಿ ಧರ್ಮೋತ್ತೇಜಕ ನಾಮಾಂಕಿತ ಸಭೆಯೊಂದನ್ನು ಬಂಕಾಪುರದಲ್ಲಿ ಹುಬ್ಬಳ್ಳಿ ಶ್ರೀ ಜಗದ್ಗುರು ಶ್ರೀ ಗಂಗಾಧರ ಸ್ವಾಮಿಗಳವರು ಮೂರು ಸಾವಿರ ಮಠ ಅವರ ಅಧ್ಯಕ್ಷತೆಯಲ್ಲಿ ನೆರವೇರಿಸಿ ದರು. ಅದನ್ನು ಮೂರು ನಾಲ್ಕು ವರುಷ ಪ್ರತ್ಯೇಕವಾಗಿ ನಡೆಯಿಸಿ ಧರ್ಮ ಪ್ರಸಾರಮಾಡಿದರು. ಅದರಿಂದಲು ಅವರ ಸಮಾಜ ಸಂಸ್ಕೃತಿಯ ಉತ್ಕ್ರಮಣ ಸೇವೆ ಸಾಕಷ್ಟು ನಾಗಲಿಲ್ಲ. ಆ ದಿಸೆಯಲ್ಲಿಯೂ ಅವರಿಗೆ ಸಮಾಜ ಸೇವಕರ ಬೋಧಕರ ಅಭಾವ ಹೆಜ್ಜೆ ಹೆಜ್ಜೆಗೂ ತೋರಿತು, ಹೆಚ್ಚು ಹೆಚ್ಚಾಗಿ ನಿರಾಶೆ ಬೀರಿತು.

ಸಮಾಜದ ಪ್ರತಿ ವ್ಯಕ್ತಿಯನ್ನು ಪ್ರತಿಕಲೆಯನ್ನು ಸುಧಾರಿಸುವ ಕಡೆ ಯಿಲ್ಲದ ಕುತೂಹಲ ಸ್ವಾಮಿಗಳವರದು. ಸಮಾಜ ಸಂಸ್ಕೃತಿಗಳ ಸೇವೆ ಯೊಂದಿದ್ದರೆ ಅವರಿಗೆ ಮೋಕ್ಷ ಬಂದರು ಅದು ಬೇಕಿರಲಿಲ್ಲ. ಆದ್ದರಿಂದ ಸಮಾಜದ ವಿಶಿಷ್ಟವರ್ಗವನ್ನು ಸುಧಾರಿಸುವ ಒಂದು ಸಂಸ್ಥೆಯನ್ನು ನಿರ್ಮಿಸುವ ಬಯಕೆ ಮೂಡಿಬಂದಿತು. ಗುರುವಿನ ಆದೇಶವು ಅದಾಗಿತ್ತು.



# ಶಿವಯೋಗ ಮಂದಿರ ಸ್ಥಾಪನೆ

"ಗಿಡಮೂಗಡಿ ಎಂಬ ಪುರದ ಜಂಗಮದೇವ ಮೃಡಕಣಾ.
ಭಿಕ್ಷವ ಬೇಡ್ಯಾನು ! ಪೊಡವಿಗೆ ಬಾಗಿ ಸೀಡಲು ದೃಢದಿಂದ
ಸೀಡಿಸಿಕೊಂಡಾನು ! ಮಲಾಪೂರ ತೀರದಿ ವಿರಕ್ತ ಜಂಗಮನೊಬ್ಬ
ನಲವಿಂದ ಹುಚ್ಚನೆನಿಸ್ಯಾನು ! ಲೋಲ ಜನಗಳು ಹೆಸರನೇ ಇಟ್ಟಾರು.
ಆ ಸ್ಥಳದಲ್ಲಿಯೆ ಹೂಳಿಸಿಕೊಂಡಾನು."

--ಹಳ್ಳೂರು ಕಾಲಜ್ಞಾನ.

[ಕುಮಾರ ಯೋಗಿಯು ಶ್ರೀ ಶಿವಯೋಗ ಮಂದಿರ ಸ್ಥಾಪನೆಯ ಮಣಿಹವನ್ನು ಬಿತ್ತರಿಸುವ ಪುರಾತನ ಕಾಲಜ್ಞಾನವಿದು. ಇದರಿಂದ ಕುಮಾರಯೋಗಿಯ ಕಾರಣಿಕತನವು ಕಣ್ಮನಗಳಿಗೆ ಗೋಚರವಾಗುತ್ತದೆ.]

ಒಂದು ದಿನ ಬೆಳಗಿನ ಒಂಬತ್ತು ಗಂಟೆ. ಕುಮಾರಸ್ವಾಮಿಗಳವರು ಬೆಳಗಿನ ಪೂಜೆಯನ್ನು ಪೂರೈಸಿಕೊಂಡು ಹಾನಗಲ್ಲ ಮಠದ ತೂಗುಮಣೆಯ ಮೇಲೆ ಮಂಡಿಸಿದಾರೆ. ಪುರಾತನ ತಾಳೆಗರಿಯೊಂದನ್ನು ಹಸ್ತದಲ್ಲಿ ಹಿಡಿದು ಓದುತ್ತಿದಾರೆ. ಒಮ್ಮೆಮ್ಮೆ ತಟ್ಟನೆ ಸಂಸ್ಥೆಯ ಸ್ಥಾಪನೆಯ ವಿಷಯ ನೆನಪಿಗೆ ಬಂದು ಹಾಗೆಯೆ ಯೋಚನಾಮಗ್ನರಾಗುತ್ತಿದಾರೆ. ಅವರು ತೂಗುಯ್ಯಾಲೆಯಲ್ಲಿ ಕುಳಿತಿದ್ದರು. ಅವರ ಮೊಗದಲ್ಲಿ ತೂಗಿ ತೊನೆದಿದ್ದಿಲ್ಲ. ತೂಗುಯ್ಯಾಲೆಯಂತೆ ಅವರ ಮನಸ್ಸು, ಒಮ್ಮೆ ಪುರಾತನ ಗ್ರಂಥಪರಿಶೋಧನೆಯತ್ತ ಇನ್ನೊಮ್ಮೆ ಭಾವೀ ಶಿವಯೋಗ ಮಂದಿರ ಸಂಸ್ಥೆಯ ನಿರ್ಮಾಣಯೋಚನೆಯತ್ತ ತೂಗಾಡುತ್ತಿತ್ತು, ತೂಕಹಾಕುತ್ತಿತ್ತು.

ಅಷ್ಟರಲ್ಲಿ ಒಬ್ಬ ಮಹಾವ್ಯಕ್ತಿಯು ಅಲ್ಲಿಗೆ ಹಠಾತ್ತಾಗಿ ಬಂದು ಕಂಡು ಕಾಣದವರಂತೆ ಈ ಮಠದ ಸ್ವಾಮಿಗಳೆಲ್ಲಿ ಎಂದು ಗಟ್ಟಿಯಾಗಿ ಕೇಳಲು ಅಲ್ಲಿಯೆ ಹತ್ತಿರದಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಊಳಿಗದವನು ಭಯಭಕ್ತಿಯುತನಾಗಿ ಕೈಸನ್ನೆಯಿಂದ ತೂಗುಮಣೆಯತ್ತ ತೋರಿಸಿ ಅವರೇ ಸ್ವಾಮಿ

ಗಳಿಂದ ಸೂಚಿಸಿದನು. ಆ ಮಹಾವ್ಯಕ್ತಿಯು ತೂಗುಯ್ಯಾಲೆಯ ಬಳಿಗೆ ಒಂದು ನಗುಸದೆ ಈ ಮಠದಸ್ವಾಮಿಗಳು ತಾವೇ ಏನು?—ಅನ್ನುವರು. ಯಾರು?—ಜನರು.

ಅನ್ನುವವರು ಮೂರ್ಖರು. ಅವರಿಗೆ ಬುದ್ಧಿಯಿಲ್ಲ. ಕಾವಿ ಧರಿಸಿ ಕೋಲು ಹಿಡಿದರೆ ಸ್ವಾಮಿಯಲ್ಲ. ಹಾವುಗೆ ಹಾಕಿ ಹಾಸುಮಂಚದ ಮೇಲೆ ತೂಗಿದರೆ ಸ್ವಾಮಿಯಲ್ಲ. ಎಲ್ಲ ಭೋಗಭಾಗ್ಯಗಳನ್ನು ತೊರೆದು ಬಾಹ್ಯ ಚಿನ್ಹಗಳ ಹುಚ್ಚು ಹರಿದು ನೆಲ ಹಾಸಿಕೆಯಾಗಿ ಮುಗಿಲು ಹೊದಿಕೆಯಾಗಿ ಶಮೆದಮೆಗಳೆಂಬ ಸುಗಂಧ ಪುಷ್ಪಗಳನ್ನು ಆಘ್ರಾಣಿಸಿ ಪ್ರಾತಿಭಾಸಿಕವಾದ ಪ್ರಪಂಚವನ್ನು ಪರಹಿತಸಾಧನೆಯ ಮಾರ್ಗದಲ್ಲಿ ಸತ್ಯವೆಂದು ಸಂಭಾವಿಸಿ ಸೇವೆಗೈಯುವ ಸತ್ಯವಿರತಿಯ ಮಾರ್ಗವೆತ್ತ? ಭೋಗಭಾಗ್ಯದ ಸೆಳೆತಕ್ಕೆ ಸಿಕ್ಕಿ ನಾನು ಮಠಾಧಿಕಾರಿ; ನಾನು ಮಹಾಸ್ವಾಮಿ ಎಂಬ ಅಹಮಿಕೆಯಿಂದ ಸೊಕ್ಕಿ ಭೂತಲಕ್ಕೆ ಪಾದವನ್ನು ಸೋಂಕಿಸದೆ ಅಹಂಕಾರ ಮಮಕಾರ ಸರಪಣಿಗಳಿಂದ ಬಿಸ್ರನೆ ಬಿಗಿದ ಈ ತೂಗುಮಂಚದ ಸಂಕೋಲೆಯ ಸುಖವೆತ್ತ? ಎಂದು ಮುಂತಾಗಿ ಯಾವ ಅಂಕು ಅಳುಕು ಇಲ್ಲದೆ ಅಖಂಡಧೈರ್ಯದಿಂದ ಅರ್ಥಪೂರ್ಣವಾಗಿ ಆತ್ಮಾವೇಶದಿಂದ ಆರೋಪಿಸುತ್ತಿರುವ ಆ ಮಹಾವ್ಯಕ್ತಿಯನ್ನು ಕಂಡು ಸ್ವಾಮಿಗಳವರು ಎಷ್ಟುಮಾತ್ರಕ್ಕೂ ಮುನಿಸು ತಾಳಲಿಲ್ಲ. ತಾವು ಆ ಕಟುವಾದ ಆರೋಪಣೆಗೆ ಅನುಗುಣವಾಗಿ ನಡೆದುಕೊಳ್ಳುತ್ತಿದ್ದರಲ್ಲವೆ ಕೋಪಾವೇಶಗಳ ಆರ್ಭಟ? ಆ ಮಾತುಗಳಿಗೂ ಮನಸ್ಸಿಗೂ ತಾಕಲಾಟ? ಶುದ್ಧಮಾರ್ಗಗಾಮಿಗಳಿಗೆ ಸತ್ಯವಾಕ್ ಪ್ರೇಮಿಗಳಿಗೆ ಆ ನುಡಿಗಳು ಕುಸುಮಗಳಾಗಿಯೆ ಪರಿಣಮಿಸಬಲ್ಲವು. ಸ್ವಾಮಿಗಳವರಿಗೆ ಹಾಗೆಯೆ ಪರಿಣಮಿಸಿವೆ. ನಿಮಿತ್ತ ಮಾತ್ರ ತೂಗುಯ್ಯಾಲೆಯಲ್ಲಿ ಕುಳಿತ ಅವರಿಗೆ ಆ ಮಾತುಗಳಲ್ಲಿ ಕೋಪವೆಲ್ಲಿಯದು? ತಾಪವೆಲ್ಲಿಯದು? ಪ್ರತಿಯಾಗಿ ಇಂತಹ ಅಪೂರ್ವ ವ್ಯಕ್ತಿಗಳು ನಮ್ಮ ಸಮಾಜದಲ್ಲಿ ಇದ್ದಾರಲ್ಲ ಎಂದು ಹೃದಯಾರೆ ಹರುಷಿಸಿ–ನೀವಾರು? ಎಲ್ಲಿಂದ ಬಂದುದು? ಏನು ಸಂಗತಿ? ಸ್ನಾನ ಶಿವಪೂಜೆಮಾಡಿಕೊಳ್ಳಿರಿ ಎಂದು ಮೊದಲಾಗಿ ಕುಶಲಪ್ರಶ್ನೆಗಳ ಕೇಳಿದಾರೆ.

ಅವರ ಉತ್ತರದಿಂದ ಅವರು ಪ್ರಸಿದ್ಧರಾಗಿದ್ದ ಬಾಗಲಕೋಟೆ ವೈರಾಗ್ಯದ ಮಲ್ಲಣಾರ್ಯರೆಂದು ಮನವರಿಕೆಯಾಗುತ್ತದೆ. ಆಮೇಲೆ ಇಬ್ಬರು ಸೇರಿ

ಸ್ನಾನ ಶಿವಪೂಜಾದಿ ಕ್ರಿಯೆಗಳನ್ನು ತೀರಿಸಿಕೊಳ್ಳುತ್ತಾರೆ. ತೀರದ ತೃಪ್ತಿಯಿಂದ ಮತ್ತೆ ಮಲ್ಲಣಾರ್ಯರು ಮಾತಿಗೆ ಮೊದಲು ಮಾಡುತ್ತಾರೆ; ಮನನೀಯವಾಗಿ ಮಾತನಾಡುತ್ತಾರೆ.

ಧರ್ಮೋನ್ನತಿಗೆ ಬ್ರಹ್ಮಬಲ – ಕ್ಷಾತ್ರಬಲ ಎರಡು ಕಾರಣಗಳೇನೊ ನಿಜ. ವಿಶ್ವದ ಇತಿಹಾಸವನ್ನು ನೋಡಿದರೆ ಕ್ಷಾತ್ರಬಲದಿಂದ ಬೆಳೆದ ಧರ್ಮಕ್ಕೆ ಒಮ್ಮಿಲ್ಲೊಮ್ಮೆ ಬೀಳುಂಟೆಂದು ತಿಳಿದುಬರುತ್ತದೆ. ಬೆಳಗಿನ ಬೆನ್ನಮೇಲೆ ಕತ್ತಲೆಯು ಕಾದಿರುವಂತೆ ಕ್ಷಾತ್ರಬಲದ ಮೇಲೆ ಮತ್ತೊಂದು ಕ್ಷಾತ್ರಬಲ ಕತ್ತಿಯನ್ನೆತ್ತಿ ತನ್ನ ಧರ್ಮಧ್ವಜವನ್ನು ಎತ್ತರದಲ್ಲಿ ಹಾರಿಸುತ್ತದೆ. ಈ ಏರಿಳಿತಗಳ ನೋಂಕಿಲ್ಲದೆ ಏಕರೀತಿಯಲ್ಲಿ ಎಲ್ಲ ಕಾಲದಲ್ಲಿ ವೈಷಮ್ಯ ವೈಕಲ್ಯಗಳಿಲ್ಲದೆ ಧರ್ಮವು ಮುನ್ನಡೆಯಬೇಕಾದರೆ ಆತ್ಮ ಬಲದಿಂದ ಮತ್ತು ಅಹಿಂಸೆ ಸತ್ಯ ವಿರತಿ ವಿಶಾಲಮತಿ ಇವುಗಳ ಬೆಂಬಲದಿಂದ ಸ್ಥಾಪಿತವಾದ ಧರ್ಮವೆ ಚಿರಕಾಲ ಉಳಿಯಬಲ್ಲುದು. ಚಿತ್ಪ್ರಕಾಶ ಬೆಳಗಬಲ್ಲದು. ಚಿದಾನಂದ ಬೀರಬಲ್ಲುದು.

ಈಗ ಕಂದಿ ಕುಂದಿದ ಶಿವಯೋಗ ಧರ್ಮಕ್ಕೆ ಈ ಮಾರ್ಗದಿಂದ ಮೆರಗುಕೊಡಬೇಕಾಗಿದೆ. ಇದಕ್ಕಾಗಿ ಸರ್ವಸಮನ್ವಯದ ಒಂದು ದೊಡ್ಡ ಯೋಗ ಸಂಸ್ಥೆಯ ಆವಶ್ಯಕತೆ ಅನಿವಾರ್ಯವಾಗಿದೆ. ಅದು ನಿಮ್ಮಿಂದ ನೆರವೇರಬೇಕಾಗಿದೆ. ನೆಲೆ ನಿಲ್ಲಬೇಕಾಗಿದೆ. ಏನು ಹೇಳುವಿರಿ ?

ತಾವು ಮೊದಲೆ ಯೋಚಿಸುತ್ತ ಇದ್ದುದನ್ನೆ ಮಲ್ಲಣಾರ್ಯರು ಸೂಚಿಸಿದುದನ್ನು ಕೇಳಿ ಒಳಗೊಳಗೆ ತುಂಬಾ ಸಂತೋಷಭರಿತರಾದರು. ಮೇಲೆ ಇವಕ್ಕೆ ಅವರ ಬೆಂಬಲವಿದೆಯೊ ಇಲ್ಲವೊ ತಿಳಿಯಲು ಈ ಪ್ರಶ್ನೆಯನ್ನು ಹಾಕುತ್ತಾರೆ. ಸಂಸ್ಥೆಯನ್ನು ಸ್ಥಾಪಿಸಬೇಕಾದುದೇನೊ ಸರಿ, ಆದರೆ ಅದು ಅಪಾರ ದ್ರವ್ಯ ಬಲವಿಲ್ಲದೆ ಸಾಧ್ಯವಾಗದು. ಅಷ್ಟೊಂದು ದ್ರವ್ಯ ಈಗ ನಮ್ಮಲ್ಲಿಲ್ಲ. ಏನು ಮಾಡುವುದು ?

ಈ ಮಾತಿಗೆ ಮಲ್ಲಣಾರ್ಯರು ಕಾಲು ತಾಗಿದ ಹಾವಿನಂತೆ ಮುನಿದೆದ್ದು ಮಹಾಸ್ವಾಮಿ, ತಮ್ಮಂತಹ ನಿರಾಭಾರಿ ವಿರಕ್ತರು ನಿರಂಜನ ಮೂರ್ತಿಗಳು ಮಠಮಾನ್ಯಗಳ ಮೋಹವನ್ನು ಕಳಚಿ ಮೇಲುಪ್ಪರಿಗೆಯ ತೂಗುಯ್ಯಾಲೆಯ ಸುಖಕ್ಕೆ ಸೀರೆರಚಿ ಶಾಂತಿ ವಿಶ್ರಾಂತಿಗಳ ಹವ್ಯಾಸವನ್ನು ನುಣಿಚಿ ಡಾಂಭಿಕ

ಭಕ್ತರ ಪರಡಿ ಪಾಯಸಗಳ ಸವಿಯೂಟವ ಹಿಳಿದು ಹಿಮ್ಮೆಟ್ಟಿ ಮೇಣೆ ಪಲ್ಲಕ್ಕಿಗಳ ವೈಭವವನ್ನು ಕನಸು ಮನಸಿನಲ್ಲಿ ನೆನೆಯದೆ ಸಮಾಜಸೇವೆಯ ಸತ್ಯಸಂಕಲ್ಪದ ಪ್ರತಿಜ್ಞೆಮಾಡಿ ಧಾರ್ಮಿಕ ಸಾಧನಗಳಾದ ಜೋಳಿಗೆ ಬೆತ್ತ ಗಳನ್ನು ಹಿಡಿದು ಆಚಾರನಿಷ್ಠೆಯೆಂಬ ಕುದುರೆಯನೇರಿ ಪಯಣ ಬೆಳೆಸಿದರೆ ಲಕ್ಷಾಂತರ ರೂಪಾಯಿಗಳ ರಾಶಿ 'ನಾ-ನೀ' ಅನ್ನುವದರೊಳಗಾಗಿ ಕೂಡ ಬೀಳುವುದು. ಇದಕ್ಕೆ ನಿಮ್ಮ ಮನೋಧೈರ್ಯವಿಲ್ಲದಿದ್ದರೆ ನಿಮ್ಮ ಆ ಜೋಳಿಗೆ ಬೆತ್ತಗಳನ್ನು ನನ್ನ ಕೈಗೆ ಕೊಡಿರಿ. ನಾನು ಮುಂದೆ ಮುಂದೆ ಪ್ರಯಾಣ ಮಾಡಿದಂತೆ ತಾವು ನನ್ನ ಹಿಂದೆಯಾದರು ದಯಮಾಡಿರಿ. ಆಮೇಲೆ ಆ ಯೋಗ ಸಂಸ್ಥೆಯು ಹೇಗೆ ಆಗುವುದಿಲ್ಲವೊ ನೋಡೋಣ! ಹಣ ಹೇಗೆ ಒದಗುವದಿಲ್ಲವೊ ನಿರೀಕ್ಷಿಸೋಣ! ಎಂದು ಕೆರಳಿ ನುಡಿದರು. ಕೆಲಸಕ್ಕೆ ಕೆರಳುವಂತೆ, ಕೆಚ್ಚೆದೆಯಿಂದ ತೆರಳುವಂತೆ ಮಾಡಿದರು.

ಆ ಭಾವಾವೇಶದ ಭಾಷಣವನ್ನು ಕೇಳಿಯೇ ಸ್ವಾಮಿಗಳವರು ಆ ಕಾರ್ಯಕ್ಕೆ ಮುಂದುವರಿಯುವ ಸನ್ನಿವೇಶ ಇರಲಿಲ್ಲ. ಅವರು ಮೊತ್ತಮೊದಲೆ ಆ ಕಾರ್ಯಾಲೋಚನೆಯಲ್ಲಿದ್ದರು. ಆದರೆ ಅವರ ಭಾಷಣದಿಂದ ಇಷ್ಟು ಮಾತ್ರ ಪ್ರಯೋಜನವಾಯಿತು :

ಸ್ವಾಮಿಗಳವರು ಮುಂಗೋರುತ್ತಿದ್ದಂತೆ ಸಹಕರಿಸುವ ಒಬ್ಬ ಸಹೋದ್ಯೋಗಿಗಳು ಸಿಕ್ಕಿದಂತಾಯಿತು. ಯೋಚನೆ ಹೋಗಿ ಯೋಜನೆಗೆ ಅವಕಾಶ ಕಲ್ಪಿಸಿಕೊಟ್ಟಿತು. ಇಬ್ಬರು ನೇರಿ ಅರ್ಥವನ್ನು ಆರ್ಜಿಸಿ ಯೋಗಸಂಸ್ಥೆಯೊಂದನ್ನು ಸ್ಥಾಪಿಸುವ ದೃಢಸಂಕಲ್ಪಮಾಡಿದರು, ಧುರೀಣರಾಗಿ ನಿಂತರು.

ನೇರಿ ಸಂಕಲ್ಪಮಾಡಿದ್ದು ಮಾತ್ರವೆ! ಸ್ವಲ್ಪ ದಿನಗಳಲ್ಲಿಯೆ ಮಲ್ಲಣಾರ್ಯರು ದೀರ್ಘಕಾಹಿಲೆ ಮಲಗಿ ವಾಸಿಯಾಗದೆ ಉಲ್ಬಣವಾಗಿ ಅದರಲ್ಲಿಯೆ ಲಿಂಗೈಕ್ಯರಾದರು. ಅವರಲ್ಲಿದ್ದ ನಿರೀಕ್ಷೆ ನೀರಾಯಿತು, ಆಶೆ ನಿರಾಶೆಯಾಯಿತು. ಸ್ವಾಮಿಗಳವರು ಮರಳಿ ಒಬ್ಬಂಟಿಗರಾದರು. ವರ್ಷಾಕಾಲದಲ್ಲಿ ಮಿಂಚು ಮಿಂಚಿದಂತಾಯಿತು. ಮರುಕ್ಷಣದಲ್ಲಿ ಮತ್ತಿಷ್ಟು ಕಗ್ಗತ್ತಲೆ ಕವಿದಂತಾಯಿತು ; ಕಣ್ಣು ಕಾಣದಂತಾಯಿತು.

ಏನಾದರೇನು ? ಕುಮಾರಸ್ವಾಮಿಗಳವರು ಅಷ್ಟೇನು ಅಳ್ಳೆದೆಯವ ರಾಗಿರಲಿಲ್ಲ. ಸಹಾಯಕರಿರಲಿ ಇಲ್ಲದಿರಲಿ, ಸಿರಿಬರಲಿ ಉರಿಬರಲಿ ಮುನ್ನುಗ್ಗಿದ ಮೇಲೆ ಹಿಂದಡಿಯಿಡುತ್ತಿರಲಿಲ್ಲ. ಹೇಡಿಗಳಂತೆ ಹಿಮ್ಮುಖ ರಾಗುತ್ತಿರಲಿಲ್ಲ. ಮಾಡಿದ ಸಂಕಲ್ಪವನ್ನು ಕೈಬಿಡದೆ ಇನ್ನೂ ಇಮ್ಮಡಿ ಉತ್ಸಾಹದಿಂದ ಕೆಲಸ ಮಾಡಲಾರಂಭಿಸಿದರು. ಮಲ್ಲಣಾರ್ಯರ ಉತ್ಸಾಹ ಶಕ್ತಿ ಬಂದು ಸ್ವಾಮಿಗಳವರಲ್ಲಿ ಸಂಪರ್ಕವಾಯಿತು. ಎರಡಳಿದು ಒಂದಾ ದಂತಾಯಿತು.

ಕುಮಾರಸ್ವಾಮಿಗಳವರು ಕಂಡ ಕಂಡ ಕಡೆಗೆ ಸುತ್ತಿದರು. ತಮ್ಮ ಮತಿವಂತಿಕೆಯಿಂದ ಧೃತಿವಂತಿಕೆಯಿಂದ ಅನತಿಕಾಲದಲ್ಲಿಯೆ ಹದಿನಾಲ್ಕು ಸಾವಿರಕ್ಕೆ ಕಡಿಮೆಯಿಲ್ಲದಷ್ಟು ಹಣವನ್ನು ಸಂಗ್ರಹಿಸಿದರು. ಅಷ್ಟು ಜಾಗ್ರತೆ ಅಷ್ಟೊಂದು ಅರ್ಥಸಂಗ್ರಹವಾದುದು ಅನೇಕರಿಗೆ ಆಶ್ಚರಿಯೆನಿಸಿರುವಂತ ಸ್ವಾಮಿಗಳವರು ವಿಸ್ಮಯಗೊಂಡರು. ನಿಸ್ವಾರ್ಥಿಗಳಿಗೆ ನಿತ್ಯಲಕ್ಷ್ಮಿಯು ತಾನೆ ತಾನಾಗಿರುವಳೆಂಬ ಮಾತು ನಿಜವಾಗಿಯು ಸ್ವಾಮಿಗಳವರಲ್ಲಿ ಸಾರ್ಥಕ ವಾಗಿತ್ತು, ಸಂಪ್ರೋಕ್ಷವಾಗಿತ್ತು.

ಕ್ರಿ. ಶ. ಸಾವಿರದ ಒಂಬೈನೂರು ಎಂಟನೆಯ ಸಾಲು. ಬಾಗಲ ಕೋಟೆಯಲ್ಲಿ ಆ ಸಲ ವೀರಶೈವ ಮಹಾಸಭೆಯು ಜರಗಬೇಕೆಂದು ನಿರ್ಧರವಾಗಿತ್ತು. ಆಗಳೆ ಅದರ ಪ್ರಕಟನೆಗು ಆರಂಭವಾಗಿತ್ತು. ಸ್ವಾಮಿ ಗಳವರು ಅದೇ ಪ್ರಕಟನೆಯಲ್ಲಿಯೆ, ಶಿವಯೋಗ ಮಂದಿರ ಸಂಸ್ಥೆಯ ಸ್ಥಾಪನೆಯ ವಿಷಯವನ್ನು ಪ್ರಕಟಿಸಿದರು. ನಿಯಮಿತ ಕಾಲಕ್ಕೆ ಸಭೆ ಜರಗಿತು. ಸಭೆಯ ಕಾರ್ಯಕಾರಿ ಸಮಿತಿಯಲ್ಲಿ ಶ್ರೀ. ಮ. ನಿ. ಪ್ರ. ಇಳಕಲ್ಲ ಮಹಾಂತಸ್ವಾಮಿಗಳವರು ತೋರಿಸಿದಲ್ಲಿ ಮಂದಿರವನ್ನು ಸ್ಥಾಪಿಸುವಂತ ತೀರ್ಮಾನವಾಯಿತು.

ಆಲೋಚಿಸಿದ ಕಾರ್ಯವನ್ನು ಅಲ್ಲಿಗೆ ಕೈಬಿಡುವುದು ಕುಮಾರಸ್ವಾಮಿ ಗಳವರ ಸ್ವಭಾವವಾಗಿರಲಿಲ್ಲ. ಅದು ಬೇಗ ಕಾರ್ಯರೂಪಕ್ಕೆ ಬಾರದೆ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ. ಅದರಿಂದಾಗಿ ಸ್ವಾಮಿಗಳವರು ಆಕ್ಷಣದಲ್ಲಿಯೆ ಇಳಕಲ್ಲಿಗೆ ಹೋಗಿ ಆ ಶ್ರೀಗಳವರಿಗೆ ಆದ್ಯಂತವನ್ನೆಲ್ಲ ಅರಿಕೆಮಾಡಿ ಸ್ಥಳವನ್ನು ತೋರಿಸಲು ಆಗಳೆ ಹೊರಡಿಸಿದರು. ಜೊತೆಗೆ ಜಿಲ್ಲಾಧಿ

ಕಾರಿಗಳಾಗಿದ್ದ ಕಿತ್ತೂರು ರೇವಣಸಿದ್ಧಪ್ಪನವರು ಮತ್ತು ಧಾರವಾಡ, ಹುಬ್ಬಳ್ಳಿ, ಗದಗ, ಬಾಗಲಕೋಟೆ ಮುಂತಾದ ನಗರಗಳ ೨೦-೩೦ ಜನ ಪ್ರಮುಖರು ಸಹ ಹೊರಡುವರು. ಹುನಗುಂದ ಮಾರ್ಗವಾಗಿ ಹೊರಟು ಐತಿಹಾಸಿಕ ಪ್ರಸಿದ್ಧವಾದ ಐಹೊಳೆಯ ಕ್ಷೇತ್ರಕ್ಕೆ ಬಂದರು. ಅಲ್ಲಿನ ಪುರಾತನ ದೇವ ಮಂದಿರಗಳನ್ನು ನೋಡಿ ಕೆಲವರು ಅಲ್ಲಿಯೆ ಸ್ಥಾಪಿಸಲು ಇಷ್ಟಪಟ್ಟರು. ಅದಕ್ಕೆ ಇಳಕಲ್ಲ ಶ್ರೀಗಳವರ ಒಪ್ಪಿಗೆಯಾಗಲಿಲ್ಲ. ಇದು ಏಕಾಂತತೆಗೆ ಭಂಗವೆಂದು ಅವರ ಹೇಳಿಕೆ. ಅಲ್ಲಿಂದ ಮತ್ತೊಂದು ಐತಿಹಾಸಿಕ ಪ್ರಸಿದ್ಧ ವಾದ ಪಟ್ಟದ ಕಲ್ಲಿಗೆ ಆಗಮಿಸಿದರು. ಅಲ್ಲಿ ಕೆಲವರು ತಮ್ಮ ಬಯಕೆಯನ್ನು ಬಿಚ್ಚಿ ಬಿನ್ನೈಸಿದರು. ಅದಕ್ಕೆ ಶ್ರೀಗಳವರು ಅಲ್ಲಿಯೆ ಪಕ್ಕದಲ್ಲಿದ್ದ ನಾಗರ ಹಾವನ್ನು ತೋರಿಸಿ ಇಲ್ಲಿ ಬೇಡ ಎಂದು ಸಮಾಧಾನ ಹೇಳಿದರು. ಎಲ್ಲರನ್ನು ಶಿವಪೂಜೆಗಾಗಿ ಅಲ್ಲಿಯೆ ಒಳಿಯಲ್ಲಿರುವ ಪುರಾಣಪ್ರಸಿದ್ಧವು ಪವಿತ್ರವು ಆದ ಮಾಕೂಟಕ್ಕೆ ಕಳುಹಿಸಿ ತಾವು ಸ್ವಲ್ಪ ಹೊತ್ತು ಪಟ್ಟದಕಲ್ಲಿನಲ್ಲಿಯೆ ವಿಶ್ರಮಿಸಿ ಒಳಕ ಮಲಾಪಹಾರಿಣಿ ನದಿಯ ತೀರವನ್ನು ಹಿಡಿದು ಹೊರಟು ಈಗಿರುವ ಶಿವಯೋಗ ಮಂದಿರ ಸ್ಥಳದ ಹತ್ತಿರಕ್ಕೆ ಬರುವರು. ಎತ್ತ ನೋಡಿದರು ಹೆಗ್ಗಾಡು, ಕಗ್ಗಾಡು. ಹೆಜ್ಜೆಯಿಡಲು ಸಾಧ್ಯವಿಲ್ಲದಂತೆ ಮುಳ್ಳು ಗಳ್ಳಿ (ಪಾಪಾಸು ಕಳ್ಳಿ) ಬೆಳೆದು ನಿಂತಿದೆ. ಏನೂ ಸರಿಯಾಗಿ ಕಾಣುವಂತಿಲ್ಲ. ಮತ್ತೊಂದೆಡೆಗೆ ಶ್ರೀಗಳು ನೋಡುತ್ತಾರೆ. ಹೊಲದಲ್ಲಿ ಒಬ್ಬ ರೈತನು ಕಾಣಸಿಕೊಂಡನು. ಅವನ ಬಳಿಗೆ ಬಂದು ಸ್ಥಳ ಪರಿಚಯವನ್ನು ಕೇಳಿದರು. ಇಲ್ಲಿ ಎಲ್ಲಿಯಾದರು ನದಿಗೆ ಸಮೀಪದಲ್ಲಿ ಬಿಲ್ವಪತ್ರಿಯ ವನವಿರುವ ಸ್ಥಳವನ್ನು ತೋರಿಸು ಎಂದೆನ್ನುವರು. ರೈತನು ಇದೋ ಈ ದಬದಬೆಯ (ದಿಡಗಿನ) ದಂಡೆಯ ಸಮೀಪದಲ್ಲಿ ಬೇಕಾದಷ್ಟು ಪತ್ರಿಯ ಗಿಡಗಳಿವೆ ಎಂದು ತೋರಿಸಿ ದನು. ಶ್ರೀಗಳವರು ಮೇಲಿನಿಂದ ಕೆಳಕ್ಕೆ ಧೋ ಎಂದು ಶಬ್ದಮಾಡುತ್ತ ಬೀಳುವ ಹೊಳೆಯ ರಮ್ಯತೆಯನ್ನು ನೋಡಿ ಸಂತೋಷಿಸಿದರು. ಇಲ್ಲಿ ಇನ್ನೇನಿದೆ ತೋರಿಸೆಂದು ಕೇಳಿದ್ದಕ್ಕೆ ರೈತನು ಅದೇ ನಿಬಿಡವಾಗಿ ಬೆಳೆದ ಮುಳ್ಳುಗಳ್ಳಿಯ ಪೊದೆಗಳಲ್ಲಿ ದಾರಿ ಸ್ವಾಮಿಗಳವರನ್ನು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗುವನು. ಅಲ್ಲಿ ಬಿಲ್ವವನ. ಅದರ ಬಳಿಯಲ್ಲಿ ಒಂದು ಮುರಿದು ಬಿದ್ದ ಸಣ್ಣ ಗುಡಿ. ಅದರಲ್ಲಿ ದೇವರ ಇರಲಿಲ್ಲ. ಸ್ವಾಮಿ, ಇದು

ಕೊಟ್ಟೂರ ಬಸವೇಶ್ವರ ದೇವಸ್ಥಾನ. ನಾವೆಲ್ಲ ಶ್ರಾವಣ ಸೋಮವಾರಗಳಲ್ಲಿ ಬಂದು ಇವಕ್ಕೆ ಎಡೆ ಕಾಯಿ ಕಪ್ಪುರಗಳನ್ನು ಸಮರ್ಪಿಸುತ್ತೇವೆ; ಎಂದು ಹೇಳಿದನು.

ಶ್ರೀಗಳವರು ಆ ಮಾತಿಗೆ ಓಹೋ! ಇವು ಕೊಟ್ಟೂರು ಬಸವ; ಕೊಡದಿದ್ದರು ಬಸವ ಎಂದು ನುಡಿದು ಅಲ್ಲಿಯೆ ಕುದುರೆಯಿಂದಿಳಿದು ಕುಳಿತು ಕೊಳ್ಳುವರು. ಅದೇ ರೈತನನ್ನು ಕಳುಹಿಸಿ ಮಾಕೂಟದಲ್ಲಿರುವವರನ್ನೆಲ್ಲ ಕರೆಯಿಸುವರು. ಇಹೋ ಇದೆ ಶಿವಯೋಗ ಮಂದಿರವನ್ನು ಕಟ್ಟಲು ತಕ್ಕ ಸ್ಥಳ. ಇಲ್ಲಿಗೆ ನದಿಯು ತೀರ ಹತ್ತಿರವಲ್ಲಿದೆ. ಬೇಕಾದಷ್ಟು ಬಿಲ್ವವೃಕ್ಷಗಳಿವೆ. ಸೊಂಪಾದ ಲತಾ ಮಂಟಪಗಳಿವೆ. ಇಲ್ಲಿಯೆ ಸಂಸ್ಥೆಯನ್ನು ನಿರ್ಮಿಸಲು ಉಚಿತವಾಗಿದೆ ಎಂದು ಅಪ್ಪಣೆಮಾಡಿದರು. ಇವಕ್ಕ ಅನೇಕರ ಒಪ್ಪಿಗೆಯಿಲ್ಲದಿದ್ದರು ವಿಧಿಯಿಲ್ಲದೆ ಕೊನೆಗೆ ಎಲ್ಲರೂ ಒಪ್ಪಿದರು. ಆ ಕ್ಷಣದಲ್ಲಿಯೆ ಅದೇ ಕೊಟ್ಟೂರು ಬಸವೇಶ್ವರ ಗದ್ದುಗೆಯ ಮುಂದೆ ಕಪ್ಪುರ ಹಚ್ಚಿ ಕಾಯಿ ಒಡೆದು ಮಂಗಳಾರತಿ ಮಾಡಿದರು. ಆಗ ಸುಮಾರು ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತು. ಶ್ರೀಗಳು ಈಗ ನಾವು ಊರಿಗೆ ಹೋಗಿ ಏಳೆಂಟು ದಿನಗಳಲ್ಲಿ ಒದಗುವ ರಥಸಪ್ತಮಿಗೆ ಲಿಂಗ ಮುದ್ರೆಯನ್ನು ಸ್ಥಾಪಿಸಲು ಬರುತ್ತೇವೆ. ಅಲ್ಲಿಯ ವರೆವಿಗು ನೀವೆಲ್ಲರು ಇಲ್ಲಿಯೆ ಇದ್ದು, ಈ ಸ್ಥಳವನ್ನು ವಿಕ್ರಯಕ್ಕೆ ಪಡೆದು ಸ್ವಚ್ಛಮಾಡಿರಬೇಕೆಂದು ಹೇಳಿ ಕುದುರೆಯೇರಿ ಅದೇ ಹೊರಟು ಹೋದರು. ಹಳ್ಳಿಯ ರೈತನು ಹಳ್ಳಿಗೆ ಹೊರಟು ಹೋಗುವನು. ಹೊತ್ತು ಮುಳುಗುವುದು.

ಪುಷ್ಯಮಾಸದ ಅಮಾವಾಸ್ಯೆ ಕತ್ತಲೆಯ ಪಾಳೆಯವಾಗಿತ್ತು. ಸುತ್ತಲು ಮುಳ್ಳುಪೊದೆಗಳು ವಿಶೇಷವಾಗಿ ಬೆಳೆದು ನಿಂತಿವೆ. ಕಾಡಮೃಗಗಳ ಕಳ್ಳಕಾಕರ ಭಯ ಎಲ್ಲರನ್ನು ಬಾಧಿಸತೊಡಗಿತು. ಅಂತಹವರಲ್ಲಿ ಹಾನಗಲ್ಲ ಸ್ವಾಮಿಗಳವರು ತಮ್ಮೊಡನೆ ಬಂದವರಿಗೆಲ್ಲ ಧೈರ್ಯಹೇಳುತ್ತ ಧೀರೋದಾತ್ತರಾಗಿ ಧುರಂಧರರಾಗಿ ಧರ್ಮನಿಷ್ಠರಾಗಿ ನಿಂತಿದಾರೆ. ಅಷ್ಟರಲ್ಲಿ ಹಕ್ಕಿಗಳು ಹಾಡಿದವು. ಚುಕ್ಕಿಗಳು ಮೂಡಿದವು. ನದಿಯು ನಿರ್ಮಲೋದಕವ ನೀಡಿತು. ವನದೇವತೆ ವನ್ಯ ಮೃಗಗಳಿಗೆ ಅಹಿಂಸೆಯಿಂದಿರಲು ಶಾಸಿಸಿತು. ಅದರಿಂದಾಗಿ ಕಾಡಹಂದಿಗಳು

ಚಿರ್ಚುಗಳು ತಮ್ಮ ಗೂಡ ಸೇರಿದವು. ವನಪಶುಗಳು ಸಹ ಕುಮಾರ ಸ್ವಾಮಿಗಳವರ ಧರ್ಮಕಾರ್ಯಕ್ಕೆ ನೆರವಾದವು. ನಿಸರ್ಗವು ಸಹ ಸ್ವಾಮಿಗಳ ಧರ್ಮೋದ್ಯಮದ ಮೂರ್ತಿ ರೂಪನ್ನು ತಾಳಿದಂತಿತ್ತು. ಯಾವುದರಿಂದ ಯಾವ ಭಯವು ಯಾರಿಗಾಗಲಿಲ್ಲ. ಎಲ್ಲರು ಮರದ ಬುಡದಲ್ಲಿ ಶಿವಪೂಜೆಯನ್ನು ಮಿತಾಹಾರವನ್ನು ನೆರವೇರಿಸಿ ವನ್ಯ ಭೂಮಿಯ ಮೇಲೆ ಮಲಗಿದರು.

ಪುಷ್ಯದ ಮಸುಗು ಹರಿಯಿತು. ಮಾಘದ ಬೆಳಗು ಮೂಡಿತು. ಮುಂದಿನ ಮಹಾಕಾರ್ಯಕ್ಕೆ ಪ್ರಕೃತಿ ದೇವಿ ಚೆಂಬಣ್ಣದ ಚಿಗುರುಡಿಗೆಯ ನುಟ್ಟು ರವಿತಿಲಕವನಿಟ್ಟು ಕಿರಣಭಸಿತವ ಧರಿಸುವಳು. ನೀಲಾಕಾಶದ ತಳಿಗೆಯಲ್ಲಿ ಜಗಜ್ಯೋತಿಯನ್ನಿಟ್ಟು ಮಂಗಳಾರತಿಯ ಮಾಡುವಳು. ಹಕ್ಕಿ ಗಳು ಮಂಜುಳ ಘೋಷವಮಾಡುವವು. ಲತಾಕುಂಜಗಳು ಮುಗ್ಗು ಮಂಜರಿ ಗಳ ಮಾಲೆಯ ಹಾಕಲು ಸಜ್ಜಾಗಿರುವವು. ಸೂರ್ಯೋದಯದೊಡನೆ ಶುಭೋದಯವಾಯಿತು.

ಎಲ್ಲರು ಎದ್ದರು. ಮೊಗದೊಳೆದರು. ಮುಂಜಾವಿನ ಆ ನಿಸರ್ಗ ಮನೋಹರ ದೃಶ್ಯವನ್ನು ಕಣ್ತುಂಬ ನೋಡಿ ನಲಿದರು. ನಗರಗಳಲ್ಲಿ ಈ ನಿರ್ಮಲ ನಿಸರ್ಗದೃಶ್ಯ ಎಲ್ಲಿಂದ ಬರಬೇಕು? ಎಷ್ಟು ಕೊಟ್ಟರೆ ದೊರೆಯ ಬೇಕು ಎಂದು ಮನಸಾರೆ ಕೊಂಡಾಡಿದರು. ಮುಂದಿನ ಕಾರ್ಯಕ್ಕೆ ಅಣಿ ಯಾದರು.

ಕುಮಾರ ಮಹಾಸ್ವಾಮಿಗಳವರು ಕಿತ್ತೂರು ರೇವಣಸಿದ್ಧಪ್ಪನವರನ್ನು ಗುಳೇದಗುಡ್ಡ ಜಿರ್ಲಿ ಮುರಘೆಪ್ಪನವರನ್ನು ಕೂಡಿಕೊಂಡು ಪಕ್ಕದಲ್ಲಿರುವ 'ಮಂಗಳೂರು' ಎಂಬ ಹಳ್ಳಿಗೆ ಹೋಗುವರು. ಹಲವರನ್ನು ವಿಚಾರಿಸಿ ಆ ಹೊಲದ ಒಡೆಯನನ್ನು ಗುರುತಿಸುವರು. ಅವನು ತೀರ ಬಡವನಾಗಿದ್ದನು. ವಿಶೇಷವಾಗಿ ಮುಳ್ಳುಗಳ್ಳಿ ಬೆಳದ ಭೂಮಿಯಲ್ಲಿ ಬೆಳೆಯಿಡಲು ಅವನಿಗೆ ಸಾಧ್ಯ ವಾಗದೆ ಹೋಗಿತ್ತು. ಅದರಿಂದಾಗಿ ಪ್ರತಿವರ್ಷವು ಕೈಯಿಂದ ಕಂದಾಯ ಕಟ್ಟಿ ಬೇಸತ್ತಿದ್ದನು. ಬೇರೆಯಾರು ಅದನ್ನು ತೆಗೆದುಕೊಳ್ಳುವವರಿರಲಿಲ್ಲ. ಹೀಗಾಗಿ ಯಾರಾದರು ಗಿರಾಕಿ ಬಂದರೆ ಸಾಕಾಗಿತ್ತು. ತಕ್ಷಣವೆ ಕ್ರಯಕ್ಕೆ ಕೊಡಲೊಪ್ಪಿದನು. ಬೆಲೆ ಇನ್ನೂರು ರೂಪಾಯಿಗಳೆಂದು ನಿರ್ಧರವಾಯಿತು. ಹಣವನ್ನು ಆತನಿಗೆ ಕೊಟ್ಟು ಕ್ರಯಪತ್ರ ಬರೆಯಿಸಿಯಾಯಿತು. ಬಂದೊಡನೆ

ಬಂದ ಕಾರ್ಯವಾದುದಕ್ಕೆ ಸ್ವಾಮಿಗಳವರಿಗೆ ಸಂತೋಷವಾಯಿತು. ಮುಳ್ಳು ಗಳ್ಳಿ ಕಡಿದುಹಾಕಲು ಮೂವತ್ತು ನಾಲ್ವತ್ತು ಜನ ಆಳುಗಳನ್ನು ಕರೆತಂದು ಕೆಲಸಕ್ಕೆ ಪ್ರಾರಂಭಿಸಿದರು. ನಾಲ್ಕೈದು ದಿನ ಅದೇ ಒಂದು ದೃಶ್ಯವಾಗಿತ್ತು. ಅದೇ ಒಂದು ಕಾಲಕ್ಷೇಪವಾಗಿತ್ತು.

ಆರನೆಯ ದಿನ ಐದಾರು ಪರ್ಣಕುಟೀರ ತೃಣಕುಟೀರಗಳನ್ನು ಅಂದವಾಗಿ ನಿರ್ಮಿಸಿದರು. ಬೆಳಗಾದರೆ ರಥಸಪ್ತಮಿ. ಶಿವಯೋಗ ಮಂದಿರ ಸ್ಥಾಪನೆಯ ದಿನ. ಇಳಕಲ್ಲಿನಿಂದ ಶ್ರೀ ಮಹಾಂತ ಸ್ವಾಮಿಗಳವರು ಬರುವ ನಿರೀಕ್ಷಣೆ. ಸುತ್ತು ಮುತ್ತಣ ಹಳ್ಳಿಗಳ ಜನರಿಗೆಲ್ಲ ಒಂದು ಅಭೂತಪೂರ್ವ ವಾದ ಉತ್ಸಾಹ. ಗಿಡಗಂಟಿಗಳನ್ನು ಕಡಿದು ಹಸನಮಾಡಿದ್ದರು. ಪರ್ಣ ಕುಟೀರಗಳ ಮುಂದೆ ಮಾಂದಳಿರ ತೋರಣ ಕಟ್ಟಿ ಸಿಂಗರಿಸಿದ್ದರು. ಕಲ್ಲುಗಳ ಮೇಲೆ ಲಿಂಗಮುದ್ರೆಗಳನ್ನು ಕೆತ್ತಿಸಿ ಒಂದೆಡೆಗ ಇರಿಸಿದ್ದರು. ಆ ವೇಳೆಗೆ ಇಳಕಲ್ಲಿನಿಂದ ಶ್ರೀಗಳವರು ತಮ್ಮ ಪ್ರೀತಿಯ ಹಸುವಿನೊಡನೆ ಬರುವರು. ಆ ಸಂಭ್ರಮಕ್ಕೆ ವನದೇವತೆಯು ಬನಶಂಕರಿಯ ರೂಪದಲ್ಲಿ ಬಂದಿದ್ದಳು. ಐಹೊಳೆಯ ಭಕ್ತರು ಐತಂದು ಹೊಳೆ ನೀರಿನಿಂದ ಚಳಕಹೊಡೆದರು. ಪಟ್ಟದ ಕಲ್ಲಿನವರು ಲಿಂಗಮುದ್ರೆಯ ಕಲ್ಲುಗಳನ್ನು ಸಂಸ್ಥೆಯ ಪಟ್ಟಕ್ಕಾಗಿ ತಯಾರಿಸಿದ್ದರು. ಮಂಗಳೂರಿನವರ ಮಂಗಳ ವಾದ್ಯದೊಡನೆ ಶಿವಯೋಗ ಮಂದಿರ ಶುಭಸಂಸ್ಥೆಯು ಸ್ಥಾಪಿತವಾಯಿತು. ಬಾದಾಮಿಯವರು ಬಾದಾಮು ತೂರಿದರು. ನಿಲುವಿಗೆಯವರು ನೆಲೆಯಾಗಿ ನಿಲ್ಲುವಂತೆ ನೆರವಿತ್ತರು. ಈ ಎಲ್ಲ ಗ್ರಾಮದವರು ನೆರೆದಿದ್ದರಿಂದ ಅದೇ ಒಂದು 'ಮಹಾ ಕೂಟವಾಯಿತು'. ಮಹಾ ವೈಭವದಿಂದ ನಡೆಯಿತು. ಸುತ್ತಣ ಈ ಗ್ರಾಮನಾಮಗಳಲ್ಲಿ ಮಂಗಲೋತ್ಕರ್ಷ ಗಳು ತುಂಬಿ ತುಳುಕುತ್ತಿವೆ. ಎಷ್ಟು ಅರ್ಥ ಪೂರ್ಣವಾದ ಉತ್ಕರ್ಷ ಪೂರ್ಣ ವಾದ ಮಂಗಳ ಪೂರ್ಣವಾದ ಹೆಸರುಗಳಿವು. ಅಂತಹ ಗ್ರಾಮಗಳ ಮಧ್ಯದಲ್ಲಿ ಶಿವಯೋಗ ಮಂದಿರ ಮಹಾಸಂಸ್ಥೆಯು ಸ್ಥಾಪಿತವಾದುದು ಮತ್ತೂ ಹೆಚ್ಚಿನ ಮಾಂಗಲ್ಯೋದಯವಾಯಿತು, ಪುಣ್ಯೋದಯವಾಯಿತು. ಆಯಾಗ್ರಾಮಗಳ ಹೆಸರುಗಳು ಅಂದಿನಿಂದ ಸಾರ್ಥಕವಾದವು. ಅವುಗಳಂತೆ ಶಿವಯೋಗ ಮಂದಿರ ಎಂಬುದು ಅರ್ಥಪೂರ್ಣವಾದ ಅನ್ವರ್ಥನಾಮ. ಭವರೋಗವನ್ನು ಕಳೆದು ಶಿವಯೋಗವನ್ನು ಉಂಟುಮಾಡುವ ಆಶ್ರಮ. ಹಿಂದಿನ ಕ್ಷಣದಲ್ಲಿ

ಕ್ರೂರ ಮೃಗಗಳ ವಾಸದಿಂದ ಕಳ್ಳಕಾಕರ ತ್ರಾಸಿನಿಂದ ಭೀಕರವಾದ ಅರಣ್ಯವು ಮರುಕ್ಷಣದಲ್ಲಿಯೆ ಆಶ್ರಮವಾಗಿ ಸತ್ಪುರುಷರಿಗೆ ಆಶ್ರಯವಾಯಿತು. ನೆರೆದ ಭಕ್ತವೃಂದವು ನೋಡಿ ಸಂತೋಷಪಟ್ಟಿತು. ಸಂತೋಷವುಕ್ಕಿ ಶ್ರೀ ಶಿವಯೋಗ ಮಂದಿರಕ್ಕೆ ಜಯವಾಗಲಿ, ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರಿಗೆ ಜಯವಾಗಲಿ, ಶ್ರೀಇಳಕಲ್ಲ ವಿಜಯ ಮಹಾಂತ ಶ್ರೀಗಳವರಿಗೆ ವಿಜಯವಾಗಲಿ ಎಂದು ಒಕ್ಕೊರಲಿನಿಂದ ಜಯನಿನಾದ ಮಾಡಿದರು. ಆ ನಿನಾದವು ನಾಲ್ದೆಸೆಗು ಇರುವ ಕಾನನಗಳಲ್ಲಿ ಪ್ರತಿಧ್ವನಿಸಿ ಮುಗಿಲು ಮುಟ್ಟಿತು.

ಆಶ್ರಮದ ನಿಸರ್ಗಶೋಭೆ ಆಗಂತುಕರ ಆಯಾಸವನ್ನು ಪರಿಹರಿಸುವಂತಹದು. ಪಕ್ಕದಲ್ಲಿಯೆ ತಿಳಿಯಾಗಿ ಹರಿಯುವ ಮಲಾಪಹಾರಿಣಿ ನದಿಯು. ಅದು ಕಲ್ಲುಬಂಡೆಗಳ ಮೇಲಿಂದ ಧಬ ಧಬ ಎಂದು ಉಲಿಯುತ್ತ ಉರುಳುತ್ತದೆ. ಅದರಿಂದ ಅದಕ್ಕ 'ಧಬಧಬ' ಎಂದರೆ ಜಲಪಾತವೆಂದು ಹೆಸರುಬಂದಿದೆ. ತೊರೆಯ ತೀರದಲ್ಲಿ ಹಚ್ಚಗೆ ಹಸುರು ಮುಡಿದ ದರ್ಭೆಯ ಹುಲ್ಲು. ಹೂತು ಕಾತು ಕಂಗೊಳಿಸುವ ತರುಲತೆಗಳು. ಹೂಗಂಪನು ಹೊತ್ತು ಹಗುರಾಗಿ ತೀಡುವ ತಂಗಾಳಿ. ಇವು ಪಾಂಥರ ಪರಿಶ್ರಮವನ್ನು ಪರಿಹರಿಸುತ್ತವೆ. ಕುಕಿಲ್ವ ಕೋಕಿಲೆಗಳು, ನರ್ತಿಸುವ ನವಿಲುಗಳು, ಹರಿದಾಡುವ ಹರಿಣಗಳು, ಹಾರಾಡುವ ಹಕ್ಕಿಗಳು, ಓಡಾಡುವ ಮೊಲ ಅಳಿಲೆಗಳು ನೋಡುವವರ ನೋಟ ತಣಿಸುತ್ತವೆ. ತೊರೆಯ ತೀರದಲ್ಲಿ ಅನುಷ್ಠಾನಕ್ಕೆಂದು ಕಟ್ಟಿಸಿದ ಹುಲ್ಲುಗುಡಿಸಲುಗಳು, ಕಲ್ಲುಗವಿಗಳು ತಾನಾಗಿ ಹಬ್ಬಿ ಹೆಣೆದು ನಿಂತ ಕುಂಜ ನಿಕುಂಜಗಳು ದಟ್ಟವಾಗಿ ಬೆಳೆದು ಹಣ್ಣುಗೊಂಚಲುಗಳಿಂದ ರಾಜಿಸುವ ನೇರಲ ವೃಕ್ಷಗಳು ಪ್ರತಿಯೊಬ್ಬರ ಚಿತ್ತ ವೃತ್ತಿಗಳನ್ನು ನೆಳೆದು ಶಾಂತಿಗೊಳಿಸುವವು. ಅದರಲ್ಲಿಯು ಚೈತ್ರಮಾಸದ ಹುಣ್ಣಿಮೆಯ ತಿಂಗಳ ಬೆಳದಿಂಗಳಿನಲ್ಲಿ ನಿಂತು ನುತ್ತು ಮುತ್ತಣ ಆ ನೈಸರ್ಗಿಕ ವನಸೌಂದರ್ಯವನ್ನು ನಿರೀಕ್ಷಿಸುವ ಪ್ರತಿಯೊಬ್ಬನ ಹೃದಯದಲ್ಲಿ,

"ಅಳಿಸಂಕುಳವೆ ಮಾಮರವೆ ಬೆಳದಿಂಗಳೆ ಕೋಗಿಲೆಯೆ
ನಿಮ್ಮ ನಿಮ್ಮ ನೆಲ್ಲರನು ಒಂದು ಬೇಡುವೆನು.

ಎನ್ನ ಚನ್ನಮಲ್ಲಿಕಾರ್ಜುನನು
ಇದ್ದರೆ ಕರೆದು ತೋರಿರೆ.''

ಎಂಬ ವಚನವನ್ನು ಅಕ್ಕಮಹಾದೇವಿಯು ಇಲ್ಲಿಯೇ ನಿಂತು ಹಾಡಿರಬಹುದೆ ಹಂಬಲಿಸಿರಬಹುದೆ ಎಂದು ಭಾಸವಾಗುತ್ತದೆ; ವಾಣಿಯಿಂದ ಅದೇ ವಚನವನ್ನು ಹಾಡಿಸುತ್ತದೆ. ನೋಡುವವರ ಕಣ್ಮನಗಳು ಆ ಕಾಡು ಚಲುವಿನಲ್ಲಿ ತಲ್ಲೀನವಾಗಿಬಿಡುತ್ತವೆ.

ಕುಮಾರ ಸ್ವಾಮಿಗಳವರ ಪರಿಶ್ರಮದ ಫಲವಾಗಿ ಅಲ್ಲಿ ಹತ್ತು ಹನ್ನೆರಡು ಭವ್ಯಕಟ್ಟಡಗಳಾಗಿವೆ. ಯೋಗಸಾಧನೆಗಾಗಿ ನೆಲದಲ್ಲಿ ಗವಿಗಳಾಗಿವೆ. ಅಲ್ಲದೆ ಸಂಸ್ಥೆಯ ಸ್ಥಿರಜೀವಿತಕ್ಕೆ ಸ್ವಾಮಿಗಳವರು ನಾಲ್ಕೈದು ಲಕ್ಷ ರೂಪಾಯಿಗಳನ್ನು ಕೂಡಿಸಿದರು. ಸುಮಾರು ನಾಲ್ಕೈದು ಮೈಲಿ ಭೂಮಿ ಸೀಮೆಗಳ ಸ್ವಾಮಿತ್ವವನ್ನು ಸಂಪಾದಿಸಿದರು. ನೂರಿನ್ನೂರು ಗೋವುಗಳನ್ನು ರಕ್ಷಿಸಿದರು, ಅವುಗಳ ಸಲುವಾಗಿ ಐವತ್ತು ಎಕರೆ ಗುಡ್ಡವನ್ನು ಸರಕಾರದಿಂದ ಇನಾಮನ್ನಾಗಿ ಪಡೆದರು. ಬೇರೆಬೇರೆ ಗ್ರಾಮಗಳಲ್ಲಿ ಸದ್ಭಕ್ತರು ನೂರಾರು ಕೂರಿಗೆ ಭೂಮಿಯನ್ನು ಸಂಸ್ಥೆಗೆಂದು ಭಕ್ತಿಯಿಂದ ಸಮರ್ಪಿಸಿದಾರೆ. ಜೀನಿಂಗ ಮತ್ತು ಪ್ರೆಸಿಂಗ ಫ್ಯಾಕ್ಟರಿಯೊಂದನ್ನು ಬಾಗಲಕೋಟೆಯಲ್ಲಿ ಸ್ಥಾಪಿಸಿದಾರೆ. ಶಿವಯೋಗಮಂದಿರದಲ್ಲಿಯೆ ಒಂದು ದೊಡ್ಡ ಪುಸ್ತಕಾಲಯವನ್ನು ಸ್ಥಾಪಿಸಿದಾರೆ. ಅದರಲ್ಲಿ ಕನ್ನಡ ಸಂಸ್ಕೃತ ಮರಾಠಿ ಹಿಂದಿ ಇಂಗ್ಲಿಷ್ ಗ್ರಂಥಗಳನ್ನು ಸುಮಾರು ನಾಲ್ಕೈದು ಸಾವಿರಕ್ಕೆ ಮೇಲ್ಪಟ್ಟು ಶೇಖರಿಸಿದಾರೆ. ಇದಲ್ಲದೆ ಪುರಾತನ ತಾಳೆಗರಿಗಳನ್ನು ಕೈಬರಹದ ಕಡತಗಳನ್ನು ಏಳೆಂಟು ನೂರು ಕಲೆಹಾಕಿದಾರೆ. ಪರಿಶುದ್ಧವಾದ ಭಸ್ಮ, ಪಂಚಸೂತ್ರದ ಪವಿತ್ರ ಶಿಲೆಯ ಲಿಂಗಗಳನ್ನು ಮಾಡುವ ಏರ್ಪಾಡನ್ನು ಮಾಡಿದಾರೆ. ವೈದ್ಯದ ಸಂಶೋಧನವನ್ನು ಮಾಡಿದಾರೆ. ಹಲವು ದಿವ್ಯೌಷಧಿಗಳನ್ನು ತಯಾರಿಸಿದಾರೆ. ಬಿಳುಪನ್ನು ಕಳೆಯುವ 'ಧೃತಿ' ಎಂಬ ಸಿದ್ಧೌಷಧಿಯು ಅಲ್ಲಿ ಈಗಲು ಸಿಕ್ಕುತ್ತದೆ. ಅದರಿಂದ ಎಷ್ಟೋ ಜನರು ಗುಣಹೊಂದಿ ಕಳೆದುಕೊಂಡ ಧೃತಿಯನ್ನು ಪಡೆದುಕೊಂಡು ಹೋಗಿದಾರೆ. ಶಿವರಾತ್ರಿಯಲ್ಲಿ ಸಾಗುವ ಜಾತ್ರೆ

ಯಲ್ಲಿ ಹಲವು ಬಗೆಯ ಧಾರ್ಮಿಕ ಸಾಮಾಜಿಕ ಸಭೆಗಳು ನಡೆಮಂತೆ ವ್ಯವಸ್ಥೆ ಮಾಡಿದಾರೆ.

ಆ ಸಂಸ್ಥೆಯಲ್ಲಿ ಅಂದಿನಿಂದ ಇಂದಿನವರೆವಿಗೆ ಸುಮಾರು ಸಾವಿರಾರು ಜನ ಸಾಧಕರು ಅಧ್ಯಯನ ಮಾಡಿದಾರೆ. ಕನ್ನಡ ಸಂಸ್ಕೃತ ಸಂಗೀತಗಳಲ್ಲಿ ಸಾಕಷ್ಟು ಜ್ಞಾನವನ್ನು ಸಂಪಾದಿಸಿದಾರೆ. ಅಷ್ಟಾಂಗಯೋಗವನ್ನು ಇಷ್ಟ ಲಿಂಗದ ವಿಚಾರವನ್ನು ಅರಿತುಕೊಂಡಿದಾರೆ. ಪ್ರಾಣಾಯಾಮದ ವಿಧಾನವನ್ನು ಪ್ರಾಣಲಿಂಗದ ನೆಲೆ ಕಲೆಗಳನ್ನು ಗುರುತಿಸಿಕೊಂಡಿದಾರೆ. ಷಟ್ಕರ್ಮಗಳ ಸಿದ್ಧಿಯನ್ನು ಷಟ್‌ಸ್ಥಲಗಳ ಶುದ್ಧಿಯನ್ನು ಸಂಪಾದಿಸಿಕೊಂಡಿದಾರೆ. ಒಟ್ಟಾಗಿ ಒಂದೇ ಮಾತಿನಲ್ಲಿ ಹೇಳುವದಾದರೆ ಆ ಸಂಸ್ಥೆಯಿಂದ ಉತ್ತಮ ಭಾಷಣಕಾರರು ಕೀರ್ತನಕಾರರು ಪೌರಾಣಿಕರು ಲೇಖಕರು ಯೋಗಿಗಳು ಅನುಭವಿಗಳು ಸ್ವಾಮಿಗಳು ಸಂಗೀತಜ್ಞರು ಮುಂತಾಗಿ ಅನೇಕರು ಅನೇಕ ಕಲೆಗಳಲ್ಲಿ ತಯಾರಾಗಿದ್ದಾರೆ. ಕೀರ್ತಿಗಳಿಸಿದ್ದಾರೆ. ಕನ್ನಡ ನಾಡಿನ ಬಹುಭಾಗದಲ್ಲಿ ಅನೇಕರು ಮಠಾಧಿಪತ್ಯವನ್ನು ವಹಿಸಿದ್ದಾರೆ, ವಿರಾಜ ಮಾನರಾಗಿದ್ದಾರೆ. ಸಮಾಜ ಸಾಹಿತ್ಯಾದಿಗಳ ಸೇವೆ ಸಲ್ಲಿಸುತ್ತಿದ್ದಾರೆ.

ಈ ಸಂಸ್ಥೆಗೆ ಸಂಬಂಧಪಟ್ಟು ಶಾಖಾಮಂದಿರಗಳನ್ನು ಕಪ್ಪನಹಳ್ಳಿ ಕೋಡಿಕೊಪ್ಪ ಬಾದಾಮಿ ಮುಂತಾದ ಗ್ರಾಮಗಳಲ್ಲಿ ಸ್ಥಾಪಿಸಿದ್ದಾರೆ. ಸಂಸ್ಥೆ ಯಿಂದ ತಯಾರಾಗಿ ಹೋದ ಹಲವರು ಅಲ್ಲಲ್ಲಿ ಪಾಠಶಾಲೆ ಭೋಜನಶಾಲೆ (ಬೋರ್ಡಿಂಗ್ ಹೋಂ)ಗಳನ್ನು ಸ್ಥಾಪಿಸಿದ್ದಾರೆ. ಇದರಿಂದಾಗಿ ವೀರಶೈವ ಸಮಾ ಜಕ್ಕೂ ಸಾಹಿತ್ಯ ಸಂಸ್ಕೃತಿಗೂ ಈ ಸಂಸ್ಥೆಯಿಂದ ಅಪಾರವಾದ ಸೇವೆ ಸಲ್ಲಿದೆ. ಅನೇಕ ಉದ್ದಾಮ ಸಾಹಿತಿಗಳು ಇಲ್ಲಿಗೆ ಬಂದು ಗ್ರಂಥಭಾಂಡಾರದ ಪ್ರಯೋ ಜನ ಪಡೆದಿದಾರೆ. ಗ್ರಂಥಪ್ರಕಾಶಕರು ಈ ಸಂಸ್ಥೆಯ ಗ್ರಂಥಾಲಯದಿಂದ ಪ್ರಾಚೀನಗ್ರಂಥ ಪ್ರತಿಗಳನ್ನು ಪಡೆದು ಉಪಕೃತರಾಗಿದ್ದಾರೆ.

ಈ ಎಲ್ಲ ದೃಷ್ಟಿಗಳಿಂದ ಈ ಸಂಸ್ಥೆಯು ಸಮಾಜಕ್ಕೆ ಆರ್ಯಸಮಾಜದ 'ಕಾಂಗಡಿ ಗುರುಕುಲ' ವಿದ್ದಂತೆಯು ಶಾಂತಿಸಾಧಕರಿಗೆ ರವೀಂದ್ರನಾಥ ಠಾಕೂ ರವರ 'ಶಾಂತಿನಿಕೇತನ' ವಿದ್ದಂತೆಯು, ಅನುಭವ ವಿಚಾರಕ್ಕೆ ೧೨ ನೆಯ ಶತ ಮಾನದ 'ಅನುಭವಮಂಟಪ' ವಿದ್ದಂತೆಯು ಇದೆಯೆಂದು ಹೇಳಿದಲ್ಲಿ ಯಾವ ತಪ್ಪಾಗಲಿಕ್ಕಿಲ್ಲ. ಆ ಅನುಭವ ಮಂಟಪವನ್ನು ಸ್ಥಾಪಿಸಿ ಬಸವಣ್ಣನು

ದ್ವಿತೀಯ ಶಂಭುವೆನಿಸಿದಂತೆ ಈ ಶಿವಯೋಗ ಮಂದಿರವನ್ನು ಸ್ಥಾಪಿಸಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ದ್ವಿತೀಯ ಬಸವಣ್ಣನೆನಿಸಿದರು, ಕಾರಣಿಕ ಪುರುಷರಾದರು.

೧೯೨೫ ನೆಯ ಸಾಲಿಗೆ ಶಿವಯೋಗ ಮಂದಿರವು ಹದಿನಾರನೆಯ ವರುಷದಲ್ಲಿ ಹೆಜ್ಜೆಯನ್ನಿಕ್ಕಿತ್ತು. ಏಸುಂಜವ್ವನದ ಆರಂಭ ವಯಸ್ಸು. ಎಂಥವ ರನ್ನು ಬೆರಗುಗೊಳಿಸುವ ವರ್ಚಸ್ಸು. ಆಗ ಶಿವಯೋಗ ಮಂದಿರದಲ್ಲಿ ೩೦ – ೪೦ ಜನ ಚಿಕ್ಕ ಚಿಕ್ಕ ವಯಸ್ಸಿನ ವಟುಗಳು. ೭೦ – ೮೦ ಜನ ೧೨ ವರುಷಕ್ಕೆ ಮೀರಿದ ೨೫ ವರುಷಕ್ಕೆ ಮಿಂಚದ ಸಾಧಕ ಸಮುದಾಯವು. ಗುರು ವಿರಕ್ತರೆಂಬ ಭೇದಭಾವವಿಲ್ಲದೆ ಸಮರಸವಾಗಿದ್ದರು. ಮೇಲು ಕೀಳೆಂಬ ವೈಷಮ್ಯವಿಲ್ಲದೆ ವಾತ್ಸಲ್ಯದಿಂದಿದ್ದರು. ಚಿಕ್ಕ ವಟುಗಳು ಧರಿಸುವುದು ಬಿಳಿಯ ಕಪನಿಗಳು. ಸಾಧಕರು ಧರಿಸುವುದು ಕಾವಿಯ ಕಪನಿಗಳು. ನಿಲು ವಂಗಿಗೆ ಕಪನಿಯೆಂದು ಅಲ್ಲಿ ಹೇಳುವವಾಡಿಕೆ. ಎಲ್ಲರು ಕೌಪೀನಧಾರಿಗಳು. ವಟುಗಳಿಗೆ ಕಿವಿಟೊಪ್ಪಿಗೆಗಳು. ಸಾಧಕರಿಗೆ ಮಸ್ತಕಪಾವುಡಗಳು. ಚೌಕ ವಸ್ತ್ರಗಳಿಗೆ ಮಸ್ತಕಪಾವುಡಗಳೆಂದು ಹೇಳಿಕೆ. ಇಷ್ಟು ಅಲ್ಲಿನವರ ಉಡುಪು ಗಳು. ಕನ್ನಡ ಸಂಸ್ಕೃತ ಇಂಗ್ಲಿಷ ಭಾಷೆಗಳಲ್ಲಿ ಅಧ್ಯಯನ ಸಾಗಿತ್ತು. ಇಬ್ಬರು ಸಂಸ್ಕೃತ ಶಿಕ್ಷಣಕೊಡುವ ಶಾಸ್ತ್ರಿಗಳು. ಇಬ್ಬರು ಇಂಗ್ಲಿಷ ಓದಿಸುವ ಶಿಕ್ಷಕರು. ಒಬ್ಬರು ಕನ್ನಡಾಧ್ಯಾಪಕರು. ಹೀಗೆ ಐದು ಮಂದಿ ಶಿಕ್ಷಕ ರಿದ್ದರು. ಅಭ್ಯಾಸ ಅತ್ಯಂತ ಭರದಿಂದ ಸಾಗಿತ್ತು. ದಿನಾಚರಣೆ ಕ್ರಮವಿಡಿದು ನಡೆದಿತ್ತು.

ಪ್ರತಿ ದಿನ ಬೆಳಗಿನ ನಾಲ್ಕುವರೆ ಗಂಟೆಗೆ ಜಾಗಟೆಯ ಝಣಝಣಲ್ ಶಬ್ದವಾಗುತ್ತಿತ್ತು. ಸುಪ್ರಭಾತ ಸಮಯ ಸುಪ್ರಸನ್ನ ವಾತಾವರಣ. ಆಗ ಎಲ್ಲರು ಶಿವನಾಮಸ್ಮರಣೆಯಿಂದ ಏಳುವುದು. ಎದ್ದೊಡನೆ ಒಂದೆಡೆಗೆ ಸೇರಿ ಹಾರ್ಮೊನಿಯಂ ಬಾಜಿಸುತ್ತ ಸುಶ್ರಾವ್ಯವಾಗಿ ಪ್ರಾರ್ಥನೆಯ ನೆಸಗುವುದು. ಬೆಳಗಾಗುವ ವರೆವಿಗು ಅವರವರ ಪಾಠ ಪ್ರವಚನಗಳನ್ನು ಪ್ರಶಾಂತ ಚಿತ್ತ ದಿಂದ ಓದುವುದು. ಅನಂತರ ಪ್ರಾತಃಶೌಚ ತೀರಿಸುವುದು. ಏಳು ಗಂಟೆಗೆ ಸರಿಯಾಗಿ ಮರಳಿ ಜಾಗಟೆ ಶಬ್ದವಾಗುತ್ತಿತ್ತು. ಎಲ್ಲರು ಸೇರಿ ಎಂಟು ಗಂಟೆಯವರೆವಿಗು ಆಸನಗಳನ್ನು ಹಾಕುವುದು. ಆಸನ ಹಾಕುವಲ್ಲಿ ಒಂದು

ವಿಶಿಷ್ಟ ಪದ್ಧತಿಯಿತ್ತು; ನಕ್ರಮವಿತ್ತು. ಮಾತಿಗೆ ಅವಕಾಶವಿಲ್ಲ. ಮನ ದೃಷ್ಟಿಗಳ ಹರಿದಾಟವಿಲ್ಲ. ಸಂದರ್ಭೋಚಿತವಾಗಿ ಊರ್ಧ್ವ, ಪೌರ್ಣಿಮ, ನಾಸಿಕಾಗ್ರ, ಅಮಾವಾಸ್ಯ ದೃಷ್ಟಿಗಳನ್ನಿಡಬೇಕು ಧ್ಯಾನ ಅವ್ಯಾಹತವಾಗಿ ನಡೆದಿರಬೇಕು. ಅಂಗವೆಲ್ಲ ಆಸನಗಳಲ್ಲಿ ಅನುಷಂಗವಾಗಿರಬೇಕು. ಅಂತರಂಗ ಆತ್ಮಸಂಗವಾಗಿರಬೇಕು.

ಎಂಟು ಹತ್ತು ನಿಮಿಷಕ್ಕೆ ಪಾಠ ಪ್ರವಚನಗಳು ಪ್ರಾರಂಭವಾಗಿ ಹತ್ತು ಹತ್ತುವರೆಗೆ ಪೂರೈಸುವುದು. ಮುಂದೆ ಹನ್ನೆರಡು ಗಂಟೆಯ ವರೆವಿಗು ತೊರೆಯ ತಿಳಿ ನೀರಿನಲ್ಲಿ ಎಲ್ಲರು ಮೀಯುವುದು, ಮಡಿಯುಟ್ಟು ಮನವಿಟ್ಟು ಶಿವಪೂಜೆ – ಪಾದಪೂಜೆಗಳ ಮಾಡುವುದು, ಪಾದೋದಕ ಪ್ರಸಾದಗಳ ಕೊಂಬುವುದು. ಮಧ್ಯಾನ್ಹ ಒಂದು ಗಂಟೆ ವಿಶ್ರಾಂತಿ. ಒಂದು ಗಂಟೆ ಶಿವಾನುಭವ. ಎರಡುಗಂಟೆಯಿಂದ ನಾಲ್ಕುವರೆ ವರೆವಿಗು ಪಾಠಗಳು. ಐದರ ವರೆವಿಗೆ ಸಾಯಂಶೌಚ. ಆರರ ವರೆವಿಗೆ ಪುರಾಣಶ್ರವಣ, ಭಜನೆ. ರಾತ್ರಿ ಎಂಟುವರೆ ವರೆವಿಗು ಮರಳಿ ಸ್ನಾನ ಶಿವಪೂಜಾದಿಗಳು. ಆಮೇಲೆ ಎಲ್ಲರೂ ಓದಿಕೊಂಡು ಹತ್ತು ಗಂಟೆಗೆ ದೇವ ಪ್ರಾರ್ಥನೆಮಾಡಿ ಮಲಗುವುದು. ಇದು ಅಲ್ಲಿನ ಕಾರ್ಯಕ್ರಮ.

ಪ್ರಾರ್ಥನೆ ಪುರಾಣ ಶಿವಾನುಭವ ಮುಂತಾದ ಸನ್ನಿವೇಶಗಳಲ್ಲಿ ಸರ್ವರು ಒಂದೆಡೆಯಲ್ಲಿ ಸೇರಿ ಸಾಲುಸಾಲಾಗಿ ಕುಳಿತುಕೊಳ್ಳುವ ಆ ದೃಶ್ಯವನ್ನು ನೋಡಿದರೆ ಸಾಕ್ಷಾತ್ ಕೈಲಾಸವನ್ನು ಕಂಡಂತಾಗುತ್ತಿತ್ತು. ಒಂದೇ ಬಣ್ಣದ ಒಂದೇ ಬಗೆಯ ಉಡುಗೆಯ ಆ ನೋಟ ಚಿತ್ತಾಕರ್ಷಕವಾಗಿರುತ್ತಿತ್ತು. ಎಲ್ಲರದು ಒಂದೇ ಸತ್ಕರ್ಮ; ಒಂದೇ ಸದ್ಧರ್ಮ. ಯಾವಾಗಲು ಎಲ್ಲರಿಗು ಒಂದೇ ಧ್ಯೇಯ; ಒಂದೇ ಶ್ರೇಯ. ಎಲ್ಲರು ಮನೆ ಮಾರು ಊರು ಕೇರಿ ಬಂಧು ಬಳಗಗಳನ್ನು ಬಿಟ್ಟು ಸಂನ್ಯಾಸಕ್ಕೆ ಮೀಸಲಾದವರು. ಪೂರ್ವಾಶ್ರಮದ ಹಂಗನ್ನು ಹಳಚಿದವರು. ಜನ್ಮದಾತರಾದ ಜನನೀಜನಕರನ್ನು ನೋಡುವುದು ಒಂದೆಡೆಗಿರಲಿ ಹೆಸರುಗಳನ್ನು ಯಾರೂ ಹೇಳುವಂತಿಲ್ಲ. ಅರಿಯದವರು ಯಾರಾದರು ಕೇಳಿದರೆ ತಾಯಿ ಚಿಚ್ಛಕ್ತಿಯೆಂತಲು ತಂದೆ ಕುಮಾರ ಸ್ವಾಮಿಗಳೆಂತಲು ವಟುಗಳು ಹೇಳುವ ರೂಢಿಯಾಗಿತ್ತು. ಹಣ ತರಿಸುವಂತಿಲ್ಲ;

ಬಳಸುವಂತಿಲ್ಲ. ಪೂರ್ವಾಶ್ರಮ ನಿರಸನದೊಡನೆ ಪೂರ್ವಾಶ್ರಯ ಸಿರಸನವು ಜಾರಿಯಲ್ಲಿ ಬರಬೇಕೆಂಬ ಬಯಕೆ. ಅದರಂತೆ ಅಲ್ಲಿಯ ನಡೆವಳಿಕೆ.

ಉಪ್ಪು ಹುಳಿ ಕಾರ – ಎಣ್ಣೆಗಳಿಲ್ಲದ ಸಪ್ಪೆ ಆಹಾರ. ಅವರೆ ಹುರುಳಿ ಕುಂಬಳಕಾಯಿ ಮುಳ್ಳುಗಾಯಿ ಜೋಳ ರಾಗಿ ಮುಂತಾದ ತಾಮಸಾಹಾರಗಳಿಗೆ ಅಲ್ಲಿ ಎಡೆಯಿಲ್ಲ. ಅಕ್ಕಿ ತೊಗರಿ ಹೆಸರು ಗೋಧಿ ಹಾಲು ತುಪ್ಪ ಮುಂತಾದ ಸಾತ್ವಿಕಾಹಾರದ ಕಟ್ಟಿಗೆ ಎಲ್ಲರು ಒಳಪಟ್ಟಿರಬೇಕು. ಕೆಲವರ ಪೂರ್ವಾಶ್ರಮದ ಹೆಸರುಗಳು ಚನ್ನಾಗಿ ಇಲ್ಲದಿದ್ದರೆ ಅವನ್ನು ಬಿಟ್ಟು ಬೇರೆ ಹೆಸರುಗಳನ್ನು ಇಡುತ್ತಾರೆ. ಹೆಸರಿನ ಮುಂದೆ ಆರ್ಯ, ಆಚಾರ್ಯ, ದೇವ, ದೇಶಿಕ ಎಂಬ ಶ್ರೇಷ್ಠ ಸೂಚಕ ಶಬ್ದಗಳನ್ನು ಜೋಡಿಸುತ್ತಾರೆ. ಆಸನ ಅಭ್ಯಾಸ ಅನುಷ್ಠಾನ ಅನುಭವ ಇವು ಅಲ್ಲಿ ಕಲಿಯತಕ್ಕ ಮುಖ್ಯ ವಿಷಯಗಳು. ಇವನ್ನು ಎಲ್ಲರು ಅಭ್ಯಾಸಿಸಲು ಮನಃಪೂರ್ತಿಯಾಗಿ ಪ್ರಯತ್ನಿಸಬೇಕು. ಫಲಾಫಲ ಅವರವರ ಕರ್ತವ್ಯ ಕೋಟೆಗೆ ಸೇರಿದ್ದು. ಈರೀತಿ ಅಲ್ಲಿನ ಅಭ್ಯಾಸಗಳನ್ನು ಆಗುಮಾಡಿಕೊಂಡವರು ಮಠಾಧಿಪತ್ಯವನ್ನು ವಹಿಸಿ ಧರ್ಮ ವಿದ್ಯೆ ಆಚಾರ ವಿಚಾರ ಪ್ರಚಾರ ಮಾಡುವುದು ಅವರ ಕರ್ತವ್ಯ. ಸಂಸ್ಥೆಯ ನೇಮ ನೀತಿಗಳಂತೆ ಇರುವುದೆ ಅವರಿಗೆ ವಾಸ್ತವ್ಯ.

ಇನ್ನೊಂದೆಡೆಯಲ್ಲಿ ಶ್ರೀ ವಿಜಯ ಮಹಂತೇಶ್ವರ ಪುಸ್ತಕ ಭಂಡಾರ. ಅಲ್ಲಿ ಪುರಾತನ ಪುಸ್ತಕಗಳ ಸಂಗ್ರಹ ಸಂಶೋಧನ ಅವಿಶ್ರಾಂತವಾಗಿ ಸಾಗುತ್ತಿತ್ತು. ಅದಕ್ಕಾಗಿ ತಜ್ಞರಾದ ಒಬ್ಬಿಬ್ಬರು ಪಂಡಿತರಿದ್ದರು. ಸಂಶೋಧನೆಯಲ್ಲಿ ಸ್ವಾಮಿಗಳು ಸ್ವತಃ ಭಾಗವಹಿಸುತ್ತಿದ್ದರು. ಲೋಪದೋಷಗಳನ್ನು ಸರಿಪಡಿಸುತ್ತಿದ್ದರು. ಸ್ವಾಮಿಗಳವರಿಂದ ಪರಿಷ್ಕೃತವಾದ ಗ್ರಂಥಗಳೆಲ್ಲ ಪ್ರಕಟವಾಗದಿರುವುದೊಂದು ದೊಡ್ಡ ಕೊರತೆ! ಈ ಕೊರತೆಯನ್ನು ತುಂಬಿ ತರುವ ಕೆಲಸ ಆಗಬೇಕಾಗಿದೆ.

ವೈದ್ಯ ಸಂಶೋಧವು ಇನ್ನೊಂದೆಡೆಯಲ್ಲಿ ನಡೆದಿತ್ತು. ಕೆಲವು ಮಂದಿ ಸಾಧಕರಿಗೆ ಆಯುರ್ವೇದದ ಜ್ಞಾನವನ್ನು ಸ್ವಾಮಿಗಳವರು ಮಾಡಿಕೊಟ್ಟರು. ಸ್ವಾಮಿಗಳವರು ಸಾಯಂಕಾಲ ಗಾಳಿಗೆ ದಯಮಾಡಿಸಿದರೆ ಸುಮ್ಮನೆ ಅದೆಂದಿಗು ಹೋಗುತ್ತಿರಲಿಲ್ಲ. ಬೆಟ್ಟದ ದಾರಿಗಳಲ್ಲಿ ದಯಮಾಡಿಸುತ್ತಿರುವಾಗ ಅಕ್ಕಪಕ್ಕದಲ್ಲಿರುವ ಗಿಡಮರಗಳನ್ನು ಗೆಡ್ಡೆಗೆಣಸುಗಳನ್ನು ಬಳ್ಳಿ ಬೇರು

ಗಳನ್ನು ಶೋಧಿಸುತ್ತ ಹೋಗುತ್ತಿದ್ದರು. ಯಾವುದಾದರೊಂದು ವಿಶೇಷ ವನಸ್ಪತಿಯನ್ನು ತಾರದೆ ಮಠಕ್ಕೆ ಮರುಳುತ್ತಿರಲಿಲ್ಲ. ಹೀಗಾಗಿ ವನೌಷಧಿ ಗಳ ಸಂಶೋಧನವು ದಿನದಿನಕ್ಕೆ ಹೆಚ್ಚುತ್ತಿತ್ತು. ವೈದ್ಯ ವಿದ್ವಾಂಸರಿಗು ಸಹ ಅಸಾಧ್ಯವಾದ ಕೆಲವು ರೋಗಗಳನ್ನು ಸ್ವಾಮಿಗಳವರು ತಮ್ಮ ಔಷಧಿಗಳಿಂದ ವಾಸಿಮಾಡುತ್ತಿದ್ದರು. ಪಾಶ್ಚಾತ್ಯ ಡಾಕ್ಟರುಗಳಿಂದಲು ಸಾಧ್ಯವಾಗದ ಬಿಳಪು (ತೊಸ್ನು) ಕಳೆವ 'ಧೃತಿ'ಯೊಂದನ್ನು ಕಂಡು ಹಿಡಿದು ಅನೇಕ ರೋಗಿಗಳಿಗೆ ಪ್ರಯೋಗಿಸಿ ಫಲಿತಾಂಶ ಪಡೆದರು. ಅನೇಕ ವಿದ್ಯಾರ್ಥಿಗಳಿಗೆ ಸ್ವತಃ ವೇತನವನ್ನು ಕೊಟ್ಟು ಸಾತಾರೆಯ ಆರ್ಯಾಂಗ್ಲ ವಿದ್ಯಾಲಯದಲ್ಲಿ ವೈದ್ಯ ವಿದ್ಯಾಭ್ಯಾಸವನ್ನು ಮಾಡಿಸಿದರು. ಹೀಗೆ ವೈದ್ಯಭಾಗದ ಸೇವೆಯು ಸಂಸ್ಥೆ ಯಿಂದ ಸಾಕಷ್ಟು ನಲ್ಲಿದೆ.

ಮತ್ತೊಂದೆಡೆಯಲ್ಲಿ ಭಸ್ಮ ಲಿಂಗಗಳ ಕಾರ್ಮಿಕಾಗಾರ. ಇದಕ್ಕಾಗಿಯೆ ಒಂದು ಮಾಹೇಶ್ವರ ಕುಟುಂಬವರ್ಗವನ್ನು ಅಲ್ಲಿಯೆ ತಂದಿರಿಸಿದ್ದರು. ಈ ವಿಷಯ ದಲ್ಲಿ ಸ್ವಾಮಿಗಳವರಿಗೆ ತುಂಬಾ ಕುತೂಹಲವಿತ್ತು. ಶುದ್ಧ ಭಸ್ಮಗಳ ಅಭಾವ ಹೆಚ್ಚಿಹೋಗಿತ್ತು. ಸಮಾಜದಲ್ಲಿ ಎಲ್ಲಿಯೂ ಮಾಡುತ್ತಿದ್ದಿಲ್ಲ. ಹಸುಗಳ ಸಗಣಿಯನ್ನು ಮಾತ್ರ ಉಪಯೋಗಿಸುತ್ತಿರಲಿಲ್ಲ. ಮಂತ್ರಶುದ್ಧಿ ಇದ್ದದ್ದು ಇಲ್ಲ. ಹೀಗಾಗಿ ಸ್ವಾಮಿಗಳು ಈ ವಿಷಯದಲ್ಲಿ ಹೆಚ್ಚು ಗಮನವಿತ್ತರು. ಸ್ವತಃ ಹೋಗಿ ಕ್ರಮವನ್ನು ಹೇಳಿ ಮಾಡಿಸುತ್ತಿದ್ದರು. ಅನೇಕ ದಿನಗಳ ಪರಿಶ್ರ ಮದ ಫಲವಾಗಿ ಶುದ್ಧವು ಶುಭ್ರವು ಆದ ಭಸ್ಮದಗಟ್ಟಿಗಳು ತಯಾರಾದವು. ಸ್ವಾಮಿಗಳವರು ಮೀರಿದ ಸಂತೋಷಪಟ್ಟರು.

ಎರಡನೆಯದಾಗಿ ಲಿಂಗಗಳ ವಿಷಯ. ಎಲ್ಲಿಯೂ ಪಂಚ ಸೂತ್ರಕ್ಕೆ ಸರಿಯಾಗಿ ಮಾಡುತ್ತಿರಲಿಲ್ಲ. ಮಟ್ಟೆಗಲ್ಲಿನ ಲಿಂಗಗಳ ಹೊರತು ಶುದ್ಧ ಶಿಲೆಯ ಲಿಂಗಗಳೇ ಇರಲಿಲ್ಲ. ಇತ್ತ ಪೀಠದವರು ಯಾರು ಗಮನಿಸಿರಲಿಲ್ಲ. ಇದು ಸಮಾಜಕ್ಕೆ ತೀರ ಅಗತ್ಯದ ಕೆಲಸವಾಗಿತ್ತು. ಇದನ್ನು ಕಂಡು ಸ್ವಾಮಿ ಗಳವರು ಸೂಕ್ತವಾದ ಶುದ್ಧವಾದ ಕಲ್ಲು ತರಿಸಿ ಪಂಚಸೂತ್ರಕ್ಕೆ ಸರಿಯಾಗಿ ಶಾಸ್ತ್ರೋಕ್ತವಾಗಿ ನಿರ್ಮಾಣಮಾಡಿಸಿದರು. ಲಿಂಗ, ಕಲೆಯನ್ನು ನೆಲೆನಿಲ್ಲಿಸಿದರು. ಈಗಲು ಅನೇಕ ಕಡೆ ತಿಳಿಯದೆ ಸಿಕ್ಕ ಪೀಠಗಳನ್ನು ಧರಿಸುತ್ತಿದ್ದಾರೆ. ಇದು ಹೋದಷ್ಟು ಕ್ಷೇಮ. ಈ ರೀತಿಯಾಗಿ ಸ್ವಾಮಿಗಳವರು ಸಮಾಜಕ್ಕೆ ಅತ್ಯ

ಗತ್ಯವಾದ ಶುದ್ಧ ಭಸ್ಮಲಿಂಗಗಳ ನಿರ್ಮಾಣ ಮಾಡಿ ಗುರು ಲಿಂಗ ಜಂಗಮ ಭಸ್ಮಗಳ ಸುಧಾರಣೆಯ ಮೂಲಕರ್ತರಾದರು; ಮಹಾಪುಣ್ಯಶಾಲಿಗಳಾದರು.

ಬೇರೊಂದು ಕಡೆ ಕೃಷಿಕರ್ಮ. ಇದಕಾಗಿ ಎಂಟು ಹತ್ತು ಎತ್ತುಗಳನ್ನು ಅಷ್ಟೆ ಮನುಷ್ಯರನ್ನು ಇರಿಸಿದ್ದರು. ಹಳೆ ಮಾಕೂಟದ ಬಳಿ ಒಂದು ಬಾಳೆಯ ಬನವನ್ನು ಹಾಕಿಸಿದ್ದರು. ಲಿಂಬೆ ಮಾವು ಈರಳೆ ಮೊದಲಾದ ಹಣ್ಣಿನ ಗಿಡಗಳನ್ನು ಬೆಳೆಯಿಸಿದ್ದರು. ಇವಕ್ಕೆ ತಕ್ಕ ವ್ಯವಸ್ಥೆಯನ್ನಿರಿಸಿದ್ದರು. ದಿನ್ನೆಯ ಭೂಮಿಯಲ್ಲಿ ಸಾಕಷ್ಟು ಬೆಳೆಯನ್ನು ತೆಗೆಯಿಸುತ್ತಿದ್ದರು. ಭೂಮಿಗೆ ನೀರುಣಿಸಿ ಹೆಚ್ಚು ಬೆಳೆಯಲು ನೀರಾವರಿ ಯೋಜನೆಗಳನ್ನು ಅನೇಕ ಸಲ ಮಾಡಿದರು. ಹೀಗೆ ಶಿವಯೋಗ ಮಂದಿರದಲ್ಲಿ ಅನೇಕ ಕಾರ್ಯಕಲಾಪಗಳು ನಡೆದವು.

ಇವನ್ನೆಲ್ಲ ನೋಡಿಕೊಳ್ಳಲು ಒಬ್ಬ ಮೇಲಧಿಕಾರಿಗಳು, ೩-೪ ಮಂದಿ ಬರವಣಿಗೆದಾರರು, ಅದಕ್ಕೆ ತಕ್ಕ ಲೆಕ್ಕ ಪತ್ರಗಳು. ಒಂದು ಅಂಚೆ ಮನೆಯ (ಪೋಷ್ಟಾಫೀಸ)ನ್ನು ಸಂಸ್ಥೆಗಾಗಿಯೆ ಗವರ್ನಮೆಂಟಿನಿಂದ ಪಡೆದಿದ್ದಾರೆ.

ಶ್ರೀ ರಾಮಕೃಷ್ಣ ಪರಮಹಂಸರ ತತ್ವಗಳನ್ನು ಪ್ರಚಾರಮಾಡಲು ವಿವೇಕಾನಂದರು 'ರಾಮಕೃಷ್ಣಾಶ್ರಮವನ್ನು' ಸ್ಥಾಪಿಸಿದಂತೆ ಕುಮಾರ ಸ್ವಾಮಿಗಳವರು ಮೇಲೆಕಂಡ ರೂಪುರೇಖೆಯ ಶಿವಯೋಗ ಮಂದಿರವನ್ನು ಸ್ಥಾಪಿಸಿ ಅಲ್ಲಿ ಅನೇಕ ದಿನಗಳಿದ್ದು ಯೋಗ ವಿದ್ಯೆ, ಆಚಾರ-ವಿಚಾರ, ಪುರಾಣ-ಪ್ರವಚನಗಳನ್ನು ಪ್ರಾರಂಭಿಸಿ ಅಭ್ಯಾಸಿಗಳಿಗೆ ತಕ್ಕ ಏರ್ಪಾಟುಗಳನ್ನು ಮಾಡಿ ಮುಂದಿನ ಆ ಸಂಸ್ಥೆಯ ಅಭಿವೃದ್ಧಿಗಾಗಿಯು ಸಾಮಾಜಿಕರಿಗೆ ಧರ್ಮ ನೀತಿ ಮಿತವ್ಯಯ ಮೈತ್ರೀಭಾವ ಮುಂತಾದವುಗಳನ್ನು ಬೋಧಿಸುವದಕ್ಕಾಗಿಯು ನಾಡಿನಲ್ಲಿ ಸಂಚರಿಸುತ್ತಿದ್ದರು. ಅವರ ಜೀವನದ ಬಹುಭಾಗ ಪ್ರಯಾಣಮಯವಾಗಿತ್ತು. ಒಂದೆಡೆಗಿದ್ದು ವಿಶ್ರಾಂತಿ ಪಡೆದ ದಿನಗಳು ತೀರ ಕಡಿಮೆ. ಇಲ್ಲವೆಂದರು ಅಲ್ಲಿಗಳೆಯುವಂತಿಲ್ಲ. ಅವರಿರಬೇಕೆಂದರು ಅವರ ಮನಸ್ಸಿರದು. ಅವರು ಹಮ್ಮಿಕೊಂಡ ಕಾರ್ಯಬಾಹುಲ್ಯವು ಅವರನ್ನು ಇರಲೀಸದು.



# ನಾಡಸಂಚಾರ, ಧರ್ಮಪ್ರಚಾರ

ಕುಮಾರ ಯೋಗಿಗಳು ಕನ್ನಡನಾಡಿನ ಬಹು ಭಾಗವನ್ನು ಸುತ್ತಿ ಸುಳಿದರು. ಹೋದ ಹೋದಲ್ಲಿ ಸಭೆಗಳನ್ನು ನೇರಿಸುತ್ತಿದ್ದರು. ಪ್ರತಿದಿನ ಸಾಯಂಕಾಲ ತಪ್ಪದೆ ಹಿತಬೋಧೆಯನ್ನು ಮಾಡುತ್ತಿದ್ದರು. ತಾಪತ್ರಯ ದಿಂದ ತೊಳಲಿ ಬಂದ ಅನೇಕರು ಅವರ ಬೋಧೆಯ ಪರಿಣಾಮದಿಂದ ತಿಳಿ ಮನಸ್ಸಿನವರಾಗಿ ಹಿಂದಿರುಗುತ್ತಿದ್ದರು. ಅತಿಯಾಶೆಯ ಪಿಶಾಚಿ ಹೊಡೆದವರು ಅದರಿಂದ ಮುಕ್ತರಾಗುತ್ತಿದ್ದರು. ವಿಷಯಾಸಕ್ತರು ವಿಫಲರಹಿತರಾಗಿ ಹೋಗು ತ್ತಿದ್ದರು. ಕೃಪಣರು ಉದಾರಿಗಳಾಗಿ ಮಾರ್ಪಡುತ್ತಿದ್ದರು. ಅನೇಕ ನೀತಿ ಮಾರ್ಗಗಳನ್ನು ಬೋಧಿಸಿ ನಿದ್ರಿತ ಜನಾಂಗವನ್ನು ನಿಜಜೀವನದತ್ತ ಸಾಗು ವಂತೆ ಮಾಡಿದರು. ಮದಾಂಧರ ಮದವನ್ನು ತಗ್ಗಿಸಿದರು. ಮತ್ಸರವುಳ್ಳವ ರಲ್ಲಿ ಮೈತ್ರೀಭಾವವನ್ನು ಮೂಡಿಸಿದರು. ರೋಷಾವೇಶವುಳ್ಳವರನ್ನು ಶಾಂತ ರನ್ನಾಗಿ ಸಮಾಧಾನಿಗಳನ್ನಾಗಿ ಕುದುರಿಸಿದರು.

ಇವರ ಫಲವಾಗಿ ಜನಾಂಗದ ಮನಸ್ಸು ಕುಮಾರ ಯೋಗಿಗಳ ಕಡೆಗೆ ಹೊರಳಿತು. ಧನಿಕರು ದರಿದ್ರರು ಶಿಷ್ಯರಾದರು. ಮಾಸ್ತರರು ಶಾಸ್ತ್ರಿಗಳು ಭಕ್ತಿಯಿಟ್ಟರು. ರಾಜಾಧಿಕಾರಿಗಳು ರೈತರು ಅತ್ಯಂತ ಅನುರಾಗಿಗಳಾದರು ಆಜ್ಞೆಯನ್ನು ಮೀರದವರಾದರು.

ಕುಮಾರ ಯೋಗಿಗಳ ಬೋಧೆ, ಕಾರ್ಯತತ್ಪರತೆ, ಸಾಮಾಜಿಕ ಕಳಕಳಿ, ಸಾಹಿತ್ಯ ಸಂಸ್ಕೃತಿ ಪ್ರೇಮ ಎಲ್ಲರನ್ನು ಆಕರ್ಷಿಸಿತು. ಅನೇಕ ಬ್ರಾಹ್ಮಣರು ಸಹ ಸ್ವಾಮಿಗಳವರ ಕಾರ್ಯಕ್ಷೇತ್ರದಲ್ಲಿ ಭಾಗವಹಿಸಿ ಸೇವೆಸಲ್ಲಿಸಿದರು. ಹೀಗೆ ಸ್ವಾಮಿಗಳವರ ಶಿಷ್ಯವೃಂದವು ಅಪಾರವಾಗಿ ಬೆಳೆಯಿತು.

ಇದರಿಂದಾಗಿ ಅವರ ನಾಡಸಂಚಾರ – ಧರ್ಮಪ್ರಚಾರ ಯಾವ ತಡೆ ಯಿಲ್ಲದೆ ಭರದಿಂದ ಸಾಗಿತು. ಜನರಲ್ಲಿ ಜಾಗ್ರತಿ ವಿದ್ಯುದ್ವೇಗದಿಂದ ಹರಿ ಯಿತು; ಹರಡಿತು. ಮೂಢತನ ಮೂಲೆಗೆ ಬಿದ್ದಿತು. ತಮ್ಮ ಜೀವನದ

ಗುರಿಯನ್ನು ಸಮಾಜದ ಹೊಣೆಯನ್ನು ಬಹು ಜನರು ತಿಳಿದುಕೊಂಡರು; ತೀರಿಸಿದರು. ಸಾಹಿತ್ಯಕ್ಕೆ ಸಂಸ್ಕೃತಿಗೆ ವಿದ್ಯೆಗೆ ವಿಶೇಷ ಸಹಾಯ ನೀಡಿದರು. ಸ್ವಾಮಿಗಳವರ ನಾಡಸಚಾರದಿಂದ ಧಾರ್ಮಿಕ ಪ್ರಚಾರವು ಸಾಕಷ್ಟು ಜರಗಿತು. ಮುಚ್ಚಿಹೋಗಿದ್ದ ಧರ್ಮದ ಕಣ್ಣು ಮರಳಿ ತೆರೆಯಿತು.



# ಗುರು - ವಿರಕ್ತ ಸಹಕಾರ

"ಅರಿಯುಪರಂ ಸತ್ಪಥದೊಳ್
ನಿರಿಸಲ್ ತುತಿಸಳಿಗಳೊಳವು ಬುಧರ್ಗವು ಜೇಡಂ ।
ಕಿರುವೆಂಚಿಗೆ ಕಟ್ಟುಂಟೊ -
ತೆರದಿಂ ವಾರಿಧಿಗೆ ಕಟ್ಟನಾರೇಗುವರೋ"

— -ನೀತಿಮಂಜರಿ.

ಸಮಾಜದ ಭಕ್ತರಲ್ಲಿ ಒಳಪಂಗಡಗಳು, ವಿರಕ್ತರಲ್ಲಿ ಸಮಯ ಭೇದಗಳು ಸಾಲದೆ ಸಮಾಜ ಪುರುಷನಿಗೆ ಎರಡು ಕಣ್ಣುಗಳಂತಿರುವ ಗುರು ವಿರಕ್ತರು ನಾವು ಹೆಚ್ಚು ತಾವು ಹೆಚ್ಚೆಂದು ವಾದಿಸಿ ವಿದ್ವೇಷಕ್ಕೊಳಗಾದುದು ಸರ್ವರಿಗು ತಿಳಿದ ಸಂಗತಿ. ಈ ವೈರ ವಿಷವು ಸಮಾಜವನ್ನೆ ನಿರ್ವೀರವಾಗಿ ಮಾಡಿತ್ತು. ಈ ದಳ್ಳುರಿಯಿಂದ ದಗ್ಧವಾದ ಸಮಾಜ ಬೇಳ್ಗೆ ಆಗಬೇಕಾದಷ್ಟಾಗದೆ ಮೊಟಕಾಗುತ್ತ ನೆಡೆದಿದತ್ತು. ಜನಾಂಗದಲ್ಲಿ ಶಾಂತಿಯಿರಲಿಲ್ಲ. ಸ್ನೇಹವಿರಲಿಲ್ಲ. ಪರಸ್ಪರ ದೂಷಣೆ- ದೋಷಾರೋಪಣೆಯ ಸುರಿಮಳೆ ಸುರಿಯುತ್ತಿತ್ತು. ಮನೆ ಮನೆಯಲ್ಲಿ ಮತ್ಸರ ಪಕ್ಷ ಪಂಗಡ ಭಾಗವಿಭಾಗಗಳೇರ್ಪಟ್ಟವು. ತಂದೆ ಮಕ್ಕಳಿಗೆ ವ್ಯಾಜ್ಯ. ಅಣ್ಣತಮ್ಮಂದಿರಿಗೆ ವ್ಯಾಜ್ಯ. ಬಂಧು ಬಳಗದವರಿಗೆ ವ್ಯಾಜ್ಯ. ಕೂಡಕೊಳ್ಳುವುದಕ್ಕೆ ವ್ಯಾಜ್ಯ. ಹೀಗಾಗಿ ಪರಸಮಾಜಗಳಲ್ಲಿ ಪರಿಹಾಸಕ್ಕಿಟ್ಟಿತ್ತು. ಪರಸ್ಪರ ಸ್ನೆಹ ವಾತ್ಸಲ್ಯಗಳಿಲ್ಲದಾಗಿತ್ತು. ಇದನ್ನು ಕಂಡು ಕುಮಾರಯೋಗಿಗಳು ಕಡು ನೊಂವರು. ಹೇಗಾದರು ಮಾಡಿ ಎಂತಾದರು ಮಾಡಿ ಗುರು- ವಿರಕ್ತರಲ್ಲಿ ಪರಸ್ಪರ ಸಹಕಾರ ಮೂಡಿಬರುವಂತೆ ಮಾಡಬೇಕೆಂದು ಮನಸ್ಸುಮಾಡಿದ್ದಲ್ಲದೆ ಮಿತಿಮೀರಿ ಪ್ರಯತ್ನಪಟ್ಟರು. ಆದರೆ ಅದು ಫಲಿಸಲಿಲ್ಲ. ಪ್ರವಾಹದ ಸೆಳೆತ ಸಣ್ಣದಾಗಿರಲಿಲ್ಲ. ಆದರು ಸ್ವಾಮಿಗಳವರು ಹಿಂಜರಿಯಲಿಲ್ಲ. ಕೆಚ್ಚೆದೆಯಿಂದ ಮುಂದುವರಿದರು. ಬೇಕಾದಷ್ಟು ಶ್ರಮಿಸಿದರು. ವೆಚ್ಚಮಾಡಿದರು. ಕೊನೆಗು ಅದು ಸಹಕಾರಕ್ಕೆ ಬಾರದ

ಹೋಯಿತು. ಅಲ್ಲದೆ ಸ್ವಾಮಿಗಳವರ ಮೇಲೆ ಎರಡು ಕಡೆಗಳಿಂದಲು ಆಕ್ಷೇಪಣೆಯ ಬಿರುಸು ಬಾಣಗಳು ಬಂದು ಬೀಳತೊಡಗಿದವು. ಸತ್ಯ ಮಾರ್ಗಾನುಯಾಯಿಗಳಾದ ಸ್ವಾಮಿಗಳವರು ಆ ಬಾಣಗಳಿಗೆ ಭಯ ಬೀಳಲಿಲ್ಲ. ಅವರು ಬರೀ ಕೀರ್ತಿಗಾಗಿ ಮಾಡತಕ್ಕವರಲ್ಲ. ಮನಮೆಚ್ಚಿ ಸಮಾಜ ಶಾಂತಿಗಾಗಿ ಮಾಡ ಹೊರಟಿದ್ದರು. ಅದರಿಂದಾಗಿ ತಮ್ಮ ಸಮತಾ ಭಾವವನ್ನು ತಾವು ಅದೆಂದಿಗೂ ಬಿಡಲಿಲ್ಲ.

ಸಮಾಜ ವೃಕ್ಷಕ್ಕೆ ಶ್ರೀ ಗುರುಗಳು ತಾಯ್ಬೇರು. ಅವರನ್ನು ಹೀಗಳೆ ಪ್ರದು ತರವಲ್ಲ. ಜಗದ್ಗುರು ಪಂಚಾಚಾರ್ಯರಂತಹ ಪೂಜ್ಯಪುರುಷರಿಂದ ಸಮಾಜ ಪರಿಪಾಲಿತವಾಗದೆ– ಆಗಬೇಕು ಎಂದು ಭಾವಿಸಿದ್ದರು. ಹಾಗೆಯೆ ಬೋಧಿಸುತ್ತಿದ್ದರು. ಸ್ವತಃ ತಾವೇ ಜಗದ್ಗುರು ಪಂಚಾಚಾರ್ಯರ ಮೇಲೆ ಪ್ರಾರ್ಥನೆಯ ಪದ್ಯಗಳನ್ನು ರಚಿಸಿದರು. ಶಿವಯೋಗ ಮಂದಿರದ ವಟು ಗಳಿಗು ಸಾಧಕರಿಗು ಕಲಿಸಿದರು. ನಿತ್ಯ ಭಜನೆಯಲ್ಲಿ ಹೇಳಿಸುತ್ತಿದ್ದರು.

ಗುರು ಲಿಂಗ ಜಂಗಮರಲ್ಲಿ ಯಾವ ಹೆಚ್ಚು ಕಡಿಮೆಯಿಲ್ಲ. ಮೂರು ಒಂದೇ. ವ್ಯಕ್ತಿತ್ವ ಬೇರೆಯಾದರು ತತ್ವ ಒಂದೆ. ಜಂಗಮನಾದರು ಲಿಂಗ ಪೂಜಿಸುತ್ತಾನೆ. ಗುರುಧ್ಯಾನ ಮಾಡುತ್ತಾನೆ. ಹೊರಗೆ ಮಾತ್ರ ಗುರುವನ್ನು ಏಕೆ ಹೀಗಳೆಯಬೇಕು ? ಲಿಂಗ ಅಚರಲಿಂಗ. ಗುರುಜಂಗಮರಿಬ್ಬರು ಚರ ಲಿಂಗಗಳು. ಪರಸ್ಪರ ಸಮಾನರು. ಗುರುವಾದರು ಲಿಂಗ ಪೂಜಿಸುತ್ತಾನೆ. ಜಂಗಮವನ್ನೇಕೆ ಜರಿಯಬೇಕು ? ಗುರು ಜಂಗಮರಲ್ಲಿ ಕ್ರಿಯಾಚರಣೆ ದೃಷ್ಟಿ ಯಿಂದ ತರತಮ ಭಾವವಿದ್ದರೂ ತತ್ವತಃ ಯಾವ ಭೇದವಿಲ್ಲ. ಪರಸ್ಪರ ಪೂರಕಗಳಾಗಿವೆ. ಗುರು ವಿರಕ್ತರಲ್ಲಿ ಪರಸ್ಪರ ಈ ಸಮಭಾವ ಸಮರತಿ ಸಮಕ್ರಿಯೆ ಬಾರದ ವಿನಹ ಸಮಾಜದ ಏಳ್ಗೆಯಿಲ್ಲ. ಸಾಮಾಜಿಕ ಶಾಂತಿ ಅದೊಂದು ಭ್ರಾಂತಿ, ಎಂಬುದು ಸ್ವಾಮಿಗಳವರ ದೃಢನಿಶ್ಚಯ ; ದೃಢ ಪ್ರತ್ಯಯ.

ಸ್ವಾಮಿಗಳವರ ಈ ಸಹಕಾರ ಈ ಸಮತೆ ಕೆಲವರಿಗೆ ಸರಿಬೀಳಲಿಲ್ಲ. ಶ್ರೀಗಳವರೆ ಕಾಶೀನಾಥ ಶಾಸ್ತ್ರಿಗಳವರನ್ನು ಎತ್ತಿಕಟ್ಟಿರುವರೆಂದು ಇಲ್ಲದ ಸಲ್ಲದ ಆರೋಪಣೆ ಮಾಡುತ್ತಿದ್ದರು. ಇದರಲ್ಲಿ ಎಷ್ಟು ಮಾತ್ರಕ್ಕು ಸತ್ಯಾಂಶವಿಲ್ಲ. ಸಮಾಜ ಅನೈಕ್ಯತೆಗೆ ಕಾರಣರಾದವರನ್ನು ಕಂಡರೆ ಸ್ವಾಮಿಗಳವರು ಎಷ್ಟೊ ಸಹಿಸುತ್ತಿರಲಿಲ್ಲ. ಅವರ ಪ್ರಚಾರವನ್ನು ಪ್ರತಿಭಟಿಸುತ್ತಿದ್ದರು. ಅದರಿಂದಾದ

ಅನ್ಯೈಕ್ಯತೆಗಾಗಿ ತುಂಬಾ ವ್ಯಥೆಗೊಳ್ಳುತ್ತಿದ್ದರು. ಐಕ್ಯತೆಗಾಗಿ ಕಂಡ ಕಷ್ಟಗಳಿಗೆ ಗುರಿಯಾಗುತ್ತಿದ್ದರು. ಕಡೆಯಿಲ್ಲದ ನಷ್ಟಕ್ಕೆ ಎರವಲಾಗುತ್ತಿದ್ದರು.

ಸಾಲದ್ದಕ್ಕೆ ವಿರಕ್ತ ವಿರಕ್ತರಲ್ಲಿಯೆ ಸಹಕಾರವಿರಲಿಲ್ಲ; ಸೌಹಾರ್ದ್ರತೆ ಇರಲಿಲ್ಲ. ನಾಲ್ವರು ನಾಲ್ಕು ದಿಕ್ಕಾಗಿದ್ದರು. ಇವರುಗಳ ಐಕ್ಯತೆಯನ್ನಾದರು ಮಾಡಬೇಕೆಂದು ಸೀಮೆಯಿಲ್ಲದ ಸಾಹಸಪಟ್ಟರು. ಒಮ್ಮೆ ವಿರಕ್ತ ಸಮ್ಮೇಲನವನ್ನು ಶಿವಯೋಗ ಮಂದಿರದಲ್ಲಿಯೆ ಕರೆದರು. ಆಗ ಅನೇಕರು ಆಗಮಿಸಿದರು. ಅವರಲ್ಲಿ ಚಿತ್ರದುರ್ಗದ ಶ್ರೀ ಜಗದ್ಗುರು ಮುರಘಾಮಠದ ಶ್ರೀಗಳು, ಹುಬ್ಬಳ್ಳಿ ಶ್ರೀಜಗದ್ಗುರು ಮೂರು ಸಾವಿರ ಮಠದ ಶ್ರೀಗಳು ಪ್ರಮುಖರು. ಇವರಿಬ್ಬರನ್ನು ಒಂದೆಡೆಗೆ ಸೇರಿಸಲು ಹಾನಗಲ್ಲ ಶ್ರೀಗಳವರು ಹಗಲಿರುಳೆನ್ನಲ್ಲ ಶ್ರಮಿಸಿದರು. ಭಗೀರಥ ಪ್ರಯತ್ನದಿಂದ ಕೊನೆಗೆ ಒಂದೆಡೆಯಲ್ಲಿ ಕೂಡಿಸಿಯೆ ಬಿಟ್ಟರು. ಆದರೆ ಅದು ಕೊನೆಯವರೆಗು ಬಾಳಲಿಲ್ಲ. ಹಿಸುಕಿ ಹಣ್ಣು ಮಾಡಿದಲ್ಲಿ ಕಾಯಿ ಹಣ್ಣಾಗುವುದೆ? ಯಾವುದಕ್ಕು ಮನಸ್ಸು ಬೇಕು. ಆತ್ಮೀಯತೆ ಬೇಕು. ಅಂತು ಬೀಜಾವಾಪಮಾಡಿದರು.

ಬಿತ್ತಿದ ಬೀಜ ಬಿತ್ತಿದ ದಿನವೆ ಮೊಳಕೆ ಹಾಕದು. ಅದಕ್ಕು ಒಂದು ಅವಕಾಶ ಬೇಕು. ತಕ್ಕ ವಾತಾವರಣಬೇಕು. ಅಂದು ಸ್ವಾಮಿಗಳವರು ಬಿತ್ತಿದ ಬೀಜ ಇದೀಗ ಸೆಸೆದು ಮೊಳಕೆ ಹಾಕಿದೆ. ಇತ್ತೀಚಿಗೆ ಬೇರೆ ಬೇರೆ ಸಮುಯದವರು ಸೇರತೊಡಗಿದಾರೆ. ಕೂಡಿ ಶಿವಪೂಜೆ ಮಾಡತೊಡಗಿದಾರೆ. ಇನ್ನೂ ಸಾಲದು. ಸಾಳಿದೆಗೆದು ಬೆಳೆಯಬೇಕು. ಸುಮ ಅರಳಿ ಸುವಾಸಿಸಬೇಕು.

ಇದೀಗ ಗುರು – ವಿರಕ್ತರ ದ್ವೇಷ ದಳ್ಳುರಿಯು ಹೊರಗೆ ಉರಿಯುದಿದ್ದರು ಒಳಗೆ ಹೊಗೆಯಾಡುತ್ತಿದೆ. ಬಸವಣ್ಣನವರ ಕಿರಿಯ ಬಾವದ ಶರಣು ಮಾರ್ಗದ ತಣ್ಣೀರು ಒಳಗೆ ಬೀಳದ ಹೊರತು ಬಳಕೆಗೆ ಬಾರದ ಹೊರತು ಅದು ನಂದುವಂತಿಲ್ಲ, ನಂದಿಸುವಂತಿಲ್ಲ.

ಹಿರಿಯರಿಗಿಂತಲು ಕಿರಿಯರಲ್ಲಿ ನಾವೇ ಹೆಚ್ಚಿನವರೆಂಬ ಹೆಮ್ಮೆ ಹೆಚ್ಚಿ ಹೋಗಿದೆ. ಅದರಲ್ಲಿಯು ಸ್ವಾಮಿಗಳಂತಹ ಸಮತಾಭಾವಿಗಳ ಶಿಷ್ಯಸಮುದಾಯದಲ್ಲಿ ಆ ಭಾವ ಹೆಮ್ಮೆ ಹೆಚ್ಚುತ್ತಿರುವುದು ವಿಷಾದಾಸ್ಪದವಾದುದು, ವಿಚಾರಾಸ್ಪದವಾದುದು.

ಭಕ್ತರ ಒಳಪಂಗಡಗಳ ವಿಷಯದಲ್ಲಿಯು ಶ್ರೀಗಳವರಿಗೆ ತುಂಬಾ ಅಸಮಾಧಾನವಿತ್ತು. ಅವನ್ನೆಲ್ಲ ಅಳಿಯಲು ಅವಿಶ್ರಾಂತ ಶ್ರಮಿಸಿದರು.

ಸಾಮ್ಯವಾದವು ಸಾಗಿಬರುವ ಈ ಕಾಲದಲ್ಲಿಯಾದರು ವಿವೇಚನೆಯಿಂದ ಆ ತರತಮ ಭಾವವನ್ನು ಸಂಕುಚಿತ ಸ್ವಭಾವವನ್ನು ತೆಗೆದುಹಾಕುವದಾದರೆ ಸಮಾಜಕ್ಕೆ ಲೇಸಾದೀತು. ಶ್ರೀಗಳವರ ಶ್ರಮಸಾರ್ಥಕವಾದೀತು. ಅವರ ಆ ದಿವ್ಯ ಆತ್ಮಕ್ಕೆ ಆನಂದವೆನಿಸೀತು.



# ಪರಳಿ ವ್ಯಾಜ್ಯದಲ್ಲಿ ಪ್ರಯತ್ನ

ತನಗಡಸಿದೆಡರ ನೀಕ್ಷಿಸ-
ದೆ ಮಹಾಂತರ್ ಪೆರರ ಸಂಕಟಮನಪಹರಿಪರ್ ।
ಹಿಮರುಚಿ ತನ್ನಯ ಮರ್ಬಂ
ತೆಮರದೆ ತಿರೆಯೊಳ್ ತಗುಳ್ದ ತಮಮಂ ತವಿಪಂ

—ನೀತಿಮಂಜರಿ.

ಸ್ವಾಮಿಗಳವರು ಸಮಾಜ ಜೀವಿಗಳು. ಸತ್ಯಪ್ರೇಮಿಗಳು. ಸಮಾಜಕ್ಕೆ ಎಲ್ಲಿ ಯಾವ ಮೂಲೆಯಲ್ಲಿ ಪರಾಕ್ರಮಣ ನಡೆದರೂ ಅದನ್ನು ಸಹಿಸುತ್ತಿರಲಿಲ್ಲ. ಇನ್ನು ದುರಾಕ್ರಮಣ ನಡೆದರೆ ಕೇಳಬೇಕೆ? ತಮಗಿರುವ ತೊಡರುಗಳನ್ನು ನೋಡುತ್ತಿರಲಿಲ್ಲ. ಶ್ರಮವಿಭಾಗವನ್ನೂ ಲೆಕ್ಕಿಸುತ್ತಿರಲಿಲ್ಲ. ವಾಯುವೇಗದಿಂದ ಅಲ್ಲಿಗೆ ಹೋಗಿ ಅದನ್ನು ತಡೆಗಟ್ಟುತ್ತಿದ್ದರು.

ಒಮ್ಮೆ ಹೈದರಾಬಾದ ಪ್ರಾಂತ್ಯದಲ್ಲಿದ್ದ ಪರಳೀ ವೈದ್ಯನಾಥ ಲಿಂಗದ ಪೂಜಾಧಿಕಾರದ ವ್ಯಾಜ್ಯ ಪ್ರಾರಂಭವಾಯಿತು. ಪರಳೀಯರು ಪೂಜಾಧಿಕಾರವನ್ನು ಆಕ್ರಮಿಸುವ ಸಾಹಸಮಾಡಿದರು. ಈ ಸಂಗತಿ ಎಲ್ಲೆಲ್ಲಿಯೂ ಹಬ್ಬಿತ್ತು. ಇದನ್ನು ಕೇಳಿ ಸ್ವಾಮಿಗಳವರಿಗೆ ಸಮಾಧಾನವಾಗಲಿಲ್ಲ. ಶರೀರದಲ್ಲಿ ಸ್ವಾಸ್ಥ್ಯವಿಲ್ಲದಿದ್ದರು. ಆ ಕ್ಷಣವಲ್ಲಿಯೆ ಅನೇಕ ಧರ್ಮಗ್ರಂಥಗಳನ್ನು ತೆಗೆದುಕೊಂಡು ಹತ್ತು ಹನ್ನೆರಡು ಮಂದಿ ಪಂಡಿತರನ್ನು ಕರೆದುಕೊಂಡು ಹೋಗಿ ವಾದ ಕ್ಷೇತ್ರಕ್ಕೆನೆರವಾದರು.

ಬರೀ ವೈದ್ಯನಾಥಲಿಂಗ ಪೂಜಾ ವಿಷಯ ಒಂದಾಗಿದ್ದರೆ ಹೇಗೋ ಆಗಬಹುದಿತ್ತು. ಜೊತೆಗೆ ಜಾತಿವಾದ ಮುಂದೆ ಬಂದಿತ್ತು. ಅಂತ್ಯಜ ಅಗ್ರಜ ಎಂಬ ಕೀಳು ಮೇಲು ಭಾವ ಬಲಿತಿತ್ತು. ವೀರಶೈವರು ಅಂತ್ಯಜ (ಶೂದ್ರ)ರೆಂಬ ವಾದ ವಿಪರೀತಕ್ಕೇರಿತ್ತು. ಸ್ವಾಮಿಗಳವರಿಗೆ ಇದು ಸಹಿಸಲಿಲ್ಲ. ಇನ

ಕ್ಕಾಗಿಯೆ ಈ ಹೊಲಸು ಕಳೆಯಲಿಕ್ಕಾಗಿಯೆ ಆವೇಗದಿಂದ ಆವೇಶದಿಂದ ಹೊರಟುಹೋಗಿ ವಾದದಲ್ಲಿ ಭಾಗಿಗಳಾದರು.

ವಾದ ಬೇಗ ಹರಿಯಲಿಲ್ಲ. ೩ – ೪ ತಿಂಗಳ ಕಾಲ ಮುಂದುವರಿಯಿತು. ವಾದ ಕೇಳುವ ವ್ಯಾಜ್ಯನೋಡುವ ಕುತೂಹಲದಿಂದ ಅನೇಕ ಸಾವಿರ ಜನರು ಸೇರಿದ್ದರು. ಅವರೆಲ್ಲರ ಊಟಉಪಚಾರದ ವೆಚ್ಚನ್ನು ಶ್ರೀಗಳವರೆ ನಿರ್ವಹಿಸ ಬೇಕಾಯಿತು. ತಂದ ಹಣ ತೀರಿಹೋಗಿತ್ತು. ಕೈಯಲ್ಲಿ ಕಾಸಿರಲಿಲ್ಲ. ಹೇಗೆ ಮಾಡುವದೆಂದು ಯೋಚಿಸಲಿಲ್ಲ. ತಕ್ಷಣದಲ್ಲಿಯೆ ಸುತ್ತು ಮುತ್ತ ಹೋಗಿ ಭಿಕ್ಷೆಯಿಂದ ಬೇಕಾದಷ್ಟು ಹಣ ತಂದರು. ಕೊನೆಯವರೆವಿಗು ಬಂದವರ ಯೋಗಕ್ಷೇಮವನ್ನು ನಿತ್ತರಿಸಿದರು. ಸ್ವಾಮಿಗಳವರದು ಅಕ್ಷಯ ಪಾತ್ರೆ ; ಅಮೃತ ಹಸ್ತ. ಅಂದ ಮೇಲೆ ಕೊರತೆಯ ಮಾತೇಕೆ ?

ಈ ವ್ಯಾಜ್ಯದಲ್ಲಿ ಉಂಟಾದ ಸ್ವಾಮಿಗಳವರ ಕಷ್ಟ – ನಷ್ಟ ಅಪಾರ ವಾದದ್ದು. ಆದರೂ ಆ ಯೋಚನೆ ಸ್ವಾಮಿಗಳವರಲ್ಲಿ ಇರಲಿಲ್ಲ. ನಿರ್ಣಯವು ಸಮಾಜದಂತಾದ ಸಂಗತಿಯು ತಿಳಿದೊಡನೆ ಸ್ವಾಮಿಗಳವರಿಗೆ ಸಂತೋಷ ವುಂಟಾಯಿತು. ಆ ಕಷ್ಟ ನಷ್ಟಗಳು ತುಂಬಿಬಂದವು. ಅನೇಕ ಕಡೆಗಳಿಂದ ಪ್ರಶಂಸಾ ಪತ್ರಗಳು ಸ್ವಾಮಿಗಳವರಿಗೆ ಬಂದವು.

ವ್ಯಾಜ್ಯದ ಸಮಯದಲ್ಲಿ ಮುಕ್ತ ಹಸ್ತದಿಂದ ಸಹಾಯಮಾಡಿದವರಿಗೆ ಪ್ರಶಸ್ತಿ ಪ್ರದಾನದಿಂದ ಸಂತೋಷಪಡಿಸಿದರು. ಶುಭಾಶೀರ್ವಾದ ಮಾಡಿದರು.

ಕುಮಾರಯೋಗಿಯು ಪರಳೀ ವ್ಯಾಜ್ಯದ ಪ್ರಭಾಕರ! ಅಹುದು. ಪರಮ ಪೂಜ್ಯರು ಆ ಭಗೀರಥ ಪ್ರಯತ್ನ ಪಡದಿದ್ದರೆ ಆ ವಿಜಯದ ಬೆಳಕು ಸಮಾಜಕ್ಕೆಲ್ಲಿ ಹೇಗೆ ದೊರಕುತ್ತಿತ್ತು ? ಕುಮಾರ ಯೋಗಿಗಳಂತಹ ಸಾಹಸಿ ಗಳನ್ನು ಸಹಾಯಕಾರಿಗಳನ್ನು ಪಡೆದ ಸಮಾಜವೆ ಧನ್ಯ. ಅದುವೆ ಮಾನ್ಯ. ಅವರೆ ಅದಕೊಂದು ಭವ್ಯಭಾಗ್ಯ ; ದಿವ್ಯಸಂಪತ್ತಿ.



# ಸ್ತ್ರೀಸುಧಾರಣೆ

"ನೀರಿಂಗೆ ನೈದಿಲೆಯೆ ಶೃಂಗಾರ. ಸಮುದ್ರಕ್ಕೆ ತೆರೆಯೆ ಶೃಂಗಾರ.
ಗಗನಕ್ಕೆ ಚಂದ್ರಮನೆ ಶೃಂಗಾರ. ನಾರಿಗೆ ಗುಣವೆ ಶೃಂಗಾರ...."

ಕುಮಾರ ಸ್ವಾಮಿಗಳವರು ಸ್ತ್ರೀಯರ ಮುಖಗಳನ್ನು ಈ ಕಣ್ಣುಗಳಿಂದ ನೋಡದಿದ್ದರು ಅವರ ಜೀವನ ಮುಖವನ್ನು ತಮ್ಮ ಜ್ಞಾನ ನೇತ್ರದಿಂದ ನಿರೀಕ್ಷಿಸುತ್ತಿದ್ದರು. ಬರೀ ನಿರೀಕ್ಷಣೆ ಮಾತ್ರವಲ್ಲ ಸುಧಾರಣೆಗಾಗಿ ಸರ್ವತೋ ಮುಖದಲ್ಲಿ ಪರೋಕ್ಷವಾಗಿ ಪರಿಶ್ರಮಿಸುತ್ತಿದ್ದರು.

ಪ್ರತಿವರ್ಷ ಶಿವಯೋಗ ಮಂದಿರ ಯಾತ್ರೆಯ ಸಮಯದಲ್ಲಿ ಮಹಿಳಾ ಸಭೆಯನ್ನು ಕರೆಯುತ್ತಿದ್ದರು. ಮಹಿಳೆಯರನ್ನೆ ಕಾರ್ಯಕರ್ತರನ್ನಾಗಿ ಮಾಡು ತ್ತಿದ್ದರು. ಭಾಷಣ ಕರ್ತರನ್ನಾಗಿ ಏರ್ಪಡಿಸುತ್ತಿದ್ದರು. ಸುಧಾರಣೆಯ ಜೀವಂತ ಪ್ರಶ್ನೆಗಳನ್ನು ತಾವೇ ಕಳುಹಿಸಿ ಚರ್ಚೆನ ಹಚ್ಚುತ್ತಿದ್ದರು.

ಸ್ವಾಮಿಗಳವರ ವ್ಯಕ್ತಿತ್ವಕ್ಕೆ ಹೆಣ್ಣಿನ ಅಗತ್ಯವಿಲ್ಲದಿದ್ದರು ಸಮಾಜಕ್ಕೆ ಹೆಚ್ಚು ಅಗತ್ಯವಿದೆಯೆಂಬುದನ್ನು ಚನ್ನಾಗಿ ಗ್ರಹಿಸಿದ್ದರು. ಸಮಾಜ ರಥಕ್ಕೆ ಹೆಣ್ಣು ಗಂಡು ಎರಡು ಚಕ್ರಗಳೆಂದು ಸಮಾಜ ಪುರುಷನ ಒಳಮೈ ಹೊರಮೈ ಎಂದು ಇವುಗಳಲ್ಲಿ ಯಾವುದಾದರೊಂದು ಊನವಾದಲ್ಲಿ ಸಮಾಜ ಸುಸೂತ್ರ ವಾಗಿ ಸಾಗದೆ ಕುಂಟುತ್ತದೆಯೆಂದು ಒಮ್ಮೊಮ್ಮೊಮ್ಮೆ ಪ್ರಪಾತಕ್ಕೆ ಬೀಳುತ್ತದೆ ಯೆಂದು ಅಪ್ಪಣೆ ಕೊಡಿಸುತ್ತಿದ್ದರು. ಪುರುಷರ ಸುಧಾರಣೆಯಂತೆ ಸ್ತ್ರೀಯರ ಸುಧಾರಣೆಯು ಅತ್ಯಗತ್ಯ, ಅನಿವಾರ್ಯ.

ಸ್ವಾಮಿಗಳವರು ಪ್ರಯಾಣದಲ್ಲಿರುವಾಗ ತಂಗಿದ ಹಳ್ಳಿಯಲ್ಲಿ ಯಾರಾ ದರು ತಮ್ಮ ಮನೆ ಹೆಂಗಸರನ್ನು ಚನ್ನಾಗಿ ಹೊಡೆದದ್ದು ಅವರ ಕಿವಿಗೆ ಬಿದ್ದರೆ ಅವರನ್ನು ಕರೆಯಿಸಿ ಏನಪ್ಪ, ಯಾತಕ್ಕೆ ಹೆಂಡತಿಯನ್ನು ಹೊಡದೆ? ತಪ್ಪು ಮಾಡದ ಮನುಷ್ಯನಿರುವನೆ? ತಪ್ಪಿಗೆ ತಕ್ಕ ಶಿಕ್ಷೆ ಇದೆಯೆ? ನೀನು ತಪ್ಪು ಮಾಡಿದರೆ ನಿನ್ನನ್ನು ಯಾರು ಹೊಡೆಯಬೇಕು? ಬುದಿವಾದವನ್ನು ಹೇಳಿ

ತಪ್ಪನ್ನು ತಿದ್ದಬೇಕು. ಹೆಂಡತಿಯೆ ಮನೆಯ ಭಾಗ್ಯದೇವತೆ! ಮನೆ-ಮಕ್ಕಳ ಪಾಲನೆ ಅವಳ ಪಾಲಿನದು. ಹೆಂಡತಿಯನ್ನು ಹಿಂಸಿಸುವವರಿಗೆ ಹರನು ಮೆಚ್ಚಲಾರ. ಘೋರ ನರಕತಪ್ಪದು. ನೀನು ನಿನ್ನ ಹೆಂಡತಿಯು ಪರಸ್ಪರ ಪ್ರೇಮ ಸಂತೋಷಗಳಿಂದ ಇದ್ದರೆ ನಿಮಗೆ ಸುಖಸಿಕ್ಕುತ್ತದೆ. ಸಂಸಾರ ಸುಸೂತ್ರ ಸಾಗುತ್ತದೆ. ಒಂದು ಕಾಲು ಕುಂಟಾದರೆ ಚನ್ನಾಗಿರುತ್ತದೆಯೊ, ಹೇಳು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಶಿವ ಶರಣರು ಅಪ್ಪಣೆಕೊಡಿಸಿದ್ದಾರೆ. ನಿಮ್ಮಿಬ್ಬರ ದೇಹಗಳು ಎರಡಾಗಿದ್ದರು ಮನಸ್ಸು ಒಂದಾಗಿರಬೇಕು. ಹೃದಯ ಒಂದಾಗಿರಬೇಕು. ತಿಳಿಯಿತೆ? ಇನ್ನು ಮೇಲೆ ಹೀಗೆಲ್ಲ ಹುಚ್ಚು ಹುಚ್ಚಾಗಿ ಹೊಡೆಯಬೇಡ ಎಂದು ಹೇಳಿ ಕಳುಹಿಸುತ್ತಿದ್ದರು. ಆದರೂ ಸ್ವಾಮಿಗಳ ಮನಸ್ಸು ಸ್ತ್ರೀಯರ ಅಜ್ಞಾನ ಅನಾಚಾರಗಳಿಗಾಗಿ ತುಂಬಾ ನೋಯುತ್ತಿತ್ತು. ಅವುಗಳ ನಿವಾರಣೆಗಾಗಿ ಸದಾ ಆಲೋಚಿಸುತ್ತಿತ್ತು.

ಸ್ವಾಮಿಗಳವರು ನಿಷ್ಠುರಾಗಿಯು ಸ್ತ್ರೀಯರ ಮುಖಾವಲೋಕನ ಮಾಡದಿರಲು ಕಾರಣವೇನು ಎಂದು ಕೆಲವರು ಕೇಳದಿಲ್ಲ. ಅದಕ್ಕೆ ಹನ್ನೆರಡನೆಯ ಶತಮಾನದಲ್ಲಿ ನಿರ್ವಾಣೆಯಾಗಿ ಅನುಭವಮಂಟಪಕ್ಕೆ ಬಂದ ಮಹಾದೇವಿಯಕ್ಕಗಳನ್ನು 'ಕೇಶದ ಮರೆಯೇಕೆ?' ಎಂದು ಕೇಳಿದ ಅಲ್ಲಮ ಪ್ರಭುವಿಗೆ 'ನಿಮ್ಮ ಶರಣರಿಗೆ ನೋವಾದೀತೆಂದು' ಅಕ್ಕಗಳು ಉತ್ತರಿಸಿದಂತೆಯೆ ಇಲ್ಲಿ ಉತ್ತರಿನಬೇಕಾಗಿದೆ. ಸ್ವಾಮಿಗಳವರಿಗೆ ನಿಜವಾಗಿಯೂ ಮನೋವಿಕಾರ ಇರಲಿಲ್ಲ. ಅದರಲ್ಲಿ ಅವರು ಸಂಪೂರ್ಣ ಸಿದ್ಧಿಯನ್ನು ಪಡೆದಿದ್ದರು. ಆದರೂ ಅವರು ತಮ್ಮ ಅಪರ ವಯಸ್ಸಿನಲ್ಲಿಯು ಆ ವ್ರತವನ್ನು ನಡಸಿದರು. ಕಾರಣ ಹಿರಿಯರ ಅನುಕರಣ ಕಿರಿಯರು ಮಾಡಿಯಾರು. ಅದರಲ್ಲಿಯು ಇಂತಹ ವಿಷಯಗಳಲ್ಲಿ ಅನುಕರಣ ಮಾಡುವುದು ವಿಶೇಷ. ನಾವೇ ನೋಡ ತೊಡಗಿದರೆ ಶಿವಯೋಗ ಮಂದಿರ ಸಾಧಕರು ನೋಡ ತೊಡಗುವರು. ನಮ್ಮಂತೆ ಅವರ ಮನಸ್ಸಿರುವದಿಲ್ಲ. ಮನಸ್ಸಿನ ಸೆಳತಕ್ಕೆ ಮಾರುಹೋದಾರು ಎಂಬುದೇ ಅವರ ಉದ್ದೇಶ. ಹೀಗೆ ಸಾಧಕರ ಶಿಕ್ಷಣಕ್ಕಾಗಿ ಇನ್ನೂ ಅನೇಕ ವ್ರತಗಳನ್ನು ಕೈಬಿಡದೆ ಅವರು ಆಚರಿಸುತ್ತಿದ್ದರು. ಅವರಿಗಾಗಿ ಅವರಿದಿ ಲ್ಲ.

ಒಂದುದಿನ ಗಚ್ಚಿನ ಮಠದಲ್ಲಿ ಎಲ್ಲ ಸಾಧಕರಿದ್ದರು. ಕಲ್ಲಿನಮಠದ ಮುಂಭಾಗದಲ್ಲಿ ಸ್ವಾಮಿಗಳೊಬ್ಬರೆ ಮೂಹೂರ್ತಮಾಡಿದ್ದರು. ಬೆಳಗಿನ ಒಂಬತ್ತು ಗಂಟೆಯ ಸಮಯ. ಯಾರೋ ಪ್ರಯಾಣಿಕರಾದ ಹೆಂಗಸರು ದ್ವಾರದಿಂದ ಸ್ತ್ರೀ ಸಹಜವಾದ ಗಲಾಟೆಯೊಡನೆ ಒಳನುಗ್ಗಿದರು. ಸ್ವಾಮಿಗಳವರು ಸುಮ್ಮನೆ ಇದ್ದರು. ಹೆಂಗಸರು ಎದುರಿಗಿರುವ ಸ್ವಾಮಿಗಳವರನ್ನು ನೋಡಿದ ಮೇಲೆಯೂ ಹಿಂದಿರುಗಲಿಲ್ಲ. ಬಳಸಿಕೊಂಡು ಗಚ್ಚಿನ ಮಠದತ್ತ ಹೋಗಹತ್ತಿದರು. ಆಗ ಸ್ವಾಮಿಗಳವರು ತಾವೇ ಎದ್ದು ಅವರನ್ನು ತಾಯಿಗಳೆ, ಎಂದು ನಯವಾಗಿ ಕರೆದು ಅಲ್ಲಿ ಶಿವಯೋಗಿಗಳಿದ್ದಾರೆ. ಅವರು ನಿಮ್ಮನ್ನು ನೋಡುವದಿಲ್ಲ. ನಿಮ್ಮೊಡನೆ ಮಾತೂ ಆಡುವದಿಲ್ಲ. ಅಷ್ಟಕ್ಕೆ ನೀವು ಅಲ್ಲಿ ನೋಡತಕ್ಕದು ಏನೂ ಇಲ್ಲ. ನೀವು ಹೀಗೆಯೆ ಹೊರಟು ಹೋಗಿರೆಂದು ಹೇಳಿಕಳುಹಿದರು. ಇದನ್ನು ಕಣ್ಣಾರೆ ಕಂಡಿದೇನೆ. ಕಿವಿಯಾರೆ ಕೇಳಿದೇನೆ. ಹೀಗಿರುವಾಗ ಅವರ ಉದ್ದೇಶ ಅವರ ವ್ರತಾಚರಣೆ ಸಾಧಕರ ನಿಮಿತ್ತವಾಗಿ ಇತ್ತಂಬುದು ಸ್ಪಷ್ಟವಾಗುವುದಿಲ್ಲವೆ ?

ವ್ಯಷ್ಟಿಜೀವನದ ಸಾಧನಕ್ಷೇತ್ರ, ಸಣ್ಣ ಕುಟುಂಬವಾಗಿದ್ದರೆ ಸಮಷ್ಟಿ ಜೀವನದ ಸಾಧನಕ್ಷೇತ್ರ, ವಿಶಾಲವಾದ ವಿಶ್ವಕುಟುಂಬವಾಗಿದೆ. ಈ ವಿಶ್ವ ಕುಟುಂಬವನ್ನು ಮೀರಿ ಯಾವನೂ ವಿಶ್ವವ್ಯಕ್ತಿಯಾಗಲಾರನು, ವಿಶ್ವಶಾಂತಿ ಕಾರಣನಾಗನು. ಹಾಲಾದರು ಮಧುರ ಪಾಕವಾಗಬೇಕಾದರೆ ಸಕ್ಕರೆಯು ಬೆರಕೆ ಬೇಕೇ ಬೇಕು. ಪ್ರೇಮವೆ ಹಾಲು. ಸದ್ಗುಣಗಳೆ ಸಕ್ಕರೆ. ಪ್ರೇಮ ಐಂದ್ರಿಕವಾಗಬಾರದು. ಆಧ್ಯಾತ್ಮಿಕವಾಗಬೇಕು. ಆದರ್ಶಕಾಂಕ್ಷಯಾಗಬೇಕು. ಸದ್ಗುಣ ಸಂವರ್ಧಿಯಾಗಬೇಕು.

ಬೌದ್ಧಿಕ ಆಧ್ಯಾತ್ಮಿಕ ಜೀವನೋನ್ನತಿಗೆ ಹೆಣಗುವ ವ್ಯಕ್ತಿಗೆ ಹೆಣ್ಣು ಗಂಡೆಂಬ ಭೇದವಿಲ್ಲ. ಬುದ್ಧಿ ಆತ್ಮಗಳು ಉಭಯ ವ್ಯಕ್ತಿತ್ವದಲ್ಲಿ ಸರಿಸಮಾನವಾದವುಗಳು. ಏರು ಪೇರುಗಳ ಕವಲಿಲ್ಲ, ಕೊಂಕಿಲ್ಲ. ಆದರು ಸ್ತ್ರೀ ಸಮಾಜೋನ್ನತಿಗೆ ಹೆಣಗಿ ಮುಖದಮೇಲೆ ಕಪ್ಪು ಕಲೆಯನ್ನು ತಂದುಕೊಳ್ಳದ ವ್ಯಕ್ತಿ ಇತಿಹಾಸದಲ್ಲಿ ಕಾಣುವುದು ವಿರಳ. ಸ್ವಾಮಿಗಳವರು ಈ ವಿಷಯದಲ್ಲಿ ನಿಷ್ಕಳಂಕ ಚರಿತರಾಗಿ ಹುಣ್ಣಿಮೆಯ ಚಂದ್ರನಂತೆ ಬೆಳಗಿದರು. ಉತ್ತರಾಯಣದ ಪ್ರಭಾಕರನಂತೆ ಪ್ರಜ್ವಲಿಸಿದರು.

ಸ್ವಾಮಿಗಳವರು ಹೆಂಗಸರ ಮುಖವನ್ನು ನೋಡದೆ ಇದ್ದುದು ದ್ವೇಷದ ಭಾವದಿಂದಲ್ಲ. ಸತೀತ್ವ ಸ್ವಾಮಿತ್ವ ಧರ್ಮಗಳೆರಡರ ಪರಿಪಾಲನದ ಹೆಚ್ಚಳಿಕೆಯಿಂದ. ಸಾಂಸಾರಿಕ ಜೀವನದಲ್ಲಿಯೂ "ಉರಿಯ ನಾಲಗೆಗಂಜೆ. ಸುರಿಗೆಯ ಮೊನೆಗಂಜೆ. ಪರಸ್ತ್ರೀ ಪರಧನವೆಂಬ ಜೂಜಿಂಗಂಜುವೆ" ಎಂದು ಉಸುರಿದ ಬಸವಣ್ಣನ ಬಂಧುರೋಕ್ತಿಯನ್ನು ಸನ್ಯಾಸಜೀವಿಯು ಅದೆಷ್ಟು ಎಚ್ಚರದಿಂದ ಕಾಪಾಡಬೇಕೆಂಬ ಹೊಣೆಗಾರಿಕೆಯನ್ನು ಹೆಚ್ಚಾಗಿ ತಿಳಿದು ಆಚರಣೆಯಲ್ಲಿ ತಂದು ಆ ಉಕ್ತಿಯನ್ನು ಸಾರ್ಥಕಪಡಿಸಿದ ಸನ್ಯಾಸ್ಯರು ಸ್ವಾಮಿಗಳವರು. ಆ ವ್ರತಶೀಲರಾಗಿಯೆ ಸ್ತ್ರೀ ಸುಧಾರಣೆಯ ಕಾರ್ಯವನೆಸಗಿದ ಕಾರಣಿಕರು ಕುಮಾರಯೋಗಿಗಳವರು.

ಸ್ತ್ರೀಯರಲ್ಲ ಬೋಧಕವರ್ಗ ತಯಾರಾಗಬೇಕೆಂಬ ಹೆಬ್ಬಯಕೆ ಸ್ವಾಮಿಗಳವರದಾಗಿತ್ತು. ಅಕ್ಕ, ಲಕ್ಕಮ್ಮ ನೀಲಾಂಬೆ ಮುಂತಾದ ಶರಣೆಯರಂತೆ ಆತ್ಮವೀರರಾಗಿ ಬಾಳಬೇಕೆಂಬ ಮೈತ್ರೇಯಿಯಂತೆ. ಪತಿವ್ರತೆಯರಾಗಿ ಪರವಸ್ತು ಪ್ರೇಮಿಗಳಾಗಿ ಬದುಕಬೇಕೆಂಬ ಮಹತ್ವಾಕಾಂಕ್ಷ ಸ್ವಾಮಿಗಳವರಲ್ಲಿ ಬಲವಾಗಿ ಬೇರೂರಿತ್ತು. ಚಿಗುರು ಹಾಕಿತ್ತು. ಫಲ ನೋಡುವ ಅನುಭವಿಸುವ ಅವಕಾಶ ಅವರಿಗಿಲ್ಲದೆ ಹೋಯಿತು.



# ವ್ಯವಸಾಯ - ವಾಣಿಜ್ಯ

ವಿದ್ಯಾಪರಿಣತನಾದೊಡ
ಮುದ್ಯಮ ವಿರಹಿತನದೆಂತು ಪಡೆವಂ ಸಿರಿಯಂ
ಉದ್ಯಾನದಲ್ಲಿ ತರುವಂ
ಹೃದ್ಯಫಲಂ ಮಂತ್ರಬಲದೆ ಬೀಳ್ವುದೆ ಧರೆಯೊಳ್

— ನೀತಿಮಂಜರಿ

'ಕೋಟಿವಿದ್ಯೆಗಳಿಗಿಂತ ಮೇಟಿವಿದ್ಯೆಯು ಮೇಲು' 'ಕರ್ಷಕತೋ ನಾಸ್ತಿ ದುರ್ಭಿಕ್ಷಂ' ಎಂಬ ಗಾದೆಯ ಹಿರಿಮೆಯನ್ನು ಬೆಳಗಿಸಿದ ಭಾಗ್ಯವನ್ನು, ಯಥಾರ್ಥವಾಗಿ ಗಮನಿಸಿದ ಸ್ವಾಮಿಗಳು ಅತಿ ವಿರಳ. ಕುಮಾರಯೋಗಿಗಳು ಕೃಷಿಯ ಮೇಲೆಯೂ ಕಣ್ಣು ಚೆಲ್ಲಿದ್ದರೆಂದರೆ ಅನೇಕರಿಗೆ ಆಶ್ಚರ್ಯವಾಗಬಹುದು; ಆಗುವಂತಹದೆ.

ಸ್ವಾಮಿಗಳವರ ಸಮ್ಯಕ್‌ದೃಷ್ಟಿ ಜೀವಸೃಷ್ಟಿಯ ಮೂಲವಾವುದೆಂಬುದನ್ನು ಕಂಡುಕೊಂಡಿತ್ತು. ಜೀವಶಕ್ತಿ ಯಾವುದರಲ್ಲಿದೆಯೆಂಬುದನ್ನು ಅರಿತಿತ್ತು. ಅನ್ನ ದೇವರ ದೇವರು. ಅದಕ್ಕಿನ್ನು ಬೇರೆ ದೇವರಿಲ್ಲ. ಅದನುಳಿದು ಬಾಳುವ ಬಗೆ ಬೇರಿಲ್ಲ. ಬೆಳಗುವ ಜ್ಯೋತಿ ಬೇರೊಂದರಲ್ಲಿಲ್ಲ. ಎಂಬುದನ್ನು ಸ್ವಾಮಿಗಳವರು ಚೆನ್ನಾಗಿ ಗಮನಿಸಿದ್ದರು. ಅದಕ್ಕಾಗಿ ಅವರು ವ್ಯವಸಾಯದತ್ತ ವಿಶೇಷ ಲಕ್ಷ್ಯವಿಟ್ಟಿದ್ದರು.

ಕೃಷಿವಿಜ್ಞಾನವು ಕನ್ನಡನಾಡಿಗೆ ಬಂದ ಪ್ರಥಮದಲ್ಲಿಯೆ ಅದರ ಉಪಯೋಗವನ್ನು ಪಡೆದವರು ಸ್ವಾಮಿಗಳವರು. ಊಳುವ ಯಂತ್ರದ ನೇಗಿಲ (ಟ್ರ್ಯಾಕ್ಟರ್)ನ್ನು ಹೆಚ್ಚು ಹಣವಿಕ್ಕಿ ತರಿಸಿ ಮೊತ್ತಮೊದಲು ಶಿವಯೋಗಮಂದಿರದಲ್ಲಿ ನೆಲವನ್ನು ಊಳಿಸಿದರು. ಹೀಗೆಯೆ ಬಗೆಬಗೆಯಾಗಿ ನೆಲವನ್ನು ಹದಗೊಳಿಸುವ ಬಲಗೊಳಿಸುವ ಪ್ರಯೋಗಗಳನ್ನು ಮಾಡಿಸುತ್ತಿದ್ದರು. ನೂರಾರು ದನಕರುಗಳನ್ನು ಸಾಕಿ ಗೊಬ್ಬರ ಒದಗಿಸುತ್ತಿದ್ದರು.

ಸೀರಾವರಿಗಾಗಿ ಸೀರೆತ್ತುವ ಯಂತ್ರವನ್ನು ತರಿಸಿ ಹಾಕಿಸಿದ್ದರು. ಮೈಸೂರು ಸಂಸ್ಥಾನದ ಕಪ್ಪನಹಳ್ಳಿಯಲ್ಲಿ ಸ್ಥಾಪಿಸಿದ ಶಾಖಾಮಂದಿರದಲ್ಲಿ ಎಂಜನ ಸಹಾಯದಿಂದ ಸೀರೆತ್ತಿ ಕಬ್ಬು ಬೆಳೆವಂತೆ ಮಾಡಿದರು. ಅಲ್ಲದೆ ಶಿವಯೋಗ ಮಂದಿರದ ಬಳಿ ಹಳೆಯ ಮಾಕೂಟದ ಸೀರಿಸಿಂದ ಅಲ್ಲಿ ಒಂದು ಬಾಳೆಯ ಬನವನ್ನು ಬೆಳೆಯಿಸಿದ್ದ ಸಂಗತಿಯನ್ನು ಈ ಮೊದಲೆ ಉಲ್ಲೇಖಿಸ ಲಾಗಿದೆ.

ಎಲ್ಲಿಕ್ಕೂ ವ್ಯವಸಾಯ ಮೂಲೆಂಬ ಮರ್ಮವನ್ನು ಚನ್ನಾಗಿ ಅರಿತಿ ದ್ದರು. ಅದು ಕಾರಣ ಬಲ್ಲ ವ್ಯವಸಾಯಗಾರರಿಂದ ಜೇನಾಯದ ರಹಸ್ಯ ವನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಸಂಸ್ಥೆಯ ಒಕ್ಕಲತನವು ಉತ್ತಮ ಸ್ಥಿತಿಗೆ ಬರಬೇಕೆಂದು ಪಾಟ ಪಡುತ್ತಿದ್ದರು.

ವ್ಯವಸಾಯಕ್ಕೆ ಬೇಕಾದ ಎತ್ತು ಎಮ್ಮೆ ಹಸುಗಳ ಮೇಲೆ ಸ್ವಾಮಿ ಗಳವರಿಗೆ ಹೆಚ್ಚು ಪ್ರೇಮವಿತ್ತು. ಅವುಗಳ ರಕ್ಷಣೆಯತ್ತ ಹೆಚ್ಚು ಲಕ್ಷ್ಯ ಕೊಡುತ್ತಿದ್ದರು. ಅವನ್ನು ಕಾಪಾಡುವವರ ಮೇಲೆ ಅವರ ಕೃಪಾದೃಷ್ಟಿ ಯಿರುತ್ತಿತ್ತು.

ಆಹಾರ ಮುಗ್ಗಟ್ಟಿಲ್ಲದ ಆ ಕಾಲದಲ್ಲಿಯೆ ಸ್ವಾಮಿಗಳವರು ಗೈಮೆಗೆ ಗಮನಿಸಬೇಕಾದರೆ ಅವರ ದೃಷ್ಟಿ ಎಷ್ಟು ಆಳವಾದ್ದು. ಅನನ್ಯ ಸಾಧಾರಣ ವಾದ್ದು. ಎಂಬುದನ್ನು ವಾಚಕರೆ ಊಹಿಸಿಕೊಳ್ಳಲಿ. ಸ್ವಾಮಿಗಳವರ ಈ ದೂರದೃಷ್ಟಿಗೆ ತಲೆಮಾಗಲಿ.

ಎರಡನೆಯದಾಗಿ 'ದ್ರವ್ಯಮೂಲಂ ಜಗತ್' ಎಂಬುದನ್ನು ಅವರು ಮರೆತಿರಲಿಲ್ಲ. ಯಾವುದಕ್ಕು ದುಡ್ಡು ಬೇಕು. ದುಡ್ಡಿದ್ದವನೆ ದೊಡ್ಡಪ್ಪ ಹಣವೇ ಗುಣ. ಅಂತಹ ಹಣ ಬರುವ ದಾರಿ ವಾಣಿಜ್ಯ.

'ಧರೆಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹದೇವ ಶೆಟ್ಟಿ ......."

ಎಂಬುದಾಗಿ ಹೇಳಿ ಬಸವಣ್ಣನು ಹರನನ್ನೆ ಹಿರಿಯ ಹರದನನ್ನಾಗಿ ಮಾಡಿದಾನೆ. ಪರಮಾತ್ಮನಿಗೇನೆ ವ್ಯಾಪಾರದ ಅಗತ್ಯ ಇರುವಾಗ ಉಳಿದವರ

ಮಾತೇನು ? ಒಂದಿಲ್ಲೊಂದು ರೀತಿಯಲ್ಲಿ ವ್ಯಾಪಾರ ಎಲ್ಲರಿಗೂ ಬೇಕು. ಅದು ಪದಾರ್ಥಕ್ಕೆ ಪದಾರ್ಥ ವಿನಿಮಯವಾಗಿಯಾದರು ಇರಬಹುದು ಇಲ್ಲವೆ ಪದಾರ್ಥಕ್ಕೆ ಪರಮಾರ್ಥ ವಿನಿಮಯವಾಗಿಯಾದರು ಇರಬಹುದು. ಈ ದೃಷ್ಟಿಯಿಂದ ನೋಡುವಲ್ಲಿ ಚತುರಾಶ್ರಮಿಗಳು ವ್ಯಾಪಾರಕ್ಕೆ ಹೊರಗಾಗು ವಂತಿಲ್ಲ. ಅಂತೆಯೆ ಅಣ್ಣನ ಈ ದೃಷ್ಟಿಯಲ್ಲಿ ಹರನೂ ಹರದನಾಗಿದ್ದಾನೆ.

ಈ ತತ್ವಕ್ಕನುಸರಿಸಿ ಸ್ವಾಮಿಗಳವರು ಒಂದು ಅಂಗಡಿಯನಿಕ್ಕಿದ್ದರು. ವ್ಯಾಪಾರಸಾಗುತ್ತಿತ್ತು. "ವ್ಯಾಪಾರಂ ದ್ರೋಹ ಚಿಂತನಂ" ಎಂದು ಜನರು ಹೇಳುವದನ್ನು ಸ್ವಾಮಿಗಳವರು ಒಪ್ಪುತ್ತಿರಲಿಲ್ಲ. ದ್ರೋಹ ಮಾಡುವುದು ವ್ಯಾಪಾರದ ಲಕ್ಷಣವೇ ಅಲ್ಲ. ಪರಸ್ಪರ ಹಿತಚಿಂತನೆಯೆ ವ್ಯಾಪಾರದ ಮೂಲೋದ್ದೇಶ. ಅದು ಹೊರಟು ಹೋಗಿ ಬರಬರುತ್ತ ದ್ರೋಹ ಚಿಂತನೆಯೆ ವ್ಯಾಪಾರದ ಮೂಲವೆಂಬ ದುರ್ಭಾವನೆಗೆ ಪ್ರವೃತ್ತಿಗೆ ಇಳಿದಿದೆ ಜಗತ್ತು ಎಂದು ಅಪ್ಪಣೆ ಕೊಡಿಸುತ್ತಿದ್ದರು. ಸಂಸ್ಥೆಯ ಅಂಗಡಿಯಲ್ಲಿ ಇದು ನಡೆಯ ಬಾರದೆಂಬುದು ಶ್ರೀಗಳವರ ಘನೋದ್ದೇಶವಾಗಿತ್ತು. ಅಂಗಡಿಯನ್ನು ಈಚಿಗೆ ಕಮೀಟಿಯವರು ತೆಗೆದು ಹಾಕಿದ್ದಾರೆ. ಸ್ವಾಮಿಗಳವರು ಬಾಗಲಕೋಟೆ ಯಲ್ಲಿ ಜೀನಿಂಗ್ ಪ್ರೆಸ್ ಒಂದನ್ನು ಸ್ಥಾಪಿಸಿದ್ದಾರೆ. ಅದು ಈವಾಗಲು ಸುವ್ಯವಸ್ಥಿತವಾಗಿ ಸಾಗುತ್ತಿದೆ. ಅದನ್ನು ಮ್ಯಾನೇಜರ್ ಶ್ರೀ ಒಳ್ಳಾರಿ ಬಸಪ್ಪನವರು ನಡೆಯಿಸಿಕೊಂಡು ಬರುತ್ತಿದ್ದಾರೆ. ಅದುವೆ ಈಗ ಶಿವಯೋಗ ಮಂದಿರದ ನಿಜವಾದ ಆಸ್ತಿ. ಅದರಿಂದಲೆ ಇದೀಗ ಶಿವಯೋಗಮಂದಿರ ಕಾರ್‍ಯನಿರ್ವಹಣ. ಅದರ ಆದಾಯದಿಂದಲೆ ಸಂಸ್ಥೆಯು ತನ್ನ ಸಾಲವನ್ನೆಲ್ಲ ತೀರಿಸಿಕೊಂಡು ಈಗ ಸರ್ವಸ್ವತಂತ್ರವಾಗಿ ನಿಂತಿದೆ. ಹೀಗೆ ಸ್ವಾಮಿಗಳವರಲ್ಲಿ ವ್ಯವಸಾಯ ವಾಣಿಜ್ಯ ರೂಪ ಔದ್ಯೋಗಿಕ ಪ್ರೇಮವಿತ್ತು.



# ದಾಸೋऽಹಂಭಾವ, ದಾಸೋऽಹ ಸೇವೆ

ಇವೆರಡು ಪರಸ್ಪರ ಪೂರಕವಾದವು, ಪ್ರೇರಕವಾದವು. ಒಂದು ಒಳವಸ್ತು. ಇನ್ನೊಂದು ಹೊರವಸ್ತು. ಎರಡು ಸೇರಿ ಒವಸ್ತು. ಒಂದನ್ನು ಬಿಟ್ಟು ಇನ್ನೊಂದು ಶೋಭಿಸುವಂತಿಲ್ಲ. ಇವೆರಡು ಸುಂದರ ಸಮನ್ವಯದ ಸೃಷ್ಟಿ. ವೀರಶೈವರ ವಿಶಿಷ್ಟ ಸೃಷ್ಟಿ.

ಈ ಸಂಪೂರ್ಣವಾದ ಸಾರವಾದ ವಿಚಾರವನ್ನು ತಿಳಿದು ತಮ್ಮಲ್ಲಿ ಇವೆರಡನ್ನು ಅಳವಡಿಸಿಕೊಂಡ ಮಹಾನುಭಾವರೆಂದರೆ ಬಸವಣ್ಣನವರ ನಂತರ ಹಾನಗಲ್ಲ ಕುಮಾರ ಸ್ವಾಮಿಗಳವರೊಬ್ಬರೆ! ದಾಸೋऽಹಂಭಾವದಿಂದಿರುವವರಲ್ಲಿ ದಾಸೋऽಹ ಸೇವೆಯ ಅಭಾವ. ದಾಸೋऽಹ ಸೇವೆಯನ್ನು ನಡೆಯಿಸುವವರಲ್ಲಿ ದಾಸೋऽಹಂಭಾವದ ಕೊರತೆ. ಎರಡನ್ನು ಸಮನ್ವಯವಾಗಿ ನಡೆಯಿಸಿಕೊಂಡವರು ಅತ್ಯಂತ ಅಪರೂಪ. ಇಲ್ಲೆಂದರೆ ಆಗದು ಅಪಲಾಪ.

'ಎನಗಿಂತ ಕಿರಿಯರಿಲ್ಲ' ಎಂಬ ಬಸವಣ್ಣನವರ ಜೀವಾಳದ ಅಮೃತೋಕ್ತಿಯನ್ನು ಚಾಚು ತಪ್ಪದೆ ತ್ರಿಕರಣಗಳಿಂದ ನಡಸಿಕೊಂಡು ಬಂದರು ಸ್ವಾಮಿಗಳವರು. ಅವರಿಗೆ ತಾವು ಹಿರಿಯರೆಂಬ ಭಾವನೆ ಕನಸಿನಲ್ಲಿಯೂ ಕಾಣಿಸಿಕೊಳ್ಳಲಿಲ್ಲ. ಅವರು ತಮ್ಮ ದಾಸೋಹಂಭಾವವನ್ನು ನುಡಿಗಿಂತ ಹೆಚ್ಚು ನಡೆಯಲ್ಲಿಯೆ ತೋರುತ್ತಿದ್ದರು. ಈ ವಿಷಯದಲ್ಲಿ ಅವರದು 'ಕ್ರಿಯಾ ಕೇವಲಮುತ್ತರಂ.'

ಶ್ರೀಗಳವರಿಗೆ ತಾವು ಸ್ವಾಮಿಗಳೆಂಬ ಸ್ವಾಭಿಮಾನವಿರಲಿಲ್ಲ. ಸಭೆ-ಸಂಸ್ಥೆಗಳ ಸ್ಥಾಪಕರೆಂಬ ಸ್ವಾಹಂಕಾರವಿರಲಿಲ್ಲ. ಒಮ್ಮೆ ಒಸ್ಕಾರಿಯಲ್ಲಿ ವೀರಶೈವ ಮಹಾಸಭೆಯು ಆರಂಭವಾಗುವ ಮೊದಲು ಅದಾರೋ ವಿಷಬೀಜ ಬಿತ್ತಿದರು. ಜರಗಬೇಕಾದ ಸಭೆಯ ಮೂಲಕ್ಕೆ ಕೊಡಲಿ ಏಟು ಹಾಕಿದರು. ಪರಸ್ಪರ ವೈಮನಸ್ಸಿನಿಂದ ಸಭೆಯೆ ನಿಲ್ಲುವ ಪ್ರಸಕ್ತಿ ಪ್ರಾಪ್ತವಾಯಿತು, ಆಗ ಸ್ವಾಮಿಗಳವರು ಪ್ರತಿಯೊಬ್ಬ ಗಣ್ಯ ಗೃಹಸ್ಥರ ಮನೆಗಳಿಗೆ ಪಾದಚಾರಿಗಳಾಗಿ ಪ್ರಮಾದದ ಹಂಗಿಲ್ಲದೆ ಹತ್ತಾರು ಸಲ, ನೂರಾರುಸಲ ತಿರುಗಾಡಿ ತಿಳಿಹೇಳಿ

ಎಲ್ಲರ ಹೃದಯಗಳನ್ನು ತಣಿಗೊಳಿಸಿದರು. ಸಭೆಯು ಸಾಂಗವಾಗಿ ಸಾಗುವಂತೆ ಮಾಡಿದರು. ಅವರ ದಾಸೋಹಂಭಾವಕ್ಕೆ ಇಂತಹ ಅನೇಕ ಉದಾಹರಣೆಗಳನ್ನು ಉದಹರಿಸಬಹುದು.

ತಾವು ಸ್ವತಃ ಸತ್ಪುರುಷರಾಗಿದ್ದರು ಶಿವಯೋಗಿಗಳಾಗಿದ್ದರು ತಮ್ಮಲ್ಲಿ ಆ ಭಾವನೆ ಅವರಿಗೆ ಎಳ್ಳಷ್ಟು ಇರಲಿಲ್ಲ. ಬೇರೆ ಬೇರೆ ಊರುಗಳಲ್ಲಿ ಯಾರಾದರು ಸತ್ಪುರುಷರಿದ್ದರೆ ಶಿವಯೋಗಿಗಳಿದ್ದರೆ ಅವರ ದರ್ಶನಕ್ಕೆ ದಯಮಾಡಿಸುತ್ತಿದ್ದರು. ಅಲ್ಲಿ ದಾಸೋಹಂಭಾವದಿಂದ ವರ್ತಿಸುತ್ತಿದ್ದರು. 'ವಿನಯಿತನಹುದರಿಂದುಪಚಾರಮುಂಟೆ?' ಎಂಬ ನುಡಿಯನ್ನು ನಾವಿರ ಪಾಲಿಗು ಸಾರ್ಥಕಗೊಳಿಸುತ್ತಿದ್ದರು.

ಸಾಧು ಮಾರ್ಗದಲ್ಲಿರುವವರನ್ನು ಕಂಡು ಅವರ ಸಂತೋಷ ಉಕ್ಕಿಬರುತ್ತಿತ್ತು. ಕುತೂಹಲ ಕೆರಳಿ ಬರುತ್ತಿತ್ತು. ಅವರನ್ನು ಕಾಣದೆ. ಅವರಿಗೆ ತೃಪ್ತಿಯಿರುತ್ತಿರಲಿಲ್ಲ. ವಿನಯದಿಂದ ಅವರ ಗುಣವರ್ಣನೆಯಿಂದ ನೆನವಿಸಿಂದ ಕಾಯವಾಙ್ಮನ ಸೇವೆಗಳನ್ನು ನಿರಪೇಕ್ಷೆಯಿಂದ ನಿರ್ಮಲ ಹೃದಯದಿಂದ ಸಮರ್ಪಿಸುತ್ತಿದ್ದರು.

ಒಮ್ಮೆ ಅಥಣಿ ಶಿವಯೋಗಿಗಳ ದರ್ಶನಕ್ಕೆ ದಯಮಾಡಿದ್ದರು. ಕಾಯ ಮನಸೇವೆಗಳೊಡನೆ ಎಂದಿಗೂ ಕಾಣಬರುವ ವಾಣಿ ಸೇವೆಯನ್ನು ಅವರಲ್ಲಿ ಸಲ್ಲಿಸಿದಾರೆ.

"ಮಂಗಳಾರತಿ ದೇವಗೆ ಶಿವಯೋಗಿಗೆ | ಕಂಗಳಾಲಯ ಸಂಗಗೆ ||
ಜಂಗಮಲಿಂಗ ಭೇದವ ಸ್ವಯ ಚರಪರ | ಇಂಗಿತವರುಪಿ
ದಂತಾಚರಿಸಿದ ಮಹಿಮಗೆ ||"

ಇದು ಅವರ ದರ್ಶನಕ್ಕೆ ದಯಮಾಡಿದಾಗ ಅವರ ಮೇಲೆ ಕಟ್ಟಿ ಹಾಡಿದ ಹಾಡಿಸಿದ ಮಂಗಳಾರತಿ. ಹೃದಯವುಕ್ಕಿದಾಗ ವಾಣಿಯು ಉಕ್ಕುವುದು ಅವರದೊಂದು ಸುಸ್ವಭಾವ. ಅದಕ್ಕೆ ಅವಕಾಶ ಕಲ್ಪಿಸಿಕೊಳ್ಳುತ್ತಿರಲಿಲ್ಲ. ಸಾಹಸದಿಂದ ಶಬ್ದಗಳನ್ನು ಸೆರೆಹಿಡಿದು ತಂದು ಪವಣಿಸುತ್ತಿರಲಿಲ್ಲ. ಹೃದಯದಿಂದ ಹುಟ್ಟಿ ಹೃದಯದಿಂದ ನಿರರ್ಗಳವಾಗಿ ಹೊರಹೊಮ್ಮುತ್ತಿತ್ತು. ಈ ಪದ್ಯವು

ಅಷ್ಟೆ. ಅದರಿಂದಾಗಿ ಅರ್ಥಪೂರ್ಣವಾಗಿದೆ. ಶಿವಯೋಗಿಗಳವರ ಜೀವನ ಸಾರವನ್ನು ಸೂರೆಗೊಂಡಿದೆ. ಪಲ್ಲವಿಯಲ್ಲಿ ಪಲ್ಲವಿಸಿದ ಸ್ವಯ ಚರ ಪರ ಜಂಗಮ ವಿವರಣೆಯನ್ನು ಮುಂದಿನ ಪದಗಳಲ್ಲಿ ಸ್ವಾರಸ್ಯವಾಗಿ ಸಹಜಾರ್ಥವಾಗಿ ಚಿತ್ರಿಸಿದಾರೆ.

ಮುಖಸ್ತುತಿಗಾಗಿ ಅವರು ಬಣ್ಣಿಸುತ್ತಿರಲಿಲ್ಲ. ಅದು ಅವರು ಹತ್ತಿರಕ್ಕೆ ಸುಳಿಯುತ್ತಿರಲಿಲ್ಲ. ಮುಖಸ್ತುತಿಗಾಗಿ ಯಾವಜ್ಜೀವವು ಎಲ್ಲಿಯು ಅವರು ಮನಸ್ಸು ಮಾಡಿದವರಲ್ಲ. ಇದು ತಮಗು ಇಷ್ಟವಿರಲಿಲ್ಲ. ಇನ್ನೊಬ್ಬರ ವಿಷಯದಲ್ಲಿಯು ತಾವು ಮಾಡುತ್ತಿರಲಿಲ್ಲ.

ಎಡೆಯೂರು ತೋಂಟದಾರ್ಯರ ಸೊನ್ನಲಾಪುರ ಸಿದ್ಧರಾಮೇಶ್ವರರ ಗದ್ದುಗೆಗಳ ದರ್ಶನಕ್ಕೆ ದಯಮಾಡಿದಾಗಲು ಸ್ವಾಮಿಗಳು ವಾಣಿಸೇವೆಯನ್ನು ಪದ್ಯಗಳ ಮುಖಾಂತರ ಸಲ್ಲಿಸಿದ್ದಾರೆ. ಇದರಿಂದಾಗಿ ಅವರು ಮುಖಸ್ತುತಿ ಪರರಲ್ಲ ಎಂಬುದು ವ್ಯಕ್ತವಾಗುತ್ತದೆ. ಸ್ವಾಮಿಗಳವರ ದಾಸೋಹಂಭಾವ ಆಳವಾದುದು. ಅಪಾರವಾದುದು. ಅದನ್ನು ಅಳೆಯಲು ನಮ್ಮಂಥವರಿಂದ ಸಾಧ್ಯವಿಲ್ಲ.

ಇನ್ನು ಅವರ ದಾಸೋಹ ಸೇವೆಗೆ ಶಿವಯೋಗ ಮಂದಿರವೆ ಒಂದು ದೊಡ್ಡ ನಿದರ್ಶನ. ಅಲ್ಲಿ ಒಂದು ದೊಡ್ಡ ದಾಸೋಹವನ್ನು ಏರ್ಪಡಿಸಿ ಅಲ್ಲಿನ ಕೆಲಸಗಾರರಲ್ಲದೆ ಪ್ರತಿ ದಿನವು ಪರಸ್ಥಳಗಳಿಂದ ಬರುತ್ತಿರುವ ನೂರಿನ್ನೂರು ಜನ ಅತಿಥಿ ಅಭ್ಯಾಗತರಿಗೆ ಪ್ರಸಾದ ವಿನಿಯೋಗ ಕೊರತೆಯಿಲ್ಲದೆ ನಡೆಯುತ್ತಿತ್ತು. ನಡೆಯುತ್ತಿದೆ. ಆ ದಾಸೋಹದಲ್ಲಿ ದೊಡ್ಡವರು ಚಿಕ್ಕವರು ಧನಿಕರು ದರಿದ್ರರುಎಂಬ ಭೇದಭಾವವಿಲ್ಲ. ಒಬ್ಬರಿಗೊಂದು ಇನ್ನೊಬ್ಬರಿಗೆ ಇನ್ನೊಂದು ಪ್ರಸಾದದ ಏರ್ಪಾಡಿಲ್ಲ. ಇದು ನಿಜವಾದ ದಾಸೋಹ ಸೇವೆ.



# ಸ್ವಯಂಸೇವಾ ಶಿಕ್ಷಣ

ಸ್ವಾಮಿಗಳವರ ಶಿಕ್ಷಣಗಳಲ್ಲೆಲ್ಲ ಸ್ವಯಂಸೇವಾ ಶಿಕ್ಷಣವು ಪ್ರಧಾನವಾದುದು, ಪ್ರಶಂಸನೀಯವಾದುದು. ಈ ವಿಷಯದಲ್ಲಿ ಸ್ವಾಮಿಗಳವರಿಗೆ ತುಂಬಾ ಪ್ರಸಕ್ತಿಯಿತ್ತು. ಪ್ರತಿವ್ಯಕ್ತಿಯು ತನ್ನ ಜೀವನಕ್ಕೆ ತನ್ನ ಕೆಲಸಕ್ಕೆ ಮತ್ತೊಬ್ಬರ ಹಂಗಿಗನಾಗಬಾರದು. ಹಂಗಿಗನಾಗುವವನು ಮುಂದರಿಯಲಾರನು. ಮುಂದರಿಯದಿರುವುದು ಮಾನವೀಯ ಲಕ್ಷಣವಲ್ಲ. ಸ್ವಯಂಸೇವೆಗೆ ಸಿದ್ಧವಾಗದವರು ಶಿಲಾವರ್ಗದವರು. ಅವರಿಂದ ಸಮಾಜ ಸೇವೆಯೊಂದೆಡೆಗಿರಲಿ ಸಂಬಂಧಿಗಳ ತಮ್ಮಬಾಳಿನ ಕಡೆಗೆ ತಮ್ಮ ಸೇವೆಯನ್ನೇ ಸಿತ್ತರಿಸಲಾರರು. ಅವರು ಭೂಭಾರರು.

ಶಿವಯೋಗ ಮಂದಿರದಲ್ಲಿರುವ ತಮ್ಮ ಶಿಷ್ಯರಿಗೆ ಮೊದಲು ಸ್ವಯಂಸೇವೆಯ ಶಿಕ್ಷಣವನ್ನು ಸ್ವಾಮಿಗಳವರು ಕೊಡುತ್ತಿದ್ದರು, ಕೊಡಿಸುತ್ತಿದ್ದರು. ಪ್ರತಿಯೊಬ್ಬರು ತಂತಮ್ಮ ಬಟ್ಟೆಗಳನ್ನು ತಾವೇ ತೊಳೆದುಕೊಳ್ಳಬೇಕು. ತಮ್ಮ ಶಿವಪೂಜೆಗೆ ಬೇಕಾದ ಹೂವು ಬಿಲ್ವ ನೀರು ಮುಂತಾದ ಸಲಕರಣೆಗಳನ್ನು ತಾವೇ ತಂದುಕೊಳ್ಳಬೇಕು. ತಾವುಂಡ ಎಡೆಬಟ್ಟಲನ್ನು ತಾವೇ ಬೆಳಗಬೇಕು. ತಮ್ಮ ಲಿಂಗದ ಕಂತೆಯನ್ನು ತಾವು ಧರಿಸುವ ಭಸ್ಮವನ್ನು ತಾವೇ ಮಾಡಿಕೊಳ್ಳಬೇಕು. ಸ್ವಾಮಿಗಳವರ ಅಪ್ಪಣೆಯ ಮೇರೆಗೆ ಕಂತೆ ಭಸ್ಮಗಳನ್ನೂ ಸಹ ನಾವೇ ಸ್ವತಃ ಮಾಡಿಕೊಂಡಿದ್ದೇವೆ. ಲಿಂಗಕ್ಕೆ ಕಂತೆಯನ್ನು ನಾವೇ ಧರಿಸಿಕೊಂಡಿದ್ದೇವೆ. ಅಲ್ಲದೆ ವರುಷಕ್ಕೊಮ್ಮೆ ಕೊಡುವ ಹೊಸ ಗಂಜಿಯ ಬಟ್ಟೆಗಳನ್ನು ಗಂಜಿಮಾಡುವ ಅಗಸರ ಕೆಲಸವನ್ನು ತಾವೇ ಮಾಡಿಕೊಳ್ಳಬೇಕು. ಮಾಡಿಕೊಳ್ಳಲು ಹಚ್ಚಿದ್ದರು. ನಾವೆಲ್ಲ ಮಾಡಿಕೊಂಡಿದ್ದೇವೆ. ಗಂಜಿ ಕಳೆವ ಕೆಲಸವನ್ನು ಮಡಿವಾಳರಿಗಿಂತಲು ಚನ್ನಾಗಿ ಮಾಡಬಲ್ಲೆವು. ತಮ್ಮ ಅಡುಗೆಯನ್ನು ತಾವೇ ಮಾಡಿಕೊಳ್ಳಬೇಕು. ಸ್ವಾಮಿಗಳಾಗುವವರಂತು ಮೊದಲು ತಮ್ಮ ಅಡುಗೆಯನ್ನು ತಾವೇ ಮಾಡಿಕೊಳ್ಳಲು ಕಲಿಯಬೇಕು. ಹೆಂಡರಿರುವದಿಲ್ಲ, ಸೇವಕರು ಸದಾ ಸಿಕ್ಕುವ ಸಂದರ್ಭವಿರುವದಿಲ್ಲ.

ಸಮಯ ಒದಗಿದರೆ ಉಪವಾಸ ಬೀಳಬೇಕಾದೀತು. ಒಂದು ದಿನ ಎರಡು ದಿನಗಳಾದರೆ ಇರಬಹುದು. ತಿಂಗಳ ಕಾಲ ಇರುವ ಸನ್ನಿವೇಶ ಬಂದರೆ ಗತಿಯೇನು ? ಎಂದು ಬೋಧಿಸುತ್ತಿದ್ದರು. ಅದರಂತೆ ಕೆಲವರು ಸ್ವಯಂ ಪಾಕವನ್ನು ಮಾಡಿಕೊಳ್ಳುತ್ತಿದ್ದರು. ಸಾಧ್ಯವಿಲ್ಲದವರಿಗೆ ಸೇವಕರಿಲ್ಲದ ವೇಳೆಯಲ್ಲಿ ಸ್ವಯಂಪಾಕಕ್ಕೆ ಹಚ್ಚುತ್ತಿದ್ದರು. ನಮಗೆಲ್ಲ ಚನ್ನಾಗಿ ಅಡಿಗೆ ಮಾಡಿ ಅಭ್ಯಾಸವಿದೆ. ಸೇವಕರಿಲ್ಲದಿದ್ದರು ಧೈರ್ಯಗೆಡುವಂತಿಲ್ಲ; ಉಪವಾಸ ಬೀಳುವಂತಿಲ್ಲ. ಇದೆಲ್ಲ ಸ್ವಾಮಿಗಳವರ ಸ್ವಯಂಸೇವಾ ಶಿಕ್ಷಣದ ಪ್ರಭಾವ.

ಸ್ವಾಮಿಗಳವರು ಶಿಕ್ಷಣ ಮಾತ್ರ ಕೊಡುತ್ತಿರಲಿಲ್ಲ. ತಾವು ಅದರಂತೆ ಆಚರಿಸಲು ಅತ್ಯಂತ ಉತ್ಸುಕರಾಗಿದ್ದರು. ಆದರೆ ಅವರು ಹಮ್ಮಿಕೊಂಡ ಆ ವಿಪುಲವಾದ ಕಾರ್ಯ ಕಲಾಪಗಳಲ್ಲಿ ಅವರಿಗೆ ಕೈಗೂಡುತ್ತಿರಲಿಲ್ಲ. ಅಲ್ಲಿಗು ಅವರು ಬಿಡುತ್ತಿರಲಿಲ್ಲ. ಸಮಯ ಬಂದಾಗ ಸ್ವಯಂ ಮಾಡುತ್ತಿದ್ದರು.

ಒಮ್ಮೆ ಕಣ್ಣಾರೆ ಕಂಡ ವಿಷಯವನ್ನಿಲ್ಲಿ ಹೇಳುತ್ತೇನೆ. ಒಂದು ದಿನ ಸ್ವಾಮಿಗಳವರ ಅಡಿಗೆಗೆ ಹೆಸರುಬೇಳೆಯಿರಲಿಲ್ಲ. ಒಡೆದುಕೊಡಲು ದಾಸೋಹದಲ್ಲಿ ಆಳುಗಳ ಅಭಾವವಾಗಿತ್ತು. ಈ ವಿಷಯ ಸ್ವಾಮಿಗಳವರಲ್ಲಿಗೆ ಹೋಗಿ ಮುಟ್ಟಿತು. ತಮ್ಮ ಸೇವೆಯಲ್ಲಿರುವವರನ್ನು ಕರೆದು ಇಷ್ಟೊಂದನ್ನು ಸ್ವಯಂ ಮಾಡಿಕೊಳ್ಳದವರು ಮುಂದೇನು ಮಾಡಬಲ್ಲಿರಿ. ಹೊರಗಿನವರು ಮಾಡಿಕೊಡುವುದಕ್ಕಿಂತ ನೀವೇ ಬೀಸಿಕೊಳ್ಳುವುದು ಲೇಸು. ಒಂದು ವೇಳೆ ಒಡೆವ ಕಲ್ಲು ತರಿಯಿಸಿ ಇಲ್ಲಿಯೆ ಹಾಕಿಸಿಕೊಳ್ಳಿರಿ ಎಂದು ಅಪ್ಪಣೆ ಮಾಡಿದರು. ಮರುದಿನ ಬೇಳೆ ಒಡೆಯಬೇಕು. ಯಾರು ಒಡೆಯಲು ಸಿದ್ಧರಾಗಿರಲಿಲ್ಲ. ಪರಸ್ಪರ ವಾದಮಾಡಿಕೊಂಡು ಸೇವೆಯವರು ಸ್ನಾನಾದಿಗಳಿಗೆ ಹೊರಟುಹೋದರು.

ಇದನ್ನೆಲ್ಲ ಕೇಳಿಕೊಂಡಿದ್ದ ಸ್ವಾಮಿಗಳವರು ಅವರೆಲ್ಲ ಬೀಸದೆ ಆಚೆ ಹೊರಟು ಹೋದನಂತರ ತಾವೇ ಹೆಸರುಕಾಳು ತೆಗೆದುಕೊಂಡು ಬೇಳೆಮಾಡಲು ಕುಳಿತುಕೊಂಡರು; ಕೊಂಚ ಬೀಸಿದರು. ಅದನ್ನು ಕಂಡ ಶಿಷ್ಯರು ಬಂದು ಬಿಡಿಸಿ ತಾವೇ ಒಡೆದುಕೊಂಡರು. ಸಂದರ್ಭವೊದಗಿದಲ್ಲಿ ಎಲ್ಲದಕ್ಕು ಸಿದ್ಧರಿದ್ದು ಶಿಕ್ಷಣ ಕೊಡುತ್ತಿದ್ದರು.

ಕೈಯಿಂದ ನೆಯ್ದ ಮಗ್ಗದಲ್ಲಿ ನೆಯ್ದ ದೇಶೀಯ ಬಟ್ಟೆಯ ಮೇಲೆ ಸ್ವಾಮಿಗಳವರಿಗೆ ಹೆಚ್ಚಿನ ಪ್ರೇಮವಿತ್ತು ; ತಾವು ಸ್ವತಃ ಖದ್ದರ ತೊಡುತ್ತಿದ್ದುದಲ್ಲದೆ ಶಿಷ್ಯರಿಗೆಲ್ಲರಿಗು ಖದ್ದರ ಬಟ್ಟೆಯ ವ್ಯವಸ್ಥೆಮಾಡಿಸಿದ್ದರು. ಸಾಲದ್ದಕ್ಕೆ ನೂಲು ತೆಗೆಯುವ ಕೆಲಸವನ್ನು ಶಿಷ್ಯರಿಗೆಲ್ಲ ಪ್ರಾರಂಭಿಸಿದ್ದರು. ನಿಮ್ಮ ನಿಮ್ಮ ಬಟ್ಟೆಗಳಿಗಾಗುವಷ್ಟು ನೂಲನ್ನು ನೀವೇ ತೆಗೆಯಬೇಕೆಂದು ಕಟ್ಟಪ್ಪಣೆ ಮಾಡಿ ತಲೆಗೊಂದರಂತೆ 'ತಕಲಿ'ಯನ್ನು ತರಿಸಿ ಕೊಡಿಸಿದ್ದರು. ಕೆಲವು ದಿನ ನಾವೆಲ್ಲ ತಕಲಿ ತಿರುವಿದೇವೆ; ನೂಲು ತೆಗೆದಿದೇವೆ.



# ಶಿಷ್ಯಸಂಪತ್ತು

ಕುಮಾರ ಸ್ವಾಮಿಗಳವರ ಶಿಷ್ಯಸಂಪತ್ತು ಅಷ್ಟಿಷ್ಟಲ್ಲ, ಅಗಣಿತವಾಗಿದೆ. ಇಂದಿಗೆ ೪೧ ವರುಷಗಳಿಂದ ನಡೆಯುತ್ತಿರುವ ಶಿವಯೋಗಮಂದಿರದಲ್ಲಿಯೆ ಸಾವಿರಾರು ಮಂದಿ ಶಿಷ್ಯರಾಗಿದಾರೆ. ಆಚೆ ಉತ್ತರ ಕರ್ನಾಟಕದಲ್ಲಿ ಊರು ಊರಿನಲ್ಲಿ ಶಿಷ್ಯರಾಗಿದಾರೆ. ಸಮಾಜದ ಪ್ರಮುಖರನೇಕರು ಸ್ವಾಮಿಗಳವರಲ್ಲಿ ಶಿಷ್ಯತ್ವವನ್ನು ವಹಿಸಿದಾರೆ. ಆದರೆ ಅವರೆಲ್ಲರ ಹೆಸರುಗಳನ್ನು ಇಲ್ಲಿ ಹೆಸರಿಸಲು ಸಾಧ್ಯವಿಲ್ಲ. ಸ್ವಾಮಿಗಳವರಲ್ಲಿಯೂ ಸಮಾಜದಲ್ಲಿಯೂ ಪ್ರಮುಖರಾದವರ ಸಂಕ್ಷಿಪ್ತ ಪರಿಚಯ ಇಲ್ಲಿ ಆವಶ್ಯಕ.

1. ಶ್ರೀ ಜಗದ್ಗುರು ಗುರುಸಿದ್ಧರಾಜೇಂದ್ರಸ್ವಾಮಿಗಳವರು. ಇವರು ಹುಬ್ಬಳ್ಳಿಯಲ್ಲಿ ಪ್ರಸಿದ್ಧವಾಗಿರುವ ಮೂರುಸಾವಿರ ಮಠದ ಅಧಿಪತಿಗಳು. ವಿರಕ್ತಾಶ್ರಮದ ಕುಮಾರ ಸಮಯ ಮೂಲ ಪೀಠದವರು. ಈ ಮಠಕ್ಕೆ. ಹಾನಗಲ್ಲ ಸ್ವಾಮಿಗಳವರೆ ಇವರನ್ನು ನಿಯೋಜಿಸಿದರು. ಇವರು ಮೊದಲು ಕೊಣ್ಣೂರು ಮಠಾಧಿಪತಿಗಳು. ಶಿವಯೋಗಮಂದಿರದಲ್ಲಿದ್ದು ಓದಿದವರು ಮಂದಿರದ ಅಧ್ಯಕ್ಷತೆಯನ್ನು ವಹಿಸಿ ಅನೇಕ ದಿನ ಕೆಲಸಮಾಡಿದಾರೆ. ತಮ್ಮ ಮಠದಲ್ಲಿಯೆ ಒಂದು ಸಂಸ್ಕೃತ ಪಾಠಶಾಲೆಯನ್ನು ಉಚಿತ ಭೋಜನಾಲಯವನ್ನು ಸ್ಥಾಪಿಸಿ ಕಲಕತ್ತಾ ಯೂನಿವರ್ಸಿಟಿಯ ಸಂಸ್ಕೃತ ಪರೀಕ್ಷೆಗಳನ್ನು ತಮ್ಮ ಪಾಠಶಾಲೆಯಲ್ಲಿಯೆ ನೆರವೇರುವಂತೆ ಮಾಡಿಸಿದಾರೆ. ಅಲ್ಲದೆ ಅದೇ ಹುಬ್ಬಳ್ಳಿಯಲ್ಲಿ ಔದ್ಯೋಗಿಕ ಶಿಕ್ಷಣ ಕಾಲೇಜ ಸ್ಥಾಪನೆಗಾಗಿ ಒಂದು ಲಕ್ಷ ರೂಪಾಯಿಗಳನ್ನು ಉದಾರವಾಗಿ ಆಶೀರ್ವದಿಸಿದಾರೆ.

2. ನವಿಲುಗುಂದ ಗವಿಮಠದ ಶ್ರೀ. ಮ. ನಿ. ಬಸವಲಿಂಗಸ್ವಾಮಿಗಳವರು. ಇವರು ಶಿವಯೋಗಮಂದಿರದಲ್ಲಿದ್ದು ಓದಿ ವಿದ್ಯಾವಿಚಕ್ಷಣರಾಗಿ ಸ್ವಾಮಿಗಳವರ ಶಿಷ್ಯರಲ್ಲಿ ಅಗ್ರಗಣ್ಯರಾಗಿದಾರೆ. ಅವರ ಕೃಪೆಗೆ ಪಾತ್ರರಾಗಿದಾರೆ. ಮಂದಿರದ ಉಪಾಧ್ಯಕ್ಷರಾಗಿ ಬಹುಕಾಲ ಕೆಲಸ ಮಾಡಿದಾರೆ. ಸ್ವಾಮಿಗಳವರು ಇದ್ದಾಗಳೆ ಗ್ರಂಥ ಬರೆವ ಶಕ್ತಿಯನ್ನು ಗಳಿಸಿದ್ದರು. ಈಚೆಗೆ

ಸಾಹಿತ್ಯಕ್ಷೇತ್ರದಲ್ಲಿ ಹೆಚ್ಚು ದುಡಿದಿದ್ದಾರೆ, ತುಂಬಾ ಹೆಸರುಗಳಿಸಿದಾರೆ. ಸಂಘ ಸಂಸ್ಥೆಗಳಲ್ಲಿ ಅಂಗವಹಿಸಿದಾರೆ. ಸರ್ವಧರ್ಮ ಸಮನ್ವಯದಂತಹ ಮಹತ್ಕಾರ್ಯವನು ಕೈಗೊಂಡಿದಾರೆ. ಆಯಾಮತದ ವಿದ್ಯಾವಂತರನ್ನು ಪ್ರತಿವರ್ಷ ಕರೆಯಿಸಿ ಮಠದಲ್ಲಿ ಭಾಷಣಮಾಡಿಸುತ್ತಾರೆ. ಎಲ್ಲ ತತ್ವಗಳ ಸಮನ್ವಯ ಪ್ರಚಾರ ಪ್ರಾರಂಭಿಸಿದಾರೆ. ಕೆಲವು ದಿನಗಳ ಹಿಂದೆ ಬಾಗಲಕೋಟೆಯಲ್ಲಿ ಆದ ಬಸವೇಶ್ವರ ಕಾಲೇಜ ಸ್ಥಾಪನೆಗೆ ಮೂಲಕರ್ತರಾಗಿ ನಿಂತು ಕೆಲಸಮಾಡಿದಾರೆ. ಕಾಸುಕೂಡಿಸಿದಾರೆ. ಕೀರ್ತಿ ಪಡೆದಿದಾರೆ. ಹೀಗೆ ಇವರ ಕಾರ್ಯಕ್ಷೇತ್ರ ಅನೇಕ ಮುಖವಾಗಿದೆ. ಆಧುನಿಕ ಸಾಹಿತಿಗಳು ವಿದ್ವಾಂಸರು ಪ್ರಮುಖರು ಇವರಲ್ಲಿ ತುಂಬಾ ಶ್ರದ್ಧೆವಿಶ್ವಾಸವುಳ್ಳವರಾಗಿದಾರೆ.

3. ಹಾಲಕೆರೆಯ ಇಂದಿನ ಶ್ರೀ. ಮ. ನಿ. ಅನ್ನದಾನಸ್ವಾಮಿಗಳವರು ಇವರು ಶಿವಯೋಗ ಮಂದಿರದಲ್ಲಿದ್ದು ಶಿಕ್ಷಣ ಪಡೆದವರಲ್ಲದಿದ್ದರು ಹಾನಗಲ್ಲ ಸ್ವಾಮಿಗಳವರಿಂದ ಹೆಚ್ಚು ಉಪಕೃತರಾಗಿದಾರೆ. ಸ್ವಾಮಿಗಳವರು ಲಿಂಗೈಕ್ಯರಾದ ಮೇಲೆ ಶಿವಯೋಗಮಂದಿರದ ಅಧ್ಯಕ್ಷತೆಯನ್ನು ವಹಿಸಿ ಅಮೋಘವಾದ ಸೇವೆ ಸಲ್ಲಿಸಿದಾರೆ. ತಪೋನಿಷ್ಠರು. ಭವನನಿರ್ಮಾಣ ಚಿತ್ರಬರವಣಿಗೆ ಕಲೆಗಳಲ್ಲಿ ನಿಷ್ಣಾತರು. ಮೊನ್ನೆ ಮೊನ್ನೆ ಗದಗಿನಲ್ಲಿ ಜ್ಞಾನದಾಸೋಹವನ್ನು ಕರೆದು ತಿಂಗಳುಗಟ್ಟಲೆ ಬಹು ವಿಜೃಂಭಣೆಯಿಂದ ಜರಗಿಸಿದರು. ದೊಡ್ಡ ದೊಡ್ಡ ವಿದ್ವಾಂಸರನ್ನು ಶಿವಾನುಭವಿಗಳನ್ನು ಕರೆಯಿಸಿದ್ದರು.

4. ಬಿದರೀ ಪಟ್ಟಾಧ್ಯಕ್ಷರವರು. ಇವರ ನಿಜವಾದ ಹೆಸರು ಬಿದರೀ ಪ್ರಭುಕುಮಾರ ಪಟ್ಟಾಧ್ಯಕ್ಷರು. ಇವರು ಸ್ವಾಮಿಗಳವರ ಶಿಷ್ಯರು. ಬಹು ಕಾಲ ಶಿವಯೋಗ ಮಂದಿರ ನಿವಾಸಿಗಳು. ಯೋಗದಲ್ಲಿ ಅದ್ವಿತೀಯರು. ಸಂಸ್ಥೆಯಲ್ಲಿ ಯೋಗ ಶಿಕ್ಷಣಾಚಾರ್ಯರಾಗಿದ್ದರು. ಉತ್ತರ ಭಾರತ ಸಂಚಾರ ಮಾಡಿ ಅಲ್ಲಿನ ಯೋಗಿಗಳಿಂದ 'ಯೋಗಿರಾಜ' ಎಂಬ ಬಿರುದು ಪಡೆದಿದ್ದರು. ಪ್ಲಾವಿನಿ ವಜ್ರೋಳಿ ಮುಂತಾದ ಮೇಲಿನ ಯೋಗಗಳಲ್ಲಿ ಸಂಪೂರ್ಣಸಿದ್ಧಿ ಇವರಿಗಿತ್ತು. ಶಾಂತರು ಸರಳಹೃದಯರು. ಸಾಧುಶೀಲರು. ಶಿವಪೂಜಾ ಧುರಂಧರರು. ನೀರ ಮೇಲೆ ಆಸನ ಹಾಕಿ ಎಷ್ಟುಹೊತ್ತಾದರು ತೇಲುತ್ತಿದ್ದರು ನೆಲದ ಮೇಲೆ ಆಸನ ಹಾಕಿ ಹನ್ನೆರಡು ಗಂಟೆ ಹೊತ್ತಾದರು ಸುಖವಾಗಿ

ಸ್ಥಿರವಾಗಿ ಕುಳಿತಿರುತ್ತಿದ್ದರು. ಅನೇಕರಿಗೆ ದೀಕ್ಷಾ ಗುರುಗಳು. ಲಿಂಗೈಕ್ಯ ರಾಗಿವಾರೆ.

5. ನಖರಾಯ ಪಟ್ಟಣದ ಪಟ್ಟಾಧ್ಯಕ್ಷರಾದ ಶ್ರೀ. ಮ. ಲಿಂ. ಚ. ಸದಾಶಿವ ಶಿವಾಚಾರ್ಯಸ್ವಾಮಿಗಳವರು. ಇವರು ಶಿವಯೋಗಮಂದಿರದಲ್ಲಿ ಸಂಸ್ಕೃತ ಶಿಕ್ಷಣಪಡೆದು ಸ್ವಾಮಿಗಳವರ ಕೃಪೆಗೆ ಪಾತ್ರರಾದವರು. ವಿದ್ಯೆಯಲ್ಲಿ ಯೋಗದಲ್ಲಿ ಶೀಲಾಚರಣೆಯಲ್ಲಿ ಶಿವಪೂಜೆಯಲ್ಲಿ ನಿಷ್ಣಾತರು. ಕನ್ನಡದಲ್ಲಿ ಕೆಲವು ಗ್ರಂಥಗಳನ್ನು ಬರೆದಿದಾರೆ. ಹಾನಗಲ್ಲ ಸ್ವಾಮಿಗಳವರ ಮೇಲೆ ಒಂದು ರಗಳೆಯ ಕಾವ್ಯವನ್ನು ಅವರ ನಾಮಾಂಕಿತವಿಟ್ಟು ಒಂದು ವಚನವನ್ನು ರಚಿಸಿದಾರೆ. ಸಂಸ್ಕೃತದಲ್ಲಿ 'ಕೈವಲ್ಯೋಪನಿಷದ್ಭಾಷ್ಯ' ಬರೆದಿದಾರೆ. ಅಚ್ಚಾಗು ತಿದೆ. ಇದು ಒಂದು ಇವರ ವೈಶಿಷ್ಟ್ಯ. ನಮಗೆಲ್ಲ ಹೆಮ್ಮೆ. ಇದನ್ನು ಬರೆದು ಇವರು ನಿಜವಾಗಿ ಆಚಾರ್ಯ ಪದವಿಗೇರಿದಾರೆ. ಗಿರಿಯಾಪುರದಲ್ಲಿ ಶ್ರೀಗುರು ಕುಮಾರಾಶ್ರಮವನ್ನು ಸ್ಥಾಪಿಸಿದಾರೆ. ಮೊನ್ನೆ ಮೊನ್ನೆ ಮಾಘ ಮಾಸದಲ್ಲಿ ಅದೇ ಆಶ್ರಮದಲ್ಲಿ 'ಶಿವಾನುಭವ ಸಪ್ತಾಹ'ವನ್ನು ಸ್ವಾಮಿಗಳವರ ಸ್ಮಾರಕಕ್ಕಾಗಿ ಕೂಡಿಸಿ ಒಳ್ಳೆ ವೈಭವದಿಂದ ವ್ಯವಸ್ಥೆಯಿಂದ ನೆರವೇರಿಸಿದ ಪುಣ್ಯ ಪುರುಷರು. ಈ ಕೃತಿಯು ಸಹ ಅವರ ಪ್ರೇರಣೆಯ ಫಲ. ಅವರ ಸಪ್ತಾಹ ಸ್ಮಾರಕಚಿನ್ಹೆ.

6. ಶ್ರೀ. ಮ. ನಿ. ನಾಗನೂರು ಶಿವಬಸವ ಶ್ರೀಗಳವರು. ಇವರು ಶಿವ ಯೋಗಮಂದಿರದಲ್ಲಿದ್ದು ಸ್ವಾಮಿಗಳವರಿಗೆ ಶಿಷ್ಯರಾದವರು ಹೆಚ್ಚು ವಿದ್ಯಾಭ್ಯಾಸ ಮಾಡದಿದ್ದರು ವಿದ್ಯಾರ್ಥಿಗಳ ಪೋಷಣದಂತಹ ಮಹತ್ಕಾರ್ಯವನ್ನು ಕೈಗೊಂಡಿ ದಾರೆ. ಬೆಳಗಾಂವ ಜಿಲ್ಲಾ ಕೇಂದ್ರದಲ್ಲಿ ಒಂದು ವಿದ್ಯಾರ್ಥಿನಿಲಯ ಸ್ಥಾಪಿಸಿ ಬಹುದಿನಗಳಿಂದ ಬಹುರೂಪದಲ್ಲಿ ಶ್ರಮಿಸಿ ಓದುವ ವಿದ್ಯಾರ್ಥಿಗಳಿಗೆ ಊಟ ವಸತಿಗಳನ್ನು ಏರ್ಪಡಿಸಿದ್ದಾರೆ. ಈಗ ಅದು ಬೃಹದ್ರೂಪದಲ್ಲಿ ವೈದಾಳಿ ಕೆಲಸ ಮಾಡುತ್ತಿದೆ. ಇದೀಗ ಇವರು ಶಿವಯೋಗಮಂದಿರ ಉಪಾಧ್ಯಕ್ಷರಾಗಿ ಕೆಲಸ ಮಾಡುತ್ತಿದಾರೆ.

7. ಕೊಪ್ಪದ ಶ್ರೀ. ಮ. ನಿ. ಮಹಾಂತ ಶ್ರೀಗಳವರು. ಈಗ ಇಳಕಲ್ಲ ಮಠಾಧಿಕಾರಿಗಳಾಗಿದಾರೆ. ಇವರು ಶಿವಯೋಗ ಮಂದಿರದಲ್ಲಿದ್ದು ಶಿಕ್ಷಣ ಪಡೆದು ಉತ್ತಮ ವ್ಯಾಖ್ಯಾತೃಗಳಾಗಿದಾರೆ. ಜನಮನಾಕರ್ಷಣಶಕ್ತಿ ಇವರಲ್ಲಿ

ಚನ್ನಾಗಿದೆ. ವಾಣಿಪ್ರಸನ್ನತೆಯಿದೆ. ಲೀಲಾಜಾಲವಾಗಿ ರುಚಿಕರವಾಗಿ ಮಾತಾಡಬಲ್ಲರು. ಸಭಿಕರನ್ನು ನಗೆಗಡಲಲ್ಲಿ ಮುಳುಗಿಸಿ ತೇಲಿಸಬಲ್ಲರು. ಸ್ವಾಮಿಗಳವರ ಅಪ್ಪಣೆಯ ಮೇರೆಗೆ ನಾಡಿನ ಅನೇಕ ಭಾಗಗಳಲ್ಲಿ ಸಂಚರಿಸಿ ಧರ್ಮ ನೀತಿಗಳನ್ನು ಪೌರಾಣಿಕ ಕಥಾಜೋಡಣೆಯಿಂದ ಮನ ಮೆಚ್ಚುವಂತೆ ಬೋಧಿಸಿ ಜನ ಜಾಗೃತಿಯ ಮಾಡಿ ಶಿವಯೋಗಮಂದಿರ ಕೀರ್ತಿ ಬೆಳಗಿಸಿ ಕೃತಾರ್ಥರಾಗಿದಾರೆ. ಇಳಕಲ್ಲ ಮಠಾಧಿಪತಿಗಳಾದ ಮೇಲೆ ಹುನಗುಂದ ದಲ್ಲಿ ಒಂದು ಹೈಸ್ಕೂಲನ್ನು ಸ್ಥಾಪಿಸಿ ಉಚಿತ ಭೋಜನಾಲಯವನ್ನು ಏರ್ಪಡಿಸಿ ಸತ್ಕಾರ್ಯಮಾಡುತ್ತಿದ್ದಾರೆ. ಅಲ್ಲಿನ ಮಹಾಜನಗಳ ಪ್ರೇಮಾ ದರಗಳಗೆ ಪಾತ್ರರಾಗಿದಾರೆ. ಇವರು ವಿದ್ಯಾಗುಣ ಪಕ್ಷಪಾತಿಗಳು. ನಿಗರ್ವಿ ಗಳು. ಬೋಧಾಸಕ್ತರು. ಸಂತಸಚಿತ್ತರು. ಪ್ರೋತ್ಸಾಹಿಗಳು.

8. ಶ್ರೀ. ಮ. ನಿ. ಜಡೆಸ್ವಾಮಿಗಳೆಂಬವರೊಬ್ಬರು. ಇವರು ಅನೇಕ ಕಾಲ ಶಿವಯೋಗ ಮಂದಿರದಲ್ಲಿದ್ದು ಸಂಸ್ಥೆಯ ಸೇವೆ ಸಲ್ಲಿಸಿದ್ದಾರೆ. ಅನುಷ್ಠಾನ ಮಾಡುವವರಲ್ಲಿ ಸ್ವಾಮಿಗಳವರಿಗೆ ಅಚ್ಚು ಮೆಚ್ಚಿಗೆಯವರಾಗಿದ್ದರು. ಕಲ್ಯಾಣದಲ್ಲಿರುವ ಮುಖ್ಯವಾದ ಶೂನ್ಯಸಿಂಹಾಸನ ಮಠಕ್ಕೆ ಅಧಿಪತಿಗಳಾಗಿ ದಾರೆ. ಪ್ರಭುಸ್ವಾಮಿಗಳಾಗಿದಾರೆ. ಸದ್ಯಃ ಬೀದರಿನಲ್ಲಿದ್ದು ವಿದ್ಯಾ ಪ್ರೋತ್ಸಾಹ ಸೇವೆ ಸಲ್ಲಿಸುತ್ತಿದಾರೆ.

9. ಈ ಕೃತಿಕರ್ತರ ಪರಿಚಯ ಅನಾವಶ್ಯಕವಾದರು ಕ್ರಮಪ್ರಾಪ್ತವಾಗಿ ಎರಡು ಮಾತನ್ನು ಹೇಳಿದರೆ ಹೆಚ್ಚೆನಿಸಲಾರದು; ಆತ್ಮಸ್ತುತಿಯೆನಿಸಲಾರದು. ಶ್ರೀ ಜಗದ್ಗುರು ಸಿಡುಮಾಮಿಡಿ ಶ್ರೀಶೈಲ ಪೀಠವು ಪಂಚಪೀಠಗಳಲ್ಲೊಂದು. ಶ್ರೀಶೈಲ ಸೂರ್ಯ ಸಿಂಹಾಸನ ಪೀಠ. ಪ್ರಾಚೀನ ಪೀಠ. ಪ್ರಭಾವಯುತ ಪೀಠ. ಸ್ವಾಮಿಗಳವರ ಕೃಪೆಯ ಬಲದಿಂದ ಇವರ ಅಧಿಕಾರ ಪ್ರಾಪ್ತಿ ಯಾಗಿದೆ. ಹಿಂದಿದ್ದ ಮೈಸೂರು ಮಹಾರಾಜರವರ ಆರ್ಡರ ಪ್ರಾಕಾರ ಕೋಲಾರ ಜಿಲ್ಲಾಧಿಕಾರಿಗಳು ಸ್ವತಃ ನಿಂತು ಪೀಠದ ಪಟ್ಟಾಧಿಕಾರವನ್ನು ನೆರವೇರಿಸಿದರು. ಶಿವಯೋಗಮಂದಿರ ಶಿಕ್ಷಣ ಪಡೆದವರಲ್ಲಿ ನಾವೊಬ್ಬರು. ಅಷ್ಟಿಷ್ಟು ಕನ್ನಡ ಸಾಹಿತ್ಯ ಸೇವೆ ನಡೆಯುತ್ತಿದೆಯೆಂಬುದಕ್ಕೆ ಈ ಕೃತಿ ಯೊಂದು ಸಾಕ್ಷಿ. ಇದು ಹನ್ನೆರಡನೆಯ ಕೃತಿ. ಗೋರಿಬಿದನೂರಿನಲ್ಲಿ ಕೋಮು ಪಂಥಗಳ ಭಾವನೆಯಿಲ್ಲದೆ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಲಾಗಿದೆ.

ಎರಡು ವರುಷಗಳಿಂದ ನಡೆಯುತಲಿದೆ. ಗೂಳೂರಿನ ಮಾಧ್ಯಮಿಕ ಶಾಲೆಯ ಕಟ್ಟಡಕ್ಕೆ ಹೀರದಿಂದ ಧನಸಹಾಯ ಮಾಡಲಾಗಿದೆ. ಕರ್ನಾಟಕ ಏಕೀಕರಣ ವಿಷಯದಲ್ಲಿ ಭಾಷಣಗಳ ಮೂಲಕ ಸೇವೆಸಲ್ಲಿದೆ.

10. ಭಾಲ್ಕಿ ಶ್ರೀ. ಮ. ಲಿಂ. ಚ. ಚನ್ನಬಸವ ಪಟ್ಟಾಧ್ಯಕ್ಷರು. ಇವರು ಶಿವಯೋಗ ಮಂದಿರದಲ್ಲಿದ್ದು ಶಿಕ್ಷಣವಡೆದವರು. ಸ್ವಾಮಿಗಳವರ ಸೇವೆಯನ್ನು ಮಾಡಿ ಧನ್ಯರಾದವರು. ಇವರು ಹೈದರಾಬಾದ ಪ್ರಾಂತ್ಯದಲ್ಲಿ ಗುಲ್ಬುರ್ಗಾಜಿಲ್ಲೆಯ ಒಂದೂರಿನಲ್ಲಿ ವಿದ್ಯಾರ್ಥಿನಿಲಯ ಸ್ಥಾಪಿಸಿ ಆ ಭಾಗದ ವಿದ್ಯಾರ್ಥಿಗಳಿಗೆ ತುಂಬಾ ಸಹಾಯ ಮಾಡಿದಾರೆ; ಸತ್ಕಾರ್ಯ ನಿರತ ರಾಗಿದಾರೆ.

ಇವಲ್ಲದೆ ಶ್ರೀ ವ್ಯಾಕರಣಾಳ ಪಟ್ಟಾಧ್ಯಕ್ಷರು, ಕೆಳದಿ ಪಟ್ಟಾಧ್ಯಕ್ಷರು ನೂಡಿ ಪಟ್ಟಾಧ್ಯಕ್ಷರು ಶ್ರೀ ಸವದತ್ತಿ ಅಪ್ಪಯ್ಯ ಸ್ವಾಮಿಗಳವರು ಬಾಗಲ ಕೋಟೆ ಕರವೀರ ಮಠದ ಶ್ರೀಗಳು ನೇರಡುಗುಂಭ ಶ್ರೀಗಳು ಮುಖ್ಯ ಶಿಷ್ಯ ಶಿಷ್ಯರಾಗಿದ್ದರು.

11. ಶಿರೂರಿನ ಶ್ರೀ ಪಾಗಿ ಶಿವಬಸಪ್ಪ ಮಾಸ್ತರರು. ಇವರು ಸಂಸ್ಥೆಯ ಸ್ಥಾಪನೆಯ ಮೊದಲ್ಗೊಂಡು ಇಂದಿನ ವರೆವಿಗು ಸಂಸ್ಥೆಯ ಮ್ಯಾನೇಜರರಾಗಿ ಅಮೋಘವಾದ ಸೇವೆ ಸಲ್ಲಿಸಿದ್ದಾರೆ, ಸಲ್ಲಿಸುತ್ತಿದ್ದಾರೆ. ಮನೆ ಬಾಳಿನ ಮಮತೆಯನ್ನು ಬಿಟ್ಟು ಔದಾರ್ಯದಿಂದ ಔತ್ಸುಕ್ಯದಿಂದ ಭಕ್ತಿಪ್ರಸಕ್ತಿಯಿಂದ ಸಂಸ್ಥೆಯ ಸೇವೆಗೆ ತಮ್ಮ ಆಯುಷ್ಯವನ್ನೆ ಮುಡಿಪಿಟ್ಟು ದುಡಿದು ಧನ್ಯರಾದರು. ಅಪರ್ಜೀವಿಗಳಾದರು ಸ್ವಾಮಿಗಳವರ ಸತ್ಕೃಪೆಗೆ ಪಾತ್ರರಾದರು. ಇವರ ತ್ಯಾಗ, ಸತ್ಯಸಂಧತೆ, ಸ್ವಾಮಿಗಳವರಲ್ಲಿದ್ದ ಗಾಢಭಕ್ತಿ, ನಿಯಮನಿಷ್ಠೆ, ವಚನ ಪರಿ ಪಾಲನಾವೃತ್ತಿ, ಕಷ್ಟಸಹಿಷ್ಣುತೆಮುಂತಾದ ಗುಣಗಳು ಸುತ್ತ್ಯಾರ್ಹವಾದವು. ಈಗ ತೀರ ಅಪರವಯಸ್ಸಿನವರಾಗಿ ಸಂಸ್ಥೆಯಲ್ಲಿಯೆ ತಂಗಿದಾರೆ.

12. ಸಂಗೀತಗುರುರು : ಶ್ರೀ ಪಂಚಾಕ್ಷರಿ ಗವಾಯಿಗಳವರು. ಇವರು ಸ್ವಾಮಿಗಳವರ ಕೃಪೆಯಲ್ಲಿಯೆ ಬೆಳೆದು ಸಂಗೀತಾಭ್ಯಾಸ ಮಾಡಿ ನಂತರ ಒಂದು ಸಂಗೀತಪಾಠಶಾಲೆಯನ್ನು ಸ್ಥಾಪಿಸಿದರು. ಸ್ವಾಮಿಗಳವರ ಕೃಪೆಯಿಂದ ಗಾಯನ ನಯನ ಪಡೆದು ಅನೇಕ ಕುರುಡ ಮಕ್ಕಳಿಗೆ ಗಾನನೇತ್ರಗಳನ್ನು ತಂದುಕೊಟ್ಟರು. ಅವರಲ್ಲಿ ಶ್ರೀ ಪುಟ್ಟಯ್ಯನವರು ಅಗ್ರಗಣ್ಯರು. ಇವರು

ಈಗ ಅದೇ ಪಾಠಶಾಲೆಯನ್ನು ತಮ್ಮ ಗಾಯನ ಕವನ ಕಲಾಶಕ್ತಿಗಳಿಂದ ಸುರಕ್ಷಿತವಾಗಿ ಮುಂದುವರಿಸಿದ್ದಾರೆ. ಗದಗಿನಲ್ಲಿ ಕುಮಾರಾಶ್ರಮವೊಂದನ್ನು ಸ್ಥಾಪಿಸಿ ಅಲ್ಲಿ ಗಾಯನ ಶಿಕ್ಷಣವನ್ನು ನಡೆಯಿಸಿದ್ದಾರೆ. ಅಲ್ಲದೆ ಕುರುಡರಿಗೆ ಆಧುನಿಕ ವಿಜ್ಞಾನ ಪದ್ಧತಿಯನ್ನನುಸರಿಸಿ ಅಕ್ಷರಾಭ್ಯಾಸವನ್ನು ಆರಂಭಿಸಿ ಅದರಲ್ಲಿಯು ಜಯ ಶೀಲರಾಗಿದ್ದಾರೆ. ಒಟ್ಟಿನಲ್ಲಿ ಕುಮಾರೇಶ್ವರನ ಕೃಪೆಯಿಂದ ಕನ್ನಡನಾಡಿನ ಕುರುಡ ಮಕ್ಕಳನೇಕರು ಗಾನ - ವಿದ್ಯೆಗಳನ್ನು ಕಲಿತು ಸ್ವತಂತ್ರಜೀವಿಗಳಾಗಿ ಸಾಂಸ್ಕೃತಿಕ ಜೀವಿಗಳಾಗಿ ಬದುಕುವಂತಾಗಿದೆ, ಬೆಳಗುವಂತಾಗಿದೆ.

**13.** ಕೀರ್ತನಕಾರರು : ೧ ದೇವಲಾಪುರದ ಶ್ರೀ ಬಸವಲಿಂಗ ಶಾಸ್ತ್ರಿಗಳವರು. ಇವರು ಸ್ವಾಮಿಗಳವರ ಆಶೀರ್ವಾದದಿಂದ ಆಶ್ರಯದಿಂದ ಅದ್ವಿತೀಯ ಕೀರ್ತನಕಾರರಾದರು. ತಮ್ಮ ಅಸ್ಖಲಿತವಾದ ಅದ್ಭುತವಾದ ವಾಕ್ ವೈಖರಿಯಿಂದ ಜನರನ್ನು ತಲೆದೂಗಿಸುತ್ತಿದ್ದರು. ಮಂಜುಳವಾದ ಕಂಠದಿಂದ ಮನ ಮೆಚ್ಚಿಸುತ್ತಿದ್ದರು. ವಿಷಯ ನಿರೂಪಣೆಯಲ್ಲಿ ಅವರದೇ ಒಂದು ವೈಶಿಷ್ಟ್ಯ. ಎಷ್ಟು ಅಲ್ಪ ಅವಕಾಶಕೊಟ್ಟರು ಅದರಲ್ಲಿಯೆ ವಿಷಯವನ್ನು ಸೂಕ್ತವಾಗಿ ತೃಪ್ತಿಕರವಾಗಿ ಪ್ರತಿಪಾದಿಸುತ್ತಿದ್ದರು. ಜನರನ್ನು ಹರ್ಷಪುಳಕಿತರನ್ನಾಗಿ ಮಾಡುತ್ತಿದ್ದರು. ಕೊನೆಯವರೆವಿಗು ಕೀರ್ತನ ಸೇವೆಯನ್ನು ಸಲ್ಲಿಸಿ ಕನ್ನಡ ನಾಡಿನಲ್ಲಿ ತಮ್ಮ ಮತ್ತು ಸಂಸ್ಥೆಯ ಕೀರ್ತಿ ಹರಡಿದರು. ಶಿವಯೋಗ ಮಂದಿರದಲ್ಲಿಯೆ ಸಮಾಧಿಸ್ಥರಾದರು.

ಎರಡನೆಯವರು ಹಿರಿಯಹಾಳ ಶ್ರೀ ವೀರಯ್ಯನವರು. ಇವರು ಆ ಕೀರ್ತನ ಕಲೆಯನ್ನು ಸ್ವಾಮಿಗಳವರಲ್ಲಿಯೆ ಅಭ್ಯಸಿಸಿದವರು. ಅಭ್ಯುದಯಕ್ಕೆ ಬಂದವರು. ಹೆಚ್ಚಿನ ಸಂಗೀತ ಹೆಚ್ಚಿನ ವಿದ್ವತ್ತು ಇಲ್ಲದಿದ್ದರೂ ಕೀರ್ತನ ಕಲೆಯಲ್ಲಿ ಹಿಂದಡಿಯಿಡದವರು. ಇದ್ದ ಸಂಗೀತದಲ್ಲಿಯೆ ವಿಚಾರಾತ್ಮಕವಾಗಿ ವಿನೋದಾತ್ಮಕವಾಗಿ ಕೀರ್ತನಮಾಡಬಲ್ಲ ಸಮರ್ಥರು. ಜಂಭದ ಮಾತಿಲ್ಲ. ಜನತಾ ಪ್ರೇಮಿಗಳು. ಈಗಲು ಕೀರ್ತನ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸ್ವಾಮಿಗಳವರಲ್ಲಿ ಮೀರಿದ ಭಕ್ತಿವಂತರಾಗಿದ್ದಾರೆ.

**14.** ಕವಿಗಳು : ೧ ದ್ಯಾಂಪೂರಿನ ಶ್ರೀ ಚನ್ನಕವಿಗಳು. ಇವರು ಸ್ವಾಮಿಭಕ್ತರು. ಪುರಾಣಕರ್ತರು. ಷಟ್ಪದಿಯಲ್ಲಿ ಅನೇಕ ಪುರಾಣಗಳನ್ನು

ಬರೆದಿದಾರೆ. ಪುರಾಣ ನಿರ್ಮಾಣವಿಷಯದಲ್ಲಿ ಇವರು ವೀರಶೈವವ್ಯಾಸರು. ರಾಘವಾಂಕನ ಕಾವ್ಯಕನ್ನಿಕೆ ಇವರ ಕೈವಿಡಿದಿದ್ದಳು; ಕೃತಾರ್ಥಳಾಗಿದ್ದಳು. ಚನ್ನಕವಿಗಳು ತಮ್ಮ ಕಾವ್ಯ ಶ್ರೀಯನ್ನು ಕೊನೆಯ ಉಸುರಿನಲ್ಲಿಯು ಸ್ವಾಮಿಗಳ ಪಾದದಲ್ಲಿರಿಸಿ ಕೃತಾರ್ಥರಾದರು. ಕೀರ್ತಿಕಾಯರಾದರು.

ಎರಡನೆಯವರು . .ಶ್ರೀಲಿಂಗಪ್ಪ ಮಾಸ್ತರರು. ಇವರು ಸ್ವಾಮಿ ಶಿಷ್ಯರು. ಕಾವ್ಯಜೀವಿಗಳು ಸ್ವಾಮಿಗಳವರ ಮೇಲೆ ಅನೇಕ ಪದ್ಯಗಳನ್ನು ಬರೆದಿದಾರೆ. ಕಾವ್ಯವೊಂದನ್ನು ಕಟ್ಟಿದಾರೆ. (ಅದಾವುದೊ ಹೆಸರು ಗೊತ್ತಿಲ್ಲ.) ಸ್ವಾಮಿಗಳವರಲ್ಲಿ ಅಚಲವಾದ ಭಕ್ತಿಯಿತ್ತು. ಇವರು ಮುಕ್ತರಾಗಿದ್ದಾರೆ.

15. ಸಂಶೋಧಕರು ಅಥವಾ ಶಿವಾನುಭಾವಿಗಳು : ಶ್ರೀ ಚನ್ನಮಲ್ಲಿಕಾರ್ಜುನರು 'ಸದ್ಧರ್ಮ ದೀಪಿಕೆ'ಯ ಸಂಪಾದಕರು. ಇವರು ಸ್ವಾಮಿಗಳವರ ತುಂಬಾ ನಚ್ಚಿನ ಶಿಷ್ಯರು. ಮೊದಲಿನಿಂದಲು ಸ್ವಾಮಿಗಳವರಲ್ಲಿ ಪಳಗಿದಾರೆ. ಅವರ ಸನ್ನಿಧಿಯಲ್ಲಿ ಆಗಾಗ್ಗೆ ಬಂದು ಅನೇಕ ಸಂಶೋಧನೆಗಳನ್ನು ಮಾಡಿದಾರೆ. ಭಾಷಣಮಾಡಿದಾರೆ. ಅಲ್ಲದೆ ಶ್ರೀಗಳವರ ಆಶೀರ್ವಾದದಿಂದ ಒಂದು ಪ್ರೆಸ್ಸನ್ನು ಪಡೆದು ಹಾವೇರಿಯಲ್ಲಿದ್ದು 'ಸದ್ಧರ್ಮದೀಪಿಕೆ' ಮಾಸಿಕ ಹೊರಡಿಸಿದರು. ಅನೇಕ ಸ್ವತಂತ್ರ ಪುಸ್ತಕಗಳನ್ನು ಬರೆದು ಪ್ರಕಟಿಸಿದರು. ಪುರಾತನ ಗ್ರಂಥಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಅಕ್ಕಮಹಾದೇವಿಯ ರಗಳೆ ಪ್ರಧಾನವಾದುದು. ಸ್ವಾಮಿಗಳವರಲ್ಲಿದ್ದು ಶಿವಾನುಭವ ಮರ್ಮವನ್ನು ಚನ್ನಾಗಿ ಅರಿತಿದಾರೆ. ಈಗಲು ಅದೇ ಮಾಸಿಕವನ್ನು ಹೊರಡಿಸುತ್ತಿದ್ದಾರೆ.

ಎರಡನೆಯವರು ದ್ಯಾಂಪೂರು ಶ್ರೀ ಮಹಾಲಿಂಗಪ್ಪನವರು. ಇವರು ಶಿವಯೋಗಮಂದಿರದಲ್ಲಿಯೆ ಅನೇಕ ವರುಷಗಳವರೆಗೆ ಸ್ವಾಮಿಗಳವರ ಸನ್ನಿಧಿಯಲ್ಲಿದ್ದು ಪುರಾತನ ಗ್ರಂಥಗಳನ್ನು ಸಂಶೋಧಿಸಿದ್ದಾರೆ. ಸ್ವಾಮಿಗಳವರಿಂದ ಉತ್ತೇಜಿತರಾಗಿದ್ದಾರೆ. ಈಗಲು ಅದೇ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಮೂರನೆಯದಾಗಿ ಇಟಗಿ ಶ್ರೀ ಸೋಮನಾಥಶಾಸ್ತ್ರಿಗಳವರು. ಇವರು ಸಂಸ್ಕೃತ ಪಂಡಿತರು. ಮುಗ್ಗಿಮಾಯಿದೇವರ ಸಂಸ್ಕೃತ ಶಿವಾನುಭವಗ್ರಂಥಗಳ ವಿಚಾರವನ್ನು ಸ್ವಾಮಿಗಳವರಲ್ಲಿ ಆಳವಾಗಿ ಅಭ್ಯಸಿಸಿದ್ದರು. ಶಿವಾನುಭವಿಗಳಾಗಿದ್ದರು. ಶಿಷ್ಯರಾಗಿದ್ದರು. ಶಿವಾಧೀನರಾಗಿದ್ದಾರೆ.

16. ಲೇಖಕರು : ಶ್ರೀ ಕ ಜ ಕ ಗ ಗುರುಮೂರ್ತಿಶಾಸ್ತ್ರಿಗಳವರು. ಇವರು ಸ್ವಾಮಿಗಳವರಲ್ಲಿ ನಿಷ್ಠಾವಂತ ಶಿಷ್ಯರು. ಸ್ವಾಮಿಗಳವರಿಂದ ಪ್ರಚೋದಿತರಾಗಿ ಅನೇಕ ಬಗೆಯ ಲೇಖನಗಳನ್ನು ಬರೆಯುತ್ತಿದ್ದರು. 'ಶಿವಪ್ರತಾಪ' ಎಂಬ ವಾರ ಪತ್ರಿಕೆಯ ಸಂಪಾದಕರಾಗಿದ್ದರು. ಸ್ವಾಮಿಗಳವರ ಆಶ್ರಯ ಅಪ್ಪಣೆಗಳಿಂದ ಆ ಪತ್ರಿಕೆ ಹೊರಬಿದ್ದು ಕೆಲವು ದಿನ ಮಾತ್ರ ಕೆಲಸಮಾಡಿತು. ಶಾಸ್ತ್ರಿಗಳವರು, ಸ್ವಾಮಿಗಳವರ ಜನ್ಮಭೂಮಿಯ ಬಳಿಯವರು. ಅದರಿಂದಾಗಿ ಸ್ವಾಮಿಗಳವರ ಸಂಕ್ಷಿಪ್ತ ಚರಿತೆಯನ್ನು ಸಂಗ್ರಹಿಸಿ ಸ್ಮಾರಕ ಚಂದ್ರಿಕೆಯಲ್ಲಿ ಕೊಟ್ಟಿದ್ದಾರೆ. ಅದುವೆ ಈ ಗ್ರಂಥಕ್ಕೆ ಬೀಜ. ಇವರು ಶಿವಾಧೀನರಾಗಿದ್ದಾರೆ.

2 ಶ್ರೀಮಲ್ಲಿಕಾರ್ಜುನ ದೇಶಿಕರು. ಇವರು ಸ್ವಾಮಿಗಳವರಲ್ಲಿ ಅನೇಕ ದಿನಗಳಿದ್ದು ಸೇವೆ ಮಾಡಿದ್ದಾರೆ. ಅಭ್ಯಾಸಮಾಡಿದ್ದಾರೆ. ಅಭ್ಯಾಸಕ್ಕಿಂತ ಆಪೋತ್ತರವೇ ಮಿಗಿಲಾಗಿದ್ದ ಇವರನ್ನು ಇಂದು ಒಬ್ಬ ಲೇಖಕರಾಗುವಂತೆ ಮಾಡಿದ್ದಾರೆ ಸ್ವಾಮಿಗಳವರು. ಇವರು ಈಚೆಗೆ ನಾಲ್ಕಾರು ಪುಸ್ತಕಗಳನ್ನು ಬರೆದಿದಾರೆ.

17. ಪುರಾಣಿಕರು . ೧ ತೆಲಸಂಗದ ಶ್ರೀ ಬಸವಲಿಂಗ ಪಟ್ಟದ್ದೇವರು. ಇವರು ಶಿವಯೋಗಮಂದಿರದಲ್ಲಿಯೆ ಇದ್ದು ಅಭ್ಯಾಸಮಾಡಿದವರು. ಸಂಸ್ಕೃತದಲ್ಲಿ ಚನ್ನಾಗಿ ಗತಿಯಿದ್ದವರು. ಮರಾಠಿ ಭಾಷೆಯ ಪರಿಚಯವು ಇವರಿಗಿದೆ. ಇವರು ಶಿವಯೋಗ ಮಂದಿರದಲ್ಲಿಯೆ ಸಂಗೀತಾಭ್ಯಾಸವನ್ನು ತಕ್ಕಷ್ಟು ಮಾಡಿ ಪುರಾಣ ಹೇಳುವದರಲ್ಲಿ ಪ್ರವೀಣರಾಗಿದ್ದಾರೆ. ಶಾರೀರವಿದೆ; ಸೇವಾಶಕ್ತಿಯಿದೆ. ಇವರಲ್ಲದೆ ಶ್ರೀ ರುದ್ರದೇಶಿಕರು ಎಡಹಳ್ಳಿ ಇವರು ಸಹ ಪುರಾಣವನ್ನು ಹೇಳಬಲ್ಲರು.

ಇವಲ್ಲದೆ ಸಾಮಾಜಿಕರಲ್ಲಿ ದೇಸಿ ಹೊಸೂರು ರಾ. ಬ. ಚನ್ನಬಸವಪ್ಪ ಶೆಟ್ಟರು, ಶಿರಸಂಗಿ ಲಿಂಗರಾಜರು, ಆರಟಾಳ ರುದ್ರಗೌಡರು, ಮೊಣಸಿಸಕಾಯಿ ಸಾಹೇಬರು, ಕಿತ್ತೂರು ರೇವಣಸಿದ್ಧಪ್ಪನವರು, ಶ್ರೀ ವೀರಬಸವ ಶ್ರೇಷ್ಠಿಯವರು, ವಾರದ ಅಪ್ಪಾಸಾಹೇಬರು, ಒಂಟಮುರಿ ದೇಸಾಯರು, ಇಟಗಿ ದೇಸಾಯರು, ನವದತ್ತಿ ಮೂಗಪ್ಪಣ್ಣನವರು, ತೇರದಾಳ ಬುದ್ಧಯ್ಯನವರು. ಧಾರವಾಡ ಶಿವಲಿಂಗ ಶಾಸ್ತ್ರಿಗಳು, ರೋಣ ಜೋಳದ ಮಾಸ್ತರರು, ಅಜ್ಜೂರಿನ

ಪ್ರಭುಗೌಡರು, ಕುರಹಟ್ಟಿ ಸರ್ವತಗೌಡರು, ಬಿನಕೊಪ್ಪ ಭಾಪುಗೌಡರು ಮುಂತಾಗಿ ಅನೇಕ ಪ್ರಮುಖ ಶಿಷ್ಯರಿದ್ದರು, ಈಗಲು ಇವರಲ್ಲಿ ಕೆಲವ ರಿದ್ದಾರೆ.

## ಹಾವೇರಿ ಶ್ರೀಗಳವರು

ಇವರು ಹಾನಗಲ್ಲ ಕುಮಾರಸ್ವಾಮಿಗಳವರಿಗೆ ಮಲ್ಲಣಾರ್ಯರಂತೆ ಅತ್ಯಂತ ಆಪ್ತರು. ಆದರಾಭಿಮಾನಿಗಳು. ಕೊನೆಯ ವರೆವಿಗು ಸ್ವಾಮಿ ಗಳವರೊಡನೆ ಸಹಕರಿಸಿ ಕೆಲಸಮಾಡಿದರು. ಸ್ವಾಮಿಗಳವರು ಶಿವಯೋಗ ಮಂದಿರ ಭಾರವನ್ನು ತಮ್ಮ ತರುವಾಯ ಇವರ ಹೆಗಲ ಮೇಲಿರಿಸಿ ಇಳುಹಿ ಹೋದರು. ಹಾವೇರಿ ಹುಕ್ಕೇರಿ ಮಠದ ಶ್ರೀ. ಮ. ನಿ. ಶಿವಬಸವ ಸ್ವಾಮಿ ಗಳವರು ಆ ಭಾರವನ್ನು ತಮ್ಮ ಉಸಿರು ಇರುವವರೆವಿಗು ಹೊತ್ತು ನಿತ್ತರಿಸಿ ದರು. ಯಶಸ್ವಿಗಳಾದರು. ಇವರು ತಪೋನಿಷ್ಠರು. ಸದಾಚಾರ ನಿರತರು.



# ಕುಮಾರನು ಕ್ರಿಯಾಶಿಲ್ಪಿ

ಶಿಲ್ಪಿಗಳಲ್ಲಿ ಶಿಲಾಶಿಲ್ಪಿಯೆ ಪ್ರಸಿದ್ಧ. ಈತನು ಜಾತಿಯ ಶಿಲೆಯನ್ನು ತೆಗೆದುಕೊಂಡು ಕೆತ್ತಿ ತನ್ನ ಅಂತಸ್ಥವಾದ ಕಲೆಯನ್ನು ಅದರಲ್ಲಿಳಿಸಿ ಅದನ್ನು ಕಲಾಮೂರ್ತಿಯನ್ನಾಗಿ ಮಾಡಬಲ್ಲನು, ಮಾಡುತ್ತಾನೆ.

ಕ್ರಿಯಾಶಿಲ್ಪಿಯಾದ ಕುಮಾರ ಯೋಗಿಯು ಅನೇಕ ಶಿಲಾವರ್ಗದ ಮನುಷ್ಯರನ್ನು ಶಿಷ್ಯರನ್ನಾಗಿ ಪರಿಗ್ರಹಿಸಿ ಕಡೆದು ಕಡೆದು ಮೂರ್ತಿಗಳನ್ನಾಗಿ ಮಾಡಿದನು. ಶಿಲಾಶಿಲ್ಪಿಗಿಂತಲು ಕ್ರಿಯಾಶಿಲ್ಪಿಯ ಕೌಶಲ್ಯ ಹೆಚ್ಚಿನದು, ಕಷ್ಟ ಹೆಚ್ಚಿನದು, ಶಿಲಾಶಿಲ್ಪಿಗೆ ಶಿಲೆಯು ವಶಂಗತವಾಗಿರುತ್ತದೆ. ಅದರಂತ ಕ್ರಿಯಾಶಿಲ್ಪಿಗೆ ಶಿಲಾವರ್ಗದ ಮನುಷ್ಯರ ಮನಸ್ಸು ವಶವರ್ತಿಯಾಗುವುದು ತೀರ ಕಷ್ಟದ ಮಾತು. ಕ್ರಿಯಾಶಿಲ್ಪಿಯು ತಾನೊಂದು ನೆನೆದರೆ ಶಿಷ್ಯನು ಮತ್ತೊಂದನ್ನು ನೆನೆಯುತ್ತಿರುತ್ತಾನೆ. ಅಂಥವರ ಮನಸ್ಸನ್ನು ಪರಿವಾಲಿಸುವುದೆ ಪರಮ ಸಾಹಸದ ಕೆಲಸ. ಶಿಲಾಶಿಲ್ಪಿಯ ಉಳಿಯ ಹೊಡೆತ ಶಿಲೆಯಲ್ಲಿ ನೇರವಾಗಿ ಮೂಡುತ್ತದೆ. ಕ್ರಿಯಾಶಿಲ್ಪಿಯ ಹಿತನುಡಿಯ ಪರಿಣಾಮ ಶಿಷ್ಯನ ಮನಸ್ಸಿನ ಮೇಲೆ ಒಮ್ಮೆಗೆ ಮೂಡಲರಿಯದು.

ಶಿಲಾವರ್ಗದ ಮನುಷ್ಯರನ್ನು ಮಾನವತ್ವದ ಮಟ್ಟಕ್ಕೆ ತಂದು ಮೂರ್ತಿವಂತರನ್ನಾಗಿ ಮಾಡುವುದು ಇದೂ ಒಂದು ಶಿಲ್ಪಕಲೆ. ದುಸ್ವಭಾವಗಳನ್ನು ದೂರೀಕರಿಸಿ ಸುಸ್ವಭಾವ - ಸ್ವಾನುಭಾವಗಳನ್ನು ಬೋಧಿಸಿ ಶಾಂತಿ - ಸೌಹಾರ್ದ್ರ ಕಳೆಗಳನ್ನು ತುಂಬಿ ತೋರುವಂತೆ ಎಸಗುವುದು ಒಂದು ಸಜೀವ ಸೋಜ್ವಲ ಶಿಲ್ಪಕಲೆ; ಪ್ರವಾಹಿಕಲೆ. ಇದರಲ್ಲಿ ಹಸ್ತ ನೈಪುಣ್ಯಕ್ಕಿಂತ ಭಾವ ನೈಪುಣ್ಯ ಪ್ರಧಾನವಾದುದು, ಪ್ರಯುಕ್ತವಾದುದು.

ಶಿಲಾಶಿಲ್ಪಿಯು ಬಹಿರಂಗಗಳನ್ನು ನಿರ್ಮಿಸಬಲ್ಲನು. ಮಾನವೋನ್ನತಿಗೈಯುವ ಶಿಷ್ಟಶಿಲ್ಪಿಯು ಅಂತರಂಗವನ್ನು ಅಲಂಕರಿಸಬಲ್ಲನು, ತಿದ್ದಿ ಶುದ್ಧಗೊಳಿಸಬಲ್ಲನು. ಎರಡನೆಯದಾಗಿ ವಸನಾಭರಣಗಳನ್ನು ಉಡಿಸಿ ತೊಡಿಸುವುದರಲ್ಲಿ ಶಿಲಾಶಿಲ್ಪಿಯ ನೈಪುಣ್ಯವಿದ್ದರೆ, ಗುಣಾಭರಣಗಳನ್ನು ತೊಡಿಸುವದರಲ್ಲಿ

ಶಿಷ್ಟಶಿಲ್ಪಿಯ ಪುಣ್ಯಪ್ರಭೆ ಕಾರಣವಾಗಿರುತ್ತದೆ. ಉಡಿಗೆಯಿಲ್ಲದೆ ಬರೀ ತೊಡಿಗೆಗಳಿಂದ ಅಲಂಕರಿಸಿದ ಶಿಲ್ಪಕಲೆಗಳಿಗೇನು ಕೊರತೆಯಿಲ್ಲ. ಬೇಲೂರು ಹಳೆಬೀಡುಗಳನ್ನು ನೋಡಿದವರಿಗೆ ಬೇರೆ ನಿದರ್ಶನಬೇಕಿಲ್ಲ. ಈ ಸಂವಿಧಾನವು ಶಿಷ್ಟಶಿಲ್ಪಿಯ ಕಲೆಗೆ ಸಾದೃಶ್ಯವಾಗಿದೆ, ಸಂಗ್ರಾಹ್ಯವಾಗಿದೆ. ಏಕೆಂದರೆ ಅಂತರಂಗದ ಆತ್ಮನಿಗೆ ಗುಣಾಭರಣದ ವಿನಹ ವಸನಾಭರಣದ ಹಂಗೆಲ್ಲಿ, ಏತಕ್ಕೆ ?

ಶಿಲಾಶಿಲ್ಪಿಯದು ಜಡವಾದ ಕಲೆ. ಕ್ರಿಯಾಶಿಲ್ಪಿಯದು ಅಜಡವಾದ ಕಲೆ. ಶಿಲಾಶಿಲ್ಪಿಯು ಶಿಲೆಯಲ್ಲಿ ಬರೀ ಲಾವಣ್ಯವನ್ನು ಕುದುರಿಸುತ್ತಾನೆ. ಶಿಷ್ಟಶಿಲ್ಪಿಯು ಮಾನವನಲ್ಲಿ ಪುಣ್ಯಲಾವಣ್ಯವನ್ನು ಕೆತ್ತುತ್ತಾನೆ. ಶಿಲಾಶಿಲ್ಪಿಯ ಕಲೆ ಕಾಲಕ್ಕೊಳಗಾಗಿರುತ್ತದೆ. ಕ್ರಿಯಾಶಿಲ್ಪಿಯ ಕಲೆ ಕಾಲಾತೀತವಾಗಿರುತ್ತದೆ.

ಕುಮಾರೇಶನ ಕ್ರಿಯಾಶಕ್ತಿ ನಿರಿತವಾದುದು, ನಿತಾಂತವಾದುದು. ಆದುದರಿಂದಲೆ ಯಾರಿಂದಲು ಸುಧಾರಿಸಲು, ಶಕ್ಯವಿಲ್ಲದ ಅನೇಕರು ಸ್ವಾಮಿಗಳವರ ಕ್ರಿಯಾಶಿಲ್ಪಕ್ಕೆ ಸಿಕ್ಕು ಮುದ್ದಾದ ಮೂರ್ತಿವಂತರಾದರು, ಕೊನೆಯಿಲ್ಲದ ಕೀರ್ತಿವಂತರಾದರು.

ಸರಿಯಾಗಿ ಓದುಬಾರದವರು ಅವರ ಕೈಯಲ್ಲಿ ಶ್ರೇಷ್ಠ ಶಿವಾನುಭಾವಿಗಳಾದರು. ಬರೆಯುಬಾರದವರು ಪ್ರಸಿದ್ಧ ಲೇಖಕರಾದರು. ಚನ್ನಾಗಿ ಮಾತನಾಡಲು ಬಾರದವರು ವಾಗ್ಮಿಗಳಾದರು, ವ್ಯಾಖ್ಯಾತೃಗಳಾದರು. ಕೀರ್ತನಕಲಾವಿದರಾದರು. ಸಂಗೀತದ ಗಂಧವನರಿಯದವರು 'ಸಂಗೀತ ಸಾಗರ' ರಾದರು. ಸಂಸಾರಿಗಳಾಗಬೇಕಾದವರು ಸಂನ್ಯಾಸಿಗಳಾದರು. ಪಶುಗಾಯಿಗಳಾಗಬೇಕಾದವರು ಪಾಠಶಾಲಾಧ್ಯಾಪಕರಾದರು. ರೋಗಿಗಳು ನೀರೋಗಿಗಳಾದರು. ರಾಗಿಗಳು ವಿರಾಗಿಗಳಾದರು. ಕೃಪಣರು ತ್ಯಾಗಿಗಳಾದರು. ಭವಿಗಳು ಭಕ್ತರಾದರು. ಗುಣಹೀನರು ಗುಣಿಗಳಾದರು.

ಸುಳಿವು ಸರಿಯಾಗಿಲ್ಲದ ಶಿಲೆಗಳು ಶಿಲ್ಪಿಯ ಕೈಗೆ ಸೇರಿದರು ಮೂರ್ತಿಗಳಾಗುವ ಭಾಗ್ಯವಿಲ್ಲದೆ ಒಡೆದು ಹೋಗುವಂತೆ, ಸ್ವಾಮಿಗಳವರ ಕ್ರಿಯಾಶಿಲ್ಪಕ್ಕೆ ಸಿಕ್ಕಿದ ಕೆಲವರು ಕರ್ಮಬಲದಿಂದ ಕಲಾಹೀನರಾದರು. ಕನಿಷ್ಠ ಬಾಳು ಬಾಳಿದರು. ಯಾವುದಕ್ಕು ಪುಣ್ಯಬೇಕು ; ಭಾಗ್ಯಬೇಕು.

ಅಂಥವರ ವಿಷಯದಲ್ಲಿ ಸ್ವಾಮಿಗಳವರು ಒಮ್ಮೊಮ್ಮೆ ನೆನೆದು ಮನಸಾರೆ ಮರುಗುತ್ತಿದ್ದರು. ಮತ್ತೊಮ್ಮೆ "ನಗಣಿಯ ಜಿನಕಂಗೆ ಸಂಪಿಗೆಯ ಅರಳಲ್ಲಿ ಪೂಜಿಸಿದರೆ ರಂಜನೆ ಆಹುದಲ್ಲದೆ ಅದರ ಗಂಜಳ ಬಿಡದಣ್ಣಾ … ." ಎಂಬ ಬಸವೇಶ್ವರನ ವಚನವನ್ನು ನೆನೆದು ಸುಮ್ಮನಾಗುತ್ತಿದ್ದರು, ನೆಮ್ಮದಿಗೊಳ್ಳುತ್ತಿದ್ದರು.



# ಕಡೆನುಡಿ

ಸ್ವಾಮಿಗಳವರು ತಮ್ಮ ಅಪರ ವಯಸ್ಸಿನಲ್ಲಿ ಕ್ರಿಯಾಕ್ಷೇತ್ರವನ್ನು ಮಿತಿ ಮೀರಿ ಹೆಚ್ಚಿಸಿಕೊಂಡರು. ಶಕ್ತಿಮೀರಿ ಶ್ರಮಿಸತೊಡಗಿದರು. ಕ್ರಿಯಾಕ್ಷೇತ್ರ ವಲ್ಲಿರುವಾಗ ಅವರಿಗೆ ಮತ್ತೊಂದರ ಪರಿವೆ ಇರುತ್ತಿರಲಿಲ್ಲ. ಸ್ನಾನ ಶಿವ ಪೂಜೆಗಳ ಹಂಗು ಹರಿದಿಡುತ್ತಿದ್ದರು. ಮೂರು ದಿನವಾಗಲಿ ಮುಟ್ಟಿದ ಕಾರ್ಯ ಕೊನೆಗಾಣದೆ ಅವರು ಅದೆಂದಿಗೂ ಶಿವಪೂಜೆಮಾಡುತ್ತಿರಲಿಲ್ಲ, ಶಿವಪೂಜೆ ಯಿಲ್ಲದ ಮೇಲೆ ಶಿವಾರ್ಪಿತ ಎಲ್ಲಿಯದಮಾತು ?

ಕಾರ್ಯಬಾಹುಲ್ಯದಿಂದ ಚಿಂತೆಯು ಚಾಪಲ್ಯ ಹೆಚ್ಚಿದಾಗ 'ವೃತ್ತಿಯ ಜಾಲ ಚಿಂತೆಯ ಮೂಲ' ಎಂದು ಅವರೆ ನುಡಿದ ಅನುಭವೋಕ್ತಿಯಿದು. ನುಡಿದು ಅಷ್ಟಕ್ಕೆ ನಿಲ್ಲದೆ ರವಿಕಿರಣಗಳು ಕತ್ತಲೆಯನ್ನು ಹರಿಯುವಂತೆ ಅವರು ತಮ್ಮ ವಿಚಾರ ಪ್ರಭೆಯಿಂದ ಕಾರ್ಯಯೋಜನೆಗಳನ್ನೆಲ್ಲ ಛೇದಿಸಿ ಆತ್ಮಾನುಸಂಧಾನದಲ್ಲಿ ತಾವೇ ತಾವಾಗಿರುತ್ತಿದ್ದರು. ಆ ಸತ್ಯಸುಖವನ್ನು ಅನುಭವಿಸಿ ಆದಮೇಲೆ 'ನಿನ್ನಯ ಸಂಗ ಬನ್ನದ ಭಂಗ' ಎಂದು ಹೃದ ಯಾನುಭವದ ವೇದನಮವಾದ ಭಾವಗೀತೆಗಳನ್ನು ಭಾಷೆಯ ಮುಖದಲ್ಲಿ ರಾಗರಚನೆಯಲ್ಲಿ ಬಿತ್ತರಿಸುತ್ತಿದ್ದರು, ಬಿತ್ತರಿಸಿದ್ದಾರೆ.

ಕ್ರಿಯಾ ಬತ್ತಿಗೆ ಜ್ಞಾನಜ್ಯೋತಿಯ ಅಂಟಿಸುತ್ತಿದ್ದರು. ಕಾರ್ಯಕ್ಷೇತ್ರದಲ್ಲಿ ಜ್ಞಾನಬೆಳಗನು ಹರಡುತಿದ್ದರು. ಆ ಬೆಳಗಿನ ಭಾಗಕ್ಕೆ ಹೋಗೋಣ ಬನ್ನಿ ! ನೋಡೋಣ ಬನ್ನಿ !!



# ಪ್ರವೇಶ

ಕಾರಣಿಕನಾದ ಕುಮಾರಯೋಗಿಯ, ಕ್ರಿಯಾಭಾಗವು ಕೊನೆಗಂಡು ಇನ್ನು ಜ್ಞಾನಭಾಗಕ್ಕೆ ಪ್ರವೇಶಿಸುತ್ತೇವೆ. ಜ್ಞಾನಭಾಗವನ್ನು ಚಿತ್ರಿಸುವುದು ತೀರಾ ಸಾಹಸ. ಆದರೂ ಕೈಗೊಳ್ಳಲಾಗಿದೆ. ಅದಿಲ್ಲದೆ ಕುಮಾರಯೋಗಿಯ ಕಾರಣಿಕತೆ ಪರಿಪೂರ್ಣವಾಗಲಾರದು. ಕುಮಾರಯೋಗಿಯ ಕ್ರಿಯಾ ಕಾರಣಿಕತೆ ಎಷ್ಟು ಉಜ್ವಲವಾಗಿದೆಯೊ ಅಷ್ಟೆ ಜ್ಞಾನ ಕಾರಣಿಕತೆಯು ಉಜ್ವಲವಾಗಿದೆ, ಉತ್ತಮವಾಗಿದೆ.

ಪಂಚ ಜ್ಞಾನೇಂದ್ರಿಯಗಳು, ಮನ ಬುದ್ಧಿ ಚಿತ್ತ ಅಹಂಕಾರಗಳು, ಆತ್ಮ ಇವುಗಳ ವಿಷಯಗಳೆ ಇವಕ್ಕೆ ವಿಷಯಗಳು. ಇವುಗಳ ಕಾರ್ಯ ಶುದ್ಧಿ ಸಿದ್ಧಿಗಳೆ ವಿಷಯಗಳು. ಜ್ಞಾನ ವಿಜ್ಞಾನ ವಿಮರ್ಶೆಗಳ ವಿಷಯಗಳು. ಯೋಗ ವಿರಾಗ ನಿರಹಂಕಾರಗಳೆ ವಿಷಯಗಳು. ಇವೆಲ್ಲ ಸ್ವಾಮಿಗಳವರಲ್ಲಿ ಹೇಗಿದ್ದವು, ಎಷ್ಟು ಶುದ್ಧಿಗೊಂಡಿದ್ದವು, ಯಾವ ಸಿದ್ಧಿಯಲ್ಲಿದ್ದವು ಎಂಬುದನ್ನು ಬಿಡಿ ಬಿಡಿಯಾಗಿ ಕಾಣುವುದೇ ಈ ಭಾಗದ ಉದ್ದೇಶ ಮತ್ತು ಪ್ರವೇಶ.

ಇದು ಗುಣಪ್ರಧಾನವಾದುದು. ಜ್ಞಾನಪ್ರಧಾನವಾದುದು. ಅದರಿಂದಾಗಿ ಇದರ ಚಿತ್ರಣ ಕಾರ್ಯ ಬಹು ಬಿಗಿಯಾದುದು, ಹೊಣೆಗಾರಿಕೆಯುಳ್ಳದ್ದು ಇದಕ್ಕೆ ತುಂಬಾ ಪ್ರಾಜ್ಞತೆ ಬೇಕು. ಪರಿಶುದ್ಧತೆ ಬೇಕು. ಕುಮಾರಯೋಗಿಯ ಜ್ಞಾನಜ್ಯೋತಿಯ ಬೆಳಗನು ಕಂಡು ಅನುಭವಿಸಿರಬೇಕು. ಇಲ್ಲವಾದರೆ ಚಿತ್ರಣ ಚಿತ್ತಾದೀತು ? ವಿಷಯ ವಿವರಣೆ ಸರಸಾದೀತು ?

ಕುಮಾರಯೋಗಿಯ ಜ್ಞಾನೇಂದ್ರಿಯಗಳ ಅಂತರಿಂದ್ರಿಯಗಳ ಆತ್ಮ ವಿಷಯದ ಕಾರ್ಯ ಶುದ್ಧಿ ಸಿದ್ಧಿಗಳ ವಿಷಯದಲ್ಲಿ ನಮಗೆ ಸಮಗ್ರವಾದ ಅನುಭವ ವಿಲ್ಲದಿದ್ದರೂ ಸ್ವಲ್ಪಾದರು ಇಲ್ಲದಿಲ್ಲ. ಅವರ ಪಂಚ ಜ್ಞಾನೇಂದ್ರಿಯಗಳ ಪ್ರಭಾವವನ್ನು ಆಗಾಗ ಕಾರ್ಯಗಳ ಮುಖಾಂತರ ಕಂಡಿದೇವೆ. ಅಂತರಿಂದ್ರಿಯಗಳ ಪ್ರಕಾಶವನ್ನು ಅವರ ಅರಿವು ಅನುಭವ ವಿರತಿಯೋಗಾದಿಗಳಿಂದ ಚನ್ನಾಗಿ ಚಿತ್ರಿತವಾದುದನ್ನು ಕಂಡು ಅರಿತಿದೇವೆ. ಅವರ ಆತ್ಮೋ

ನ್ನತಿಯ ಎತ್ತರ ಚಿತ್ರಗಳನ್ನು ಕಂಡರಿತು ಅನುಭವಿಸಿದೇವೆ. ಅದರಿಂದಾಗಿ ಅವನ್ನು ನಸುಮುಸಗು ಬೆಳಗಿನ ನೋಟ ಕುಂಚದಿಂದ ಚಿತ್ರಿಸಲು ಮೊದಲು ಮಾಡಿದೇವೆ. ಚಿತ್ರ ಸಂಪೂರ್ಣವಾಗಿ ಸುಂದರವಾಗಿ ಬಾರದಿದ್ದರು ಸಿಂಧ್ಯವಾಗುವಷ್ಟು ಚಿತ್ತಾಗಲಾರದು, ಅಂದಗೆಡಲಾಗದು – ಎಂಬ ಧೈರ್ಯವಿದೆ. ಸಂಪೂರ್ಣ ಸುಂದರ ಚಿತ್ರದ ಮುನ್ಸಾನಿಗೆ ಮಹದಭಿಲಾಷೆಗೆ ಅಂಕುರವಾಗಬಹುದೆಂದು ಭರವಸೆಯಿದೆ.

ಇದರಿಂದಾಗಿ ಈ ಭಾಗ ಸರಳ ಜೀವನದಿಂದ ಆರಂಭವಾಗುತಿದೆ. ಓದುಗರು ಸರಳ ಮನಸ್ಸಿನಿಂದ ಓದಿ ನೋಡಬೇಕು. ವಿಮರ್ಶಕರು ಸರಳ ಬುದ್ಧಿಯಿಂದ ವಿಮರ್ಶಿಸಬೇಕು.



# ಸರಳಜೀವನ - ಸ್ವಾರ್ಥನಿರಸನ

ಪರಮಪೂಜ್ಯ ಸ್ವಾಮಿಗಳವರ ಜೀವನವು ಮಹಾತ್ಮಾ ಗಾಂಧೀಜಿಯವರಂತೆ ತೀರ ಸಾಧಾರಣವಾದುದು, ತುಂಬ ಸಹಜವಾದುದು. ಆಡಂಬರ ಎಂಬುದು ಅವರ ಸನಿಹದಲ್ಲಿಯೆ ಸುಳಿಯಕೂಡದು. ಆತ್ಮಸ್ತುತಿಗೆ ಅವರೆಂದಿಗೂ ಆಸ್ಪದ ಕೊಡುತ್ತಿರಲಿಲ್ಲ. ಆಜನ್ಮವು ಅವರ ವಿಷಯದಲ್ಲಿ ಪದ್ಯರಚಿಸಲು ಅವಕಾಶವನ್ನೆ ಕೊಡಲಿಲ್ಲ. ಅವರಿಗೆ ತಿಳಿಯದೆ ಯಾರಾದರು ರಚಿಸಿದ್ದರೆ ಅದನ್ನು ಹಾಡಗೊಡುತ್ತಿದ್ದಿಲ್ಲ. ಬರೆದ ಕಾಗದವನ್ನು ಕೈಗೆ ತೆಗೆದುಕೊಂಡು ಚೂರುಮಾಡಿ ಹಾಕಿಬಿಡುತ್ತಿದ್ದರು. ಇದರ ಬದಲು ಶಿವಸ್ತುತಿ ಮಾಡಿರಿ. ಪಂಚಾಚಾರ್ಯರ ಪ್ರಾರ್ಥನೆ, ಪ್ರಮಥರ ಕೀರ್ತನೆ ಮಾಡಿರಿ. ಅದರಿಂದ ಕೃತಾರ್ಥರಾಗುವಿರಿ, ಧನ್ಯರಾಗುವಿರಿ – ಎಂದು ಸಂಪೂರ್ಣ ಮನಸ್ಸಿನಿಂದ ಅಪ್ಪಣೆ ಕೊಡಿಸುತ್ತಿದ್ದರು.

ಅಲ್ಲದೆ ಆತ್ಮಸ್ತುತಿಗಿಂತಲು ಆತ್ಮಘಾತಕತನ ಬೇರಿಲ್ಲ. ಮುಖಸ್ತುತಿಗೆ ಮೆಚ್ಚಿದವನು ಮಹತ್ಪೂರ್ಣವಾದ ಲೋಕಸೇವೆಯನ್ನು ಸಾಕಷ್ಟು ಮಾಡಲಾರನು. ಮಾಡಿದರು ಆತ್ಮಸ್ತುತಿಗೆ ಮೋಹಿತರಾದಲ್ಲಿ ಮತ್ತೊಬ್ಬರ ಹೊಗಳಿಕೆಯನ್ನು ಸೈರಿಸಲಾರನು. ಅವರ ತೆಗಳಿಕೆಯನ್ನು ಕೇಳಿ ಸಂತೋಷಪಡುವನು ತಾನೂ ಭಾಗಿಯಾಗುವನು. ಇದು ಮಾನವಧರ್ಮವಲ್ಲ. ಮಹೋನ್ನತಿಯ ಕುರುಹಲ್ಲ

ಸ್ವಾಮಿಗಳವರ ಮುಖದಿಂದ ಇನ್ನೊಬ್ಬರ ಆಡಿಕೊಂಡುದನ್ನು ಯಾರೂ ಎಂದೂ ಕೇಳಿಲ್ಲ. ಎಥವರನ್ನಾದರು ಅವರು ಉದಾಶೀನವಾಗಿ ಕಾಣುತ್ತಿರಲಿಲ್ಲ. ಹೋಗಬಿಟ್ಟು ಹಳಿಯುತ್ತಿರಲಿಲ್ಲ. ಎದುರಿನಲ್ಲಿಯೆ ಖಂಡಿತವಾಗಿ ಅವರ ತಪ್ಪುತಡೆಗಳದ್ದರೆ ತೋರಿ ತಿದ್ದಿಕೊಳ್ಳಲು ತಿಳಿಸುತ್ತಿದ್ದರು. ಅವರ ಮರೆಯಲ್ಲಿ ಅವರ ವಿಷಯವಾಗಿ ಎಂದಿಗೂ ಯಾರಲ್ಲಿಯೂ ಒಂದು ಮಾತನ್ನು ಸಹ ಆಡುತ್ತಿರಲಿಲ್ಲ; ಅಲ್ಲಗಳೆಯುತ್ತಿರಲಿಲ್ಲ.

ಸ್ವಾಮಿಗಳವರ ಉಡುಪು ತೀರ ಸಾಮಾನ್ಯವಾದುದು: ಆಶ್ರಮಕ್ಕೆ ತಕ್ಕಾದುದು. ಅವರ ನಿಲುವೆಲ್ಲಕ್ಕು ಒಂದು ದಪ್ಪಾದ ಕಾವಿಯ ಕಫನಿ. ಒಂದು ಮಸ್ತಕಕ್ಕೆ ಚೌಕ ಪಾವುಡ. ಲಿಂಗಮೂರ್ತಿಗು ನಹ ಒಂದು ವಸ್ತ್ರ. ಹಸ್ತದಲ್ಲಿ ಒಂದು ಎತ್ತರವಾದ ಬೆತ್ತ. ಪಾದಗಳಲ್ಲಿ ಪಾದುಕೆಗಳು. ಇವಿಷ್ಟು ಸ್ವಾಮಿಗಳವರ ಉಡಿಗೆಗಳು; ತೊಡಿಗೆಗಳು. ಇನ್ನು ಬೇರೆ ತೊಡಿಗೆಗಳ ಮಾತಿಲ್ಲ.

ಉಡುಗೆಗಳು ನಹ ಸ್ವಾಮಿಗಳವರಿಗೆ ಹೆಚ್ಚಿಗೆ ಇರಕೂಡದು; ಹೆಚ್ಚು ಬೆಲೆಯವನ್ನು ತರಕೂಡದು.

ಪ್ರಯಾಣದಲ್ಲಿರುವಾಗ ಒಮ್ಮೆ ಶಿಷ್ಯರಲ್ಲೊಬ್ಬರು ಪೇಟೆಯಲ್ಲಿ ಒಳ್ಳೆ ಬಟ್ಟೆಯನ್ನು ಕಂಡು ಸ್ವಾಮಿಗಳಿಗೆಂದು ತೆಗೆದುಕೊಂಡು ಉಡುಪು ಹೊಲಿಸಿ ತಂದರು. ಅವನ್ನು ಸ್ವಾಮಿಗಳವರು ಹೇಗೋ ಕಾಣಿಸಿಕೊಂಡು ಯಾರಿಗೆ ಈ ಬಟ್ಟೆಗಳು? ಎಂದು ಕೇಳಿದರು. ಅಂಜುತ್ತ ಶಿಷ್ಯನು ತಮಗೆ ಎಂದು ಮೆಲುನುಡಿದನು. ಸ್ವಾಮಿಗಳು ತುಂಬಾ ಸಿಡಿಮಿಡಿಗೊಂಡರು. ತೊಟ್ಟಿರುವ ನಿಲುವಂಗಿ ಇನ್ನೂ ಚನ್ನಾಗಿಯೆ ಇರುವಾಗ ಇದನೇಕೆ ತಂದದ್ದು? ಇಷ್ಟೊಂದು ದುಭಾರಿಯಾಗಿ ದುಡ್ಡನ್ನು ಏತಕ್ಕೆ ಹಾಕಿದ್ದು? ಸಮಾಜದ ದುಡ್ಡನ್ನು ಕೇಳು ವವರಿಲ್ಲೆಂದು ಕಂಡಂತೆ ಖರ್ಚುಮಾಡುವುದೆ? ಸಮಾಜ ಕೇಳದಿದ್ದರು ಆತ್ಮ ಅರಿಯುವುದಿಲ್ಲವೆ? ಇದು ಆತ್ಮವಂಚನೆಯಲ್ಲವೆ? ಸಮಾಜ ವಂಚನೆಯಲ್ಲವೆ? ಈಗ ಇವು ನಮಗೆ ಬೇಕಿಲ್ಲ. ಇವನ್ನು ಬಟ್ಟೆ ಇಲ್ಲದ ಇನ್ನೊಬ್ಬರಿಗೆ ಕೊಟ್ಟು ಬಿಡು. ಇನ್ನುಮೇಲೆ ಇರುವ ಉಡುಪು ಹರಿಯುವವರೆವಿಗು ಹೊಸ ಉಡುಪನ್ನು ತರುವಕೆಲಸಕ್ಕೆ ಕೈಹಾಕಬೇಡ. ಹೆಚ್ಚಿನ ಬೆಲೆಬಾಳುವ ಬಟ್ಟೆಯನ್ನು ಕೊಳ್ಳ ಬೇಡ. ಅಂತಹ ವೇಷದ ಆಶೆ ನಮಗೇಕೆ? ಅತಿವ್ಯಯದ ಅಕ್ರಮಕ್ಕೆ ಒಳ ಗಾಗುವುದೇಕೆ? ತಿಳಿಯಿತೆ? ಎಂದು ಮಿತವ್ಯಯದ ಹಿತನುಡಿಗಳನ್ನು ಬೋಧಿಸಿದರು. ತಂದ ಹೆಚ್ಚಿನ ಉಡಿಗೆಯನ್ನು ಮೆಚ್ಚದಾದರು.

ಆಜನ್ಮದ ವರೆವಿಗು ಸ್ವಾಮಿಗಳವರು ಆನೆ ಅಂಬಾರಿಗಳನ್ನು ಉತ್ಸವ ಉಬ್ಬರಗಳನ್ನು ಒಳಸಂಚು ಒತ್ತಾಸೆಗಳನ್ನು ಆಶಿಸಿದವರಲ್ಲ; ಅಂಗೀಕರಿಸಿ ದವರಲ್ಲ. ಒಳ್ಳೆಣಿಸಿನ ಆಶೆ ತೋರಿದವರಲ್ಲ. ನಿರರ್ಥಕವಾದ ಒಲುಮೆಗೆ ಬಗ್ಗಿದವರಲ್ಲ. ಸ್ವಾರ್ಥದ ಮಾತು ಸ್ವಲ್ಪ ಅವರಲ್ಲಿರಲಿಲ್ಲ. ಸಮಾಜದಿಂದ

ಎಷ್ಟೋ ಲಕ್ಷ ಲಕ್ಷಾಂತರ ಸಂಪಾದಿಸಿದರು. ಸ್ವಾರ್ಥಕ್ಕಾಗಿ ಎಂದೂ ಉಪಯೋಗಿಸಲಿಲ್ಲ. ಕೂಡಿಡಲಿಲ್ಲ. ಸಮಾಜ ಕಲ್ಯಾಣಕ್ಕಾಗಿಯೆ ಬಳಸಿದರು. ಎಲ್ಲಿಂದ ಸಂಗ್ರಹಿಸಿದರೊ ಅದಕ್ಕೆ ಸಲ್ಲಿಸಿದರು. ಕೊಟ್ಟವರ ಅರ್ಥ ಕೊಟ್ಟವರಿಗೆ ಆಯಿತು. ಸಾರ್ಥಕವಾಗಿ ಪರಿಣಮಿಸಿತು.

ಕುಡುವರ ಪುರುಳದು ಪೆರತಾ
ದೊಡಮೆರೆವರ್ಗೊಲ್ವು ಕುಡುವರರ್ಥಮೆ ಅಕ್ಕುಂ ।
ಕುಡಿವೊಡೆ ನೀರಂ ಕುಡಿದಾ
ಕಡಲಿಂ ಮೊಗೆದಿಳೆಗೆ ನೀರನೆರೆದಪುದು ಮುಗಿಲ್ ॥

ಎಂಬ ನೀತಿ ನೂರುಪಾಲಿಗು ನಿಜವಾಯಿತು ಸ್ವಾಮಿಗಳವರಲ್ಲಿ. ಅವರು ಸ್ವಾರ್ಥಕ್ಕೆ ಅದೆಂದಿಗು ಸಿಲುಕಲಿಲ್ಲ, ಬಳುಕಲಿಲ್ಲ. ಮುಗಿಲಂತೆ ಶುಭ್ರವಾಗಿದ್ದರು. ನಿರಭ್ರವಾಗಿದ್ದರು.

ಒಟ್ಟಿನಲ್ಲಿ ಸ್ವಾಮಿಗಳವರದು ನಿರಾಡಂಬರ ಸ್ವಭಾವ. ನಿಸ್ವಾರ್ಥ ಜೀವನ. ಅವರು ಅಕಳಂಕ ಚರಿತ್ರರು. ಅನಂತ ಮಹಿಮರು. ಯಾವ ರಂಜನೆಗೂ ಮನಸೋತವರಲ್ಲ. ಯಾವ ರಸರುಚಿಗಳಿಗೂ ಬಾಯ್ನೀರು ಕರೆದವರಲ್ಲ. ಅಂದ – ಅಂದಣಗಳನ್ನು ಹಾರೈಸಿದವರಲ್ಲ. ಅತಿವ್ಯಯವನ್ನು ಮಾಡುತ್ತಿರಲಿಲ್ಲ. ಮಾಡಗೊಡುತ್ತಿರಲಿಲ್ಲ. ಅವರು ಪರಹಿತದಿ ನಡೆದು ಪರಿಮಿತದಿ ನಡೆನುಡಿದು ಹೋದ ಮಹಂತರು, ಮಹಾತ್ಮರು.



# ವಾಕ್‌ಸಿದ್ಧಿ

ಇನಿವಾತಿಂದೊಲ್ವುದು ಮೇ
ದಿನಿಸುಂ ಬಿರುವಾತಿನಿಂದೆ ಮುರುಗುವುದು ಜನಂ।
ದಿನಪನ ಬಿಸುಗದಿರೋ ಚಂ
ದ್ರನ ತಣ್ಗದಿರೋ ಕಡಲ್ಗೆ ಮೊಳ್ಪುದು ಪೆರ್ಚಂ॥

--ನೀತಿಮಂಜರಿ.

ಸ್ವಾಮಿಗಳವರ ವಾಣಿಶುದ್ಧಿ ವಿಶಿಷ್ಟತರವಾದ್ದು, ವಿದ್ವತ್ಪ್ರಭಾವವುಳ್ಳದ್ದು. ಆ ಶಕ್ತಿಯನ್ನು ಅವರು ಕೇವಲ ಮೌನೋಪಾಸನೆಯಿಂದ ಪಡೆದವರಲ್ಲ. ಮಾತಾಡುವದನ್ನು ಅವರೆಂದಿಗು ನಿಲ್ಲಿಸಿರಲಿಲ್ಲ. ಮಿತಿಮೀರಿದ ಮಾಡಲರಿಯದ ಮಾತುಗಳನ್ನು ಬಳಸುತ್ತಿರಲಿಲ್ಲ. ನೂರು ಮಾತಿಗೆ ಮೂರು ಮಾತಿನಿಂದ ಉತ್ತರಿಸುತ್ತಿದ್ದರು. ತುಸುಮಾತಿನಲ್ಲಿಯೆ ತಳಮುಟ್ಟುವ ತೂಕವಿರುತ್ತಿತ್ತು. ಯಾವುದನ್ನು ಸಾಕಲ್ಯವಾಗಿ ಯೋಚಿಸಿ ಸುಸ್ಪಷ್ಟವಾಗಿ ಯೋಜಿಸಿ ಮಾತಾಡುತ್ತಿದ್ದರು. ಸ್ವಾಮಿಗಳವರು ಮಾತಾಡಿಯೂ ಮೌನಿಗಳು, ಮೌನೋಪಾಸಕರು. ಮೌನದ ಸಂಪೂರ್ಣ ಫಲವನ್ನು ಪಡೆದವರು; ಪರಿಣತಿಯನ್ನು ಹೊಂದಿದವರು.

‘ಮಾತು ಬಲ್ಲವ ಮಾಣಿಕ್ಯ ತಂದ, ಮಾತು ಬಾರದವ ಜಗಳ ತಂದ’ ‘ಮಾತಿಂದ ನಗೆ ನುಡಿಯು, ಮಾತಿಂದ ಹಗೆ ಹೊಗೆಯು.’ ‘ಏನು ಬಂದಿರಿ, ಹದುಳವಿದ್ದಿರಾ ಎಂದರೆ ನಿಮ್ಮ ಮೈಸಿರಿ ಹಾರಿ ಹೋಹುದೇ ...?’ ಇತ್ಯಾದಿ ಮಾತಿನ ಬಗೆ-ಬಣ್ಣ, ನಯ-ನೀತಿಗಳನ್ನು ಬೀರುವ ಹಿತನುಡಿಗಳನ್ನು ನೆನಸಿಕೊಂಡರೆ ಮಾತಿನ ಮಹತ್ವ ಮನಸ್ಸಿಗೆ ಬಂದಂತೆ ಮಾತಿನ ಅಧಮತೆಯು ಅಭಿವ್ಯಕ್ತವಾಗುತ್ತದೆ. ಮಾತಿನ ಭೇದದಿಂದಲೆ ಮನುಷ್ಯ ಭೇದಗಳು. ಮಾತಿಂದ ಮಹಾತ್ಮನಾಗಬಹುದು, ಮನುಷ್ಯನಾಗಬಹುದು; ಮನುಷ್ಯೇತರ ಪ್ರಾಣಿಯೂ ಆಗಬಹುದು.

ಮಾತುಗಾರಿಕೆ ಮನುಷ್ಯನ ಒಂದು ಹಿರಿಮೆ. ಈ ವಿಶಿಷ್ಟತೆಯನ್ನು ಇವನಲ್ಲದೆ ಇತರ ಪ್ರಾಣಿಗಳು ಪರಿಪೂರ್ಣವಾಗಿ ಪಡೆದಿಲ್ಲ. ಆದೇಕೆ ಮನುಷ್ಯರಲ್ಲಿಯೆ ಮೂಕರಾಗಿರುವವರೆಷ್ಟಿಲ್ಲ? ಮಾತು ಒರುವವರಲ್ಲಿ ಮಾತಿನ ಹಿರಿಮೆಯನ್ನು ಮಹಿಮೆಯನ್ನು ಅರಿಯದವರು ಎಷ್ಟಿಲ್ಲ? ಅರಿತವರಲ್ಲಿ ಅದನ್ನು ಮಿತದ ಹಿತದ ಹಾದಿಯಲ್ಲಿ ತಂದು ಆಡುವವರು ಅನುಷ್ಠಿಸುವವರು ಎಷ್ಟು ಜನರಿದ್ದಾರೆ? ಇದರಿಂದಾಗಿ ಮಾತಾಡುವುದೂ ಒಂದು ತಪಸ್ಸು. ಮಾತಿನ ಮರ್ಮವನರಿದು ಮಾತಾಡುವ ಶಕ್ತಿಶುದ್ಧಿಗಳು ಸುಮ್ಮನೆ ಬಾರವು, ಸರ್ವರಿಗು ಬಾರವು. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಗೊಳಗಾಗಿ ಮಾತಾಡಿದರೆ ಆ ಮಾತುಗಳಿಂದೇನು ಪ್ರಯೋಜನ? ಅಂಥವನ ಯೋಗ್ಯತೆ ಏತಕ್ಕೆ ಬರುತ್ತದೆ? ಕಾಮ – ಕ್ರೋಧೋಕ್ತಿಗಳು, ಮದ – ಮತ್ಸರದ ಮಾತುಗಳು ಎಂತಹ ಮಹಾತ್ಮನನ್ನು ಕೆಳಮಟ್ಟಕ್ಕೆ ತರುತ್ತವೆ. ನಿದರ್ಶನಕ್ಕಾಗಿ ಶಿವಶರಣರಲ್ಲಿಯು ಕೆಲವರು ಕ್ರೋಧಾವೇಶದ ಕಟೂಕ್ತಿಗಳ ನುಡಿದು ಇಂದಿಗೂ ಕಟುವಿಮರ್ಶೆಗೆ ಗುರಿಯಾಗಿದಾರೆ, ಕಡೆಯೆಡೆಗೆ ಕಾರಣರಾಗಿದಾರೆ.

ಕುಮಾರಸ್ವಾಮಿಗಳವರ ವಾಣಿಯಲ್ಲಿ ಈ ಯಾವ ಲೋಪದೋಷಗಳನ್ನು ಕಾಣುತ್ತಿರಲಿಲ್ಲ; ಕಾಣಲ್ಲಿ. ಅವರ ಯಾವ ಮಾತಿನಲ್ಲಿಯು ಅರಿಷಡ್ವರ್ಗದ ಉದ್ರೇಕವಿರಲಿಲ್ಲ. ಅವರ ನಡೆಯಲ್ಲಿಯೂ ಅರಿಷಡ್ವರ್ಗಕ್ಕೆ ಅವಕಾಶವಿರಲಿಲ್ಲ. ಅವರು ವಾಗ್ಜಾಲವನ್ನು ವಿಸ್ತರಿಸುತ್ತಿರಲಿಲ್ಲ. ವಾಗಾಡಂಬರವನ್ನು ವಿಕೀರ್ಣಿಸುತ್ತಿರಲಿಲ್ಲ. ಅವರ ಪ್ರತಿಮಾತಿನಲ್ಲಿ ವಿಚಾರ ವಿಚಕ್ಷಣತೆಗಳಿದ್ದವು. ವಿದ್ರವಿಸುವ ಶಕ್ತಿಯಿತ್ತು; ವಿಕಾಸಶಕ್ತಿಯಿತ್ತು. ವಿಜೇಯ ಚಿನ್ಹೆಯಿರುತ್ತಿತ್ತು, ವಿಜ್ಞಾನ ವಿತರಣೆಗಳ ಸುಳುಹಿರುತ್ತಿತ್ತು.

ಮಾತಿಗೆ ಮಾತನ್ನು ಅವರೆಂದಿಗು ಬೆಳಸುತ್ತಿರಲಿಲ್ಲ. ಆಡಿದ ಮಾತಿನಲ್ಲಿ ಮೆರಗಿಲ್ಲದಿರುತ್ತಿರಲಿಲ್ಲ. ಮಂತ್ರಶಕ್ತಿ ಸತಂತ್ರಶಕ್ತಿ ಅವರ ಮಾತುಗಳಲ್ಲಿದ್ದವು. ಅವರ ಮಾತುಗಳು ಮಂದರದಂತೆ ಅಚಲವಾಗಿದ್ದವು: ಮಾಂದಳಿರಂತೆ-ಮೃದುವಾಗಿದ್ದವು; ಮನೋಹಾರಿಯಾಗಿದ್ದವು, ಮಾಯದ ಮಾತು, ಮೋಸದ ಮಾತು ಅವರಲ್ಲಿಲ್ಲ.

ಅವರ ಒಂದೊಂದು ಮಾತು ಒಂದೊಂದು ಮಾಣಿಕ್ಯದಂತೆ ಇರುತ್ತಿದ್ದಿತೆಂದರೆ ಬೆಲೆಬಾಳದು. ಬಸವಣ್ಣನವರ ಮಾತಿನಲ್ಲಿ ಹೇಳಬೇಕೆಂದರೆ ಸ್ವಾಮಿ

ಗಳವರ ಮಾತುಗಳು ಮುತ್ತಿನ ಹಾರದಂತೆ ಅಂದವಾಗಿದ್ದವು. ರತ್ನದ ದೀಪ್ತಿಯಂತೆ ಜ್ಞಾನ ಬೆಳಗನ್ನೊಳಗೊಂಡಿದ್ದವು. ವಜ್ರದ ಶಲಾಕೆಯಂತೆ ಮಾರ್ಮಿಕವಾಗಿದ್ದವು; ಮೊನಚಾಗಿದ್ದವು. ಆತ್ಮಮೆಚ್ಚುಗೆಯಾಗಿದ್ದವು. ಜನಾಂಗದ ಉದ್ಧಾರ ಸಮರ್ಥವಾಗಿದ್ದವು.

ಈ ವಿಷಯದಲ್ಲಿ ನಮ್ಮದೇ ಒಂದು ದೃಷ್ಟಾಂತವನ್ನಿಲ್ಲಿ ಚಿತ್ರಿಸುತ್ತೇವೆ. ಇದೇ ಗ್ರಂಥಾರಂಭದಲ್ಲಿ ಹೇಳಿದಂತೆ ಶಿವಯೋಗ ಮಂದಿರಕ್ಕೆ ಸೇರಬೇಕೆಂದು ಅಣ್ಣಿಗೆರೆಯಲ್ಲಿ ಸ್ವಾಮಿಗಳವರ ದರ್ಶನಕ್ಕಾಗಿ ೧೯೨೪ ರಂದು ಹೋಗ ಲಾಯಿತು. ಸ್ವಾಮಿಗಳವರು ಹತ್ತಿರಕ್ಕೆ ಕರೆದು ಹಸ್ತನೋಡಿ ಅರೆಕ್ಷಣ ದಲ್ಲಿಯೆ, 'ಎಲ್ಲವು ಪರವಾಯಿಲ್ಲ, ಆರೋಗ್ಯ ಮಾತ್ರ ಸಾಕಷ್ಟಿಲ್ಲ. ಬುದ್ಧಿಗಂತು ಬಡತನವಿಲ್ಲ' ಎಂದು ಅಪ್ಪಣೆ ಕೊಡಿಸಿದರು. ಆ ಮಾತನ್ನು ಕೇಳಿ ಅಂದು ನನಗೆ ನಾನೆ ಆಶ್ಚರ್ಯಪಟ್ಟೆ. ಏಕೆಂದರೆ ಆ ವೇಳೆಗೆ ನನ್ನ ಮತಿ ಅಷ್ಟೇನು ಚುರುಕಾಗಿರಲಿಲ್ಲ. ಆ ಮಹಾನುಭಾವರ ಆ ಪ್ರಾಸಾದಿಕ ವಾಣಿ ಯಿಂದ ನನ್ನ ಬುದ್ಧಿ ನಿಶಿತವಾಯಿತು, ಇಂದಿನ ಈ ರೂಪ ತಾಳಿತು. ಇದು ಅವರ ಅಮೃತವಾಣಿಯ ಫಲ, ವಾಕ್ ಸಿದ್ಧಿಯ ಫಲ.

ಸ್ವಾಮಿಗಳವರ ಸಿದ್ಧಿಪೂರ್ಣವಾದ ಮಹಾವಾಣಿಯಿಂದ ಅನೇಕ ಮೂಕರಿಗೆ ಮಾತು ಬಂದವು. ಕುರುಡರಿಗೆ ಕಣ್ಣು ಬಂದವು. ಮಕ್ಕಳಿಲ್ಲದವರು ಮಕ್ಕಳನ್ನು ಪಡೆದರು. ದರಿದ್ರರು ಧನಿಕರಾದರು.

ಸ್ವಾಮಿಗಳವರ ಪ್ರತಿಮಾತಿನಲ್ಲಿ ಓಂಕಾರದ ಮಹತ್ತಿತ್ತು, ಶ್ರೀಕಾರದ ಸಂಪತ್ತಿತ್ತು. ಅವರ ಒಂದೊಂದು ಉಕ್ತಿ ಒಂದೊಂದು ನಿರುಕ್ತಿ. ಅದನ್ನು ಆಲಿಸಿ ಪಾಲಿಸಿದವರಿಗೆ ಪರಮುಕ್ತಿ.



# ಸತ್ಯಪಾಲನೆ

"ಎಡೆವಿಡದಿಪ ಸತ್ಯದಿಂ ತಪಮುಂಟೆ ?"

— ಸಜಗುಣರು.

ಬಹು ಬಳಕೆಯಿಂದ ಸತ್ಯ ಶಬ್ದವು ಸಣ್ಣದಾಗಿ ತೋರಿದರೂ ಸತ್ಯ ಪರಿಪಾಲನೆ ಸಣ್ಣದಲ್ಲ. ಸಾಮಾನ್ಯವಲ್ಲ. ಸತ್ಯಕ್ಕಾಗಿ ಹರಿಶ್ಚಂದ್ರನು ಪಟ್ಟ ಪಾಡನ್ನು ನೆನಸಿಕೊಂಡರೆ ನಮ್ಮ ಮಾತಿನ ಸತ್ಯತೆ ಸ್ಪಷ್ಟವಾಗಿ ತೋರುತ್ತದೆ.

ಕಂಡುದುದನ್ನು ಕಂಡಂತೆ ಹೇಳುವುದು ಮಾಡಿದುದನ್ನು ಮರೆಮಾಜದೆ ಹೇಳುವುದು ಸತ್ಯದ ಒಂದು ಲಕ್ಷಣವಾದರೆ, ನುಡಿದಂತೆ ತಪ್ಪದೆ ನಡೆಯುವುದೂ ಮತ್ತೊಂದು ಲಕ್ಷಣ. ಆಗ ಆಗುವುದು ಸತ್ಯದ ಸಲ್ಲಕ್ಷಣ.

ಇಂತಹ ಪರಿಪೂರ್ಣ ಸತ್ಯಕ್ಕೆ ಸ್ವಾಮಿಗಳವರು ಆಶ್ರಯದಾತರಾಗಿದ್ದರು. ಈ ಸತ್ಯ ಪರಿಪಾಲನೆಗೆ ಸಾವನ್ನೂ ಅಪ್ಪಲು ಸಂತೋಷಚಿತ್ತದಿಂದ ಸನ್ನದ್ಧರಿದ್ದರು. ಸತ್ಯಕ್ಕಾಗಿ ಸಾವುದೆ ಶಿವೈಕ್ಯವೆಂದು ಸಾರುತ್ತಿದ್ದರು.

ಪರರು ಸಹ ಅಸತ್ಯ ನುಡಿದರೆ ಅವರು ಸಹಿಸುತ್ತಿರಲಿಲ್ಲ. ಅನ್ಯರು ಮಾಡಿದ ಅನಾಚಾರವನ್ನಾದರು ಸಹಿಸುತ್ತಿದ್ದರು, ಅಸತ್ಯವನ್ನು ಸಹಿಸುತ್ತಿರಲಿಲ್ಲ. ತಪ್ಪುನಡೆದು ತಪ್ಪು ನುಡಿದರೆ ಪಾತಕಕ್ಕೆ ಮತ್ತೊಂದು ಪಾತಕವನ್ನು ಸಂಪಾದಿಸಿದಂತೆ. ಆತ ನಡೆ ತಪ್ಪುಕನಲ್ಲದೆ ನುಡಿತಪ್ಪುಕನೂ ಆಗಿ ಉಭಯ ಪಾತಕಿಯಾಗಿ ಉತ್ತನಿಕೆಗೆ ನೀರು ಬಿಟ್ಟಂತೆಯೆ, ಎಂದು ಅಪ್ಪಣೆಕೊಡಿಸುತ್ತಿದ್ದರು.

ಯಾರಾದರು ಆಕಸ್ಮಿಕವಾಗಿ ತಪ್ಪುಮಾಡಿ ಒಪ್ಪು ನುಡಿದರೆ ಅವರನ್ನು ಸ್ವಾಮಿಗಳವರು ಕ್ಷಮಿಸುತ್ತಿದ್ದರು. ಅವರ ಸತ್ಯತೆಗೆ ಸಂತೋಷಪಡುತ್ತಿದ್ದರು. ಲಾಭಬಂದ ವ್ಯಾಪಾರಿಯಂತಾಗುತ್ತಿದ್ದರು. ಮತ್ತೊಮ್ಮೆ ತಪ್ಪಬೇಡೆಂದು ಅಪರಾಧಿಗೆ ತಿಳಿಹೇಳಿ ಕಳುಹುತ್ತಿದ್ದರು, ಕೃಪೆ ತೋರುತ್ತಿದ್ದರು.

ತಪ್ಪು ಮಾಡದಿರುವುದು ಯಾರಿಂದಲು ಸಾಧ್ಯವಿಲ್ಲ. ತಪ್ಪನ್ನು ಒಪ್ಪಿಕೊಳ್ಳುವುದರಲ್ಲಿ ಜಾಣ್ಮೆಯಿದೆ; ಜಾಗ್ರತೆಯಿದೆ. ತಪ್ಪುವ ಪಾತಕಕ್ಕಿಂತಲು ಸುಳ್ಳಿನ ಪಾಪ ದೊಡ್ಡದು, ದಮುಸೀಯವಾದುದು. ಅದರಲ್ಲಿಯು

ನುಡಿದು ನಡೆಯದಿರುವುದು ಮತ್ತೂ ಮಹಾಪಾತಕ; ಆತ ಆತ್ಮಘಾತಕ. ಈ ಹುಸಿಯನಾಡುವವನೆ ನಿಜವಾದ ಹೊಲೆಯ. ಆತನಿಗೆ ಅದಕ್ಕಿಂತ ಬೇರಿಲ್ಲ ನಿರಯ ಎಂಬುದು ಸ್ವಾಮಿಗಳವರ ಹೇಳಿಕೆ.

ಸಮಾಜ ಸೇವಕರು ಸಮತಾಭಾವಿಗಳು ಮೊದಲು ಸತ್ಯದತ್ತ ಗಮನಿಸ ಬೇಕು. ಸತ್ಯದ ಸಂಪೂರ್ಣ ಲಕ್ಷಣವನ್ನು ಲಕ್ಷಿಸಬೇಕು. ಇಲ್ಲದಿದ್ದರೆ ಸರ್ವಸ್ವನಾಶಕ್ಕೆ ಕಾರಣ. ತನ್ನ ನಾಲಗೆಯನ್ನೇ ನಿಯಂತ್ರಿಸದವನು ಇನ್ನೇನು ನಿಯಂತ್ರಿಸಬಲ್ಲ; ನಿಯಾಮಿಸಬಲ್ಲ. ವ್ಯಕ್ತಿ ಜೀವನದಲ್ಲಿ ಅಸತ್ಯ ಆಡಿದರೆ ವ್ಯಕ್ತಿಗೊಬ್ಬನಿಗೆ ನಷ್ಟ, ಕಷ್ಟ. ಅದೇ ಸಾಮಾಜಿಕ ಸೇವಕನು ಸತ್ಯಕ್ಕೆ ಪಾಲುಮಾರಿದರೆ ತಾನೊಬ್ಬನಲ್ಲದೆ ಸಮಾಜವು ನಷ್ಟ ಕಷ್ಟಗಳಿಗೆ ಗುರಿಯಾಗ ಬೇಕಾಗುತ್ತದೆ. ಆದ್ದರಿಂದ ಸತ್ಯದ ಹೊಣೆಗಾರಿಕೆಯು ಸಮಾಜಸೇವಕರ ಮೇಲೆ ಹೆಚ್ಚಾಗಿಯೆ ಇದೆ. ನಿಯೋಗಿಯಾದವನು ನಿಜನುಡಿ – ನಿಜನಡೆ ಗಳತ್ತ ನಿರಂತರ ಗಮನಕೊಡಬೇಕು ಎಂಬುದಾಗಿ ಎಚ್ಚರಿಕೆಯನ್ನು ಸಾಧಕರಿಗೆ ಯಾವಾಗಲು ಕೊಡುತ್ತಿದ್ದರು.

ಸತ್ಯ ಸಾಧನೆ ಒಂದು ಪಥ್ಯ. ಮಿಥ್ಯಾಸಾಧನೆ ಒಂದು ಅಪಥ್ಯ. ಭವ ರೋಗಿಗೆ ಯಾವಾಗಲು ಅಪಥ್ಯದ ಮೇಲೆಯೆ ಅಪೇಕ್ಷೆ. ಅದು ಅಧರಕ್ಕೆ ಸಿಹಿ, ಉದರಕ್ಕೆ ಕಹಿ. ಅದರಿಂದ ಅವನ ರೋಗ ನಿವಾರಣೆಯಾಗದು. ಭವಭವಾಂತರದಲ್ಲಿಯು ಬಿಡದು.

ಪಥ್ಯದ ಮಾತು ಪರಿಶ್ರಮವಾಗಿ ಕಂಡರು ಪರಿಣಾಮಕಾರಿ, ಪರಿಭವ ಪರಿಹಾರಿ. ಸತ್ಯವ ನುಡಿವುದೆ ಸತ್ಯಲೋಕ, ಸತ್ಯಕ್ಕೆ ಸಾವಿಲ್ಲ. ಸತ್ಯಕ್ಕಿಂತಲು ಬೇರೆ ತಪಸ್ಸಿಲ್ಲ. ಸತ್ಯವಂತನೆ ಸಾಧುವಂತ; ಶ್ರೇಷ್ಠ ಕುಲವಂತ. ಜಾಬಾ ಲೆಯ ಮಗ ಸತ್ಯಕಾಮನು ಸತ್ಯಮಾತಿನಿಂದಲೆ ಹಾರಿದ್ರುಮರ ಶಿಷ್ಯನಾದನು, ಶ್ರೇಷ್ಠನಾದನು ಎಂಬುದಾಗಿ ಬೋಧಿಸುತ್ತಿದ್ದರು.

ಸ್ವಾಮಿಗಳವರ ಸತ್ಯಪ್ರೇಮ ಅಪಾರವಾಗಿತ್ತು. 'ಹರನೇ ಸತ್ಯ ಸತ್ಯವೇ ಹರ' ಎಂಬುದನ್ನು ಅವರು ಅರಿದು ಅಳವಡಿಸಿಕೊಂಡಿದ್ದರು. ಆ ಮಾತಿಗೆ ಅವರೇ ಸತ್ಯಸಾಕ್ಷಿಯಾಗಿದ್ದರು. ಅಸತ್ಯ ಅಪಥ್ಯವನ್ನೇ ಅವರ ಜೀವನದಲ್ಲಿ ಅವರು ಕಂಡಿಲ್ಲ, ಕಂಡವರಿಲ್ಲ.

---

# ದೃಷ್ಟಿಶುದ್ಧಿ

'ದೃಷ್ಟಿಯಿಂದ ಸೃಷ್ಟಿ' ಎಂಬುದು ಸರ್ವಸಾಮಾನ್ಯವಾದ ಮಾತು. ಇದು ಸ್ವಾಮಿಗಳವರ ವಿಷಯದಲ್ಲಿ ವಿಪರೀತವಾಗಿತ್ತು. ಸ್ವಾಮಿಗಳವರ ದೃಷ್ಟಿ ಸಾಮಾನ್ಯರಂತೆ ಸೃಷ್ಟಿಗೆ ಎಳಸುತ್ತಿರಲಿಲ್ಲ. ಪ್ರತಿಯಾಗಿ ಸೃಷ್ಟಿಯೆ ಸ್ವಾಮಿಗಳವರ ದೃಷ್ಟಿಯಲ್ಲಿ ನೆಲೆಸಿತ್ತು. ಸ್ವಾಮಿಗಳವರ ದೃಷ್ಟಿಯೋಗ ಅಂತಹ ಅಪೂರ್ವವಾದುದು. ಅವರು ತಮ್ಮ ಯೋಗದೃಷ್ಟಿಯಿಂದ ಎಲ್ಲ ಪ್ರಪಂಚವನ್ನು ಅರಿಯುತ್ತಿದ್ದರು. ಪ್ರಪಂಚವನ್ನು ನೋಡವುದೆಂದರೆ ಚರ್ಮ ಚಕ್ಷುಗಳಿಂದ ಮಾತ್ರ ನೋಡುವುದಲ್ಲ. ಪ್ರಪಂಚಕ್ಕೆ ಒದಗುವ ಆಗು-ಹೋಗುಗಳನ್ನು ಅರಿಯುವುದೆ ನಿಜವಾದ ದೃಷ್ಟಿಶುದ್ಧಿ. ಇದು ಸ್ವಾಮಿ ಗಳವರಲ್ಲಿ ಕರಿಗೊಂಡಿತ್ತು.

ಯಾವ ವಸ್ತುವನ್ನೆ ಆಗಲಿ ಯಾವ ವ್ಯಕ್ತಿಯನ್ನೆ ಆಗಲಿ ನೋಡಿ ಮೋಹಿಸದಿರುವುದೆ ನಿಜವಾದ ದೃಷ್ಟಿಶುದ್ಧಿ. ಪ್ರತಿಯಾಗಿ ವಸ್ತು - ವ್ಯಕ್ತಿಗಳು ಪವಿತ್ರವಾಗಿ ಪರಿಣಮಿಸಬೇಕು, ಪರಮಾರ್ಥ ಸಾಧಕಗಳಾಗಿ ಮಾರ್ಪಡ ಬೇಕು. ಅದು ಸತ್ಯವಾದ ದೃಷ್ಟಿಶುದ್ಧಿ. ಇವೆಲ್ಲವು ಸ್ವಾಮಿಗಳವರ ದಿವ್ಯ ದೃಷ್ಟಿಯಲ್ಲಿ ನೆಲೆಗೊಂಡಿತ್ತು.

ಸ್ವಾಮಿಗಳವರು ತಮ್ಮ ಆ ದಿವ್ಯಚಕ್ಷುಸ್ಸಿನಿಂದ ಎಂತಹ ಜಟಿಲ ಪ್ರಶ್ನೆ ಗಳನ್ನು ಸಹ ಬಗೆಹರಿಸುತ್ತಿದ್ದರು. ಅವರು ಊರ್ಧ್ವದೃಷ್ಟಿಯಿಂದ ವಿಕಸಿತ ದೃಷ್ಟಿಯಿಂದ ಕುಳಿತಲ್ಲಿ ಯಾವುದೂ ವಿಷಯವಾಗದೆ ಉಳಿಯುತ್ತಿರಲಿಲ್ಲ. ಆ ನೇತ್ರಗಳಲ್ಲಿ ಅಂತಹ ಅಪೂರ್ವ ತೇಜಸ್ಸಿತ್ತು, ಓಜಸ್ಸಿತ್ತು.

ಸ್ವಾಮಿಗಳವರು ತಮ್ಮ ದಿವ್ಯಾವಲೋಕನದಿಂದ ಹೀಗೆ ಅಪ್ಪಣೆ ಕೊಡಿಸುತ್ತಿದ್ದರು. ಮುಂದೆ ಜಗತ್ತಿನಲ್ಲಿ ಜಾತಿಭೇದಗಳಿರುವುದಿಲ್ಲ. ಜನ ಗಳಲ್ಲಿ ಭಕ್ತಿಭಯಗಳಿರುವುದಿಲ್ಲ. ನೀತಿ ನಿಯಮಗಳು ನಿಲ್ಲುವುದಿಲ್ಲ. ಶಾಂತಿ ಸೌಖ್ಯಗಳು ಜಲಮರೀಚಿಕೆಯಂತಾಗುವವು. ಮಾತಿನ ಮಂಟಪ ಕಟ್ಟುವರು. ಕೃತಿರಂಗದಲ್ಲಿ ಹಿಂದುಳಿವರು - ಎಂದು ಮುಂತಾಗಿ. ಇಷ್ಟ

ರಲ್ಲಿಯೆ ಇದೆಲ್ಲವು ಸತ್ಯವಾಗಿದೆ. ಕಣ್ಣೆದುರು ಕಟ್ಟಿದಂತಿದೆ. ಅದೇಕೆ, ಅನುಭವಿಸುತ್ತಲೂ ಇದ್ದೇವೆ.

ಸ್ವಾಮಿಗಳವರು ತಮ್ಮ ಎಡಹಸ್ತದ ತರ್ಜನಿ ಬೆರಳನ್ನು ಎಡಗಣ್ಣಿನ ಕಡೆಭಾಗಕ್ಕಿರಿಸಿ ಸಿಟ್ಟಾಲಿಯಿಂದ ನೋಡುತಿದ್ದುದು ಅವರದೇ ಆದ ಒಂದು ದೃಷ್ಟಿಯೋಗ. ಆ ಯೋಗದಿಂದ ಅವರ ದೃಷ್ಟಿ ಆತ್ಮದೃಷ್ಟಿಯಾಗಿ ಪರಿಣಮಿಸಿತ್ತು. ಆತ್ಮಾರಣಿಯಾಗಿ ಪರಿಣತಿಗೊಂಡಿತ್ತು, ಅವರ ಆ ದಿಟ್ಟಿ ಅವಿಕಲವಾಗಿತ್ತು, ಅವಿರಳವಾಗಿತ್ತು. ನಿಜವಾಗಿಯು ಅವರು ಆತ್ಮದ್ರಷ್ಟಾರರು, ಆತ್ಮಸ್ರಷ್ಟಾರರು.

ಅವರ ಆ ತೇಜೋಮಯ ದೃಷ್ಟಿಯ ಸಂಪರ್ಕದಿಂದ ಪಂಚಭೂತಗಳು ಪ್ರಪಂಚ ಪದಾರ್ಥಗಳು ಪ್ರತಿವ್ಯಕ್ತಿಯು ಪವಿತ್ರವಾಗುತ್ತಿದ್ದವು. ಪ್ರಕೃತಿಸ್ವಭಾವವನ್ನು ಮೀರುತ್ತಿದ್ದವು.

ಇವಕ್ಕೆ ನಿದರ್ಶನವಾಗಿ ಒಮ್ಮೆ ಒಂದು ಪ್ರಸಂಗ ಜರಗಿತು. ಬೆಂಗಳೂರಿನ ಕೆಲ ಪ್ರಮುಖಭಕ್ತರು ಶಿವಯೋಗಮಂದಿರಕ್ಕೆ ಸ್ವಾಮಿಗಳವರ ದರ್ಶನಕ್ಕೆ ಬಂದರು. ಸ್ವಾಮಿಗಳವರು ಮೇಲ್ಮಾರದ ಮುಂಭಾಗದಲ್ಲಿ ಸಾಧಕ ಸಮೂಹದೊಡನೆ ಶಿವಾನುಭವ ಗೋಷ್ಠಿಯಲ್ಲಿದ್ದರು. ಬಂದ ಭಕ್ತರು ಸ್ವಾಮಿಗಳವರ ಸಮ್ಮುಖದಲ್ಲಿ ಹಣ್ಣಿನ ತಟ್ಟೆಯನ್ನಿಟ್ಟು ಕರ್ಪುರವನ್ನು ಅಂಟಿಸಿದರು. ಸಾಷ್ಟಾಂಗವೆರಗಿ ಎದ್ದು ಅಪ್ಪಣೆ ಪಡೆದು ಮುಂಭಾಗದಲ್ಲಿಯೆ ಕುಳಿತರು. ಅಷ್ಟರಲ್ಲಿ ಗಾಳಿ ಸುಳಿಯತೊಡಗಿತು. ಕರ್ಪುರದ ಉರಿ ಅಲ್ಲಾಡತೊಡಗಿತು. ಗಾಳಿ ಬಿರುಗಾಳಿಯಾಗಿ ಬೀಸತೊಡಗಿತು. ಉರಿವ ಕರ್ಪುರ ಆರುವದೆಂದು ಅವರಲ್ಲೊಬ್ಬರು ಎದ್ದುಬಂದು ಅದರ ಸುತ್ತು ಕೈಹಿಡಿದರು. ಗಾಳಿ ತಾಕದಂತೆ ಮಾಡಿದರು. ಪಕ್ಕದಲ್ಲಿದ್ದ ಮತ್ತೊಬ್ಬರು ಸನ್ನೆಮಾಡಿ ಕೈ ಬಿಡಿಸಿದರು. ಸ್ವಾಮಿಗಳವರಲ್ಲಿ ಶಕ್ತಿಯಿದ್ದರೆ ಗಾಳಿಗೆ ಕರ್ಪುರದ ಉರಿ ಆರದಿರಲಿ ಎಂಬುದೇ ಅವರ ಮನೀಷೆ, ಆ ಸನ್ನೆಯ ಉಪದೇಶ. ಇದನ್ನೆಲ್ಲ ಸ್ವಾಮಿಗಳವರು ಅವಲೋಕಿಸಿದರು. ಅವರಿಗಿಂತವನ್ನು ಅರಿತರು.

ಎಂದಿನಂತೆ ತಮ್ಮ ಎಡಗೈ ತೋರು ಬೆರಳನ್ನು ಎಡಗಣ್ಣಿನ ಕೊನೆಯಲ್ಲಿರಿಸಿ ನಟ್ಟನೋಟದಿಂದ ಉರಿವ ಕರ್ಪುರವನ್ನು ನಿರೀಕ್ಷಿಸಿದರು. ಅಲ್ಲಾಡುತ್ತಿರುವ ಉರಿ ಅಲ್ಲಾಡದಂತಾಯಿತು. ನಿರ್ವಾತ ಪ್ರದೇಶ ದೀಪದಂತೆ ನೆಟ್ಟಗೆ

ಉರಿಯತೊಡಗಿತು. ಬಿರುಗಾಳಿ ಬೀಸುತ್ತಿದ್ದರೂ ನಂದಲಿಲ್ಲ.* ಇದನ್ನೆಲ್ಲ ಕಣ್ಣಾರೆ ಕಂಡ ಆ ಭಕ್ತರು ಮನಸಾರೆ ಮೆಚ್ಚಿದರು. ಸ್ವಾಮಿಗಳವರ ಆ ದೃಷ್ಟಿ ಶುದ್ಧಿಗೆ ದಿವ್ಯಶಕ್ತಿಗೆ ಅಚ್ಚರಿಗೊಂಡರು. ಆನಂದ ತುಂದಿಲರಾದರು.

"ಆಲಿ ನಿಂದೊಡೆ ಸುಳಿದು ನೋಡುವ ಗಾಳಿ ನಿಲುವುದು.
ಗಾಳಿ ನಿಂದೊಡೆ ಮನವು ನಿಲುವುದು. ಮನವು ನಿಂದೊಡೆ
ಮಾಯೆ ಹೇಳ ಹೆಸರಿಲ್ಲದಂತಹುದು ಬಸವ ಕೇಳೆಂದ."

ಎಂದು ಸ್ವಾಮಿಗಳವರು ಯಾವಾಗಲು ಈ ವಚನವನ್ನು ಅಪ್ಪಣೆ ಕೊಡಿಸುತ್ತಿದ್ದರು. ಈ ವಚನದಂತೆ ಅವರು ಬರೀ ಅಂತರಂಗದಲ್ಲಿಯೆ ಅಲ್ಲ ಬಹಿರಂಗದಲ್ಲಿಯೂ ಸಹ ಆಲಿ, ಗಾಳಿಗಳನ್ನು ನಿಲ್ಲಿಸಿದ್ದರು. ಮನ ಮಾಯೆಗಳನ್ನು ಗೆದ್ದಿದ್ದರು. ಸ್ವಾಮಿಗಳವರ ಅಂತರ್ದೃಷ್ಟಿ ಬಹಿರ್ದೃಷ್ಟಿಗಳೆರಡು ಶುದ್ಧಿಯಾಗಿದ್ದವು, ಸ್ವಪ್ರಕಾಶಿತವಾಗಿದ್ದವು. ಅವರ ಅಂತರ್ದೃಷ್ಟಿಯಲ್ಲಿ ಆತ್ಮಜ್ಯೋತಿಯು ತುಂಬಿತುಳುಕಿದ್ದರೆ ಬಹಿರ್ದೃಷ್ಟಿಗಳೊಂದರಲ್ಲಿ ಸೂರ್ಯಕಾಂತಿಯಿತ್ತು, ಇನ್ನೊಂದರಲ್ಲಿ ಚಂದ್ರಕಾಂತಿಯಿತ್ತು.

---

* ಒಳಉಸಿರಿನಿಂದ ಸ್ವಾಮಿಗಳವರ ಆತ್ಮಜ್ಯೋತಿ ನಂದದೆ ತೊಳಗಿ ಬೆಳಗುತ್ತಿರುವಂತೆ ಹೊರಗೆ ಅವರ ಆ ದಿವ್ಯದೃಷ್ಟಿಯ ಬಲದಿಂದ ಹೊರಗಾಳಿಗೆ ಕರ್ಪೂರದ ಉರಿ ಆರದೆ ಅವಿಚಲವಾಗಿ ಉರಿಯಿತು



# ಸ್ವಪ್ನಸಿದ್ಧಿ

ಸ್ವಪ್ನ ಸುಳ್ಳೆಂದು ಪ್ರತೀತಿಯಿದೆ, ಪ್ರಸಿದ್ಧಿಯಿದೆ. ಆದರಿದು ಸ್ವಾಮಿಗಳವರ ವಿಷಯದಲ್ಲಿ ಪರಿಭ್ರಮೆ; ಪರಿಹಾರ್ಯ. ಏಕೆಂದರೆ ಅವರ ಸ್ವಪ್ನ ಸೃಷ್ಟಿ ಸತ್ಯವಾಗಿತ್ತು. ಸ್ವಪ್ನದೃಷ್ಟಿ ಸಿದ್ಧಿಯಾಗಿತ್ತು.

ಸಂದಿಗ್ಧ ವಿಷಯಗಳಲ್ಲಿ ಒಂದು ನಿರ್ಣಯಕ್ಕೆ ಬರಬೇಕಾದಲ್ಲಿ ಸ್ವಾಮಿಗಳವರು ಸ್ವಪ್ನವನ್ನು ಕಾಣದ ವಿನಹ ಯಾವ ನಿರ್ಣಯಕ್ಕೆ ಬರುತ್ತಿರಲಿಲ್ಲ. ನಾಳೆಯದಿನ ನಿರ್ಣಯವನ್ನು ಹೇಳುತ್ತೇನೆಂದು ಹೇಳಿ ಮುಗಿಸುತ್ತಿದ್ದರು. ರಾತ್ರಿ ಪವಡಿಸಿದ ಮೇಲೆ ಅದೇ ವಿಷಯವಾಗಿಯೆ ಅವರು ಸ್ವಪ್ನಕಾಣುತ್ತಿದ್ದರು. ಆ ಸ್ವಪ್ನದಲ್ಲಿಯೆ ಒಂದು ತೀರ್ಮಾನಕ್ಕೆ ಬರುತ್ತಿದ್ದರು. ಅದನ್ನೆ ಅವರು ಮರುದಿನ ನಿರ್ಣಯವಾಗಿ ಹೇಳಿ ಬಿಡುತ್ತಿದ್ದರು. ಅದೆ ಸತ್ಯವಾಗಿ – ಸಹಜವಾಗಿ ಪರಿಣಮಿಸುತ್ತಿತ್ತು. ಅದರಂತೆಯೆ ಸಿದ್ಧಿಯಾಗಿ ತೋರುತ್ತಿತ್ತು.

ಒಂದು ಸಲ ಹಲವರು ಸೇರಿ ಎಡೆಯೂರ ತೋಂಟದ ಸಿದ್ಧಲಿಂಗೇಶ್ವರನ ಸಮಾಧಿ ದರ್ಶನಕ್ಕೆಂದು ಹೋಗಿದ್ದರು. ಸಮಾಧಿಗೆ ಕೆಲವರು ನಮಸ್ಕರಿಸಿದರು. ಕೆಲವರು ನಮಸ್ಕರಿಸಲಿಲ್ಲ. ಇವರು ಸಮಾಧಿಗಳಿಗೆ ಲಿಂಗವಂತರು ನಮಸ್ಕರಿಸಬಹುದೆ? ಎಂದು ಪ್ರಶ್ನೆ ಎತ್ತಿದರು. ಚರ್ಚೆಗಾರಂಭವಾಯಿತು. ಬಹಳ ಹೊತ್ತು ಚರ್ಚೆ ನಡೆಯಿತು. ತೀರ್ಮಾನವಾಗಲಿಲ್ಲ. ಈ ಚರ್ಚೆ ಅಲ್ಲಿಗೆ ನಿಲ್ಲದೆ ಸ್ವಾಮಿಗಳವರ ಸಮ್ಮುಖಕ್ಕೆ ಬಂದು ತಲುಪಿತು. ಆಗ ಸ್ವಾಮಿಗಳವರು ಸಹ ಆ ವಿಷಯದಲ್ಲಿ ಸಂದಿಗ್ಧ ಮನಸ್ಕರಾಗಿ ಏನನ್ನು ಉತ್ತರಿಸದೆ ನಾಳೆ ಯಾವುದಕ್ಕು ತಿಳಿಸುತ್ತೇನೆಂದು ಹೇಳಿ ಎಲ್ಲರನ್ನು ಸದ್ಯಕ್ಕೆ ಸಮಾಧಾನಗೊಳಿಸಿದರು.

ಆ ರಾತ್ರಿ ಅವರ ಗುರುಗಳು ಬಂದು ಸಿದ್ಧಲಿಂಗೇಶ್ವರನ ಸಮಾಧಿಗೆ ವಂದಿಸಿದಂತೆ ಸ್ವಪ್ನವನ್ನು ಕಂಡರು. ತಮ್ಮ ಗುರು ತೋರಿದ ಮಾರ್ಗ. ಲಿಂಗೈಕ್ಯರ ಸಮಾಧಿಗೆ ನಮಸ್ಕರಿಸುವುದರಿಂದ ಯಾವ ಪ್ರತ್ಯವಾಯವಿಲ್ಲ

ಎಂದು ನಿಶ್ಚಯಿಸಿ ಅದನ್ನೇ ತಮ್ಮ ಶಿಷ್ಯರಿಗೆಲ್ಲ ಮರುದಿನ ಬೋಧಿಸಿದರಂತೆ ; ಇದೊಂದೆ ಅಲ್ಲ. ಎಂತೆಂತಹ ಮಹಾಕಾರ್ಯಗಳಲ್ಲೆಲ್ಲ ಸಂದಿಗ್ಧವೊದಗಿ ಯಾವ ಮಾರ್ಗದಿಂದ ಹೋದರೆ ಕಾರ್ಯಸಿದ್ಧಿಯಾಗುವುದೆಂಬುದು ಮನಸ್ಸಿಗೆ ಹೊಳೆಯದಿದ್ದಲ್ಲಿ ಅವಕ್ಕೆಲ್ಲ ಒಂದೊಂದು ರಾತ್ರಿಯ ಅವಕಾಶವನ್ನು ಕಲ್ಪಿಸಿಕೊಂಡು ಸ್ವಪ್ನಮುಖದಿಂದ ಒಂದು ತೀರ್ಮಾನಕ್ಕೆ ಬರುತ್ತಿದ್ದರು. ಅದೇ ಮಾರ್ಗದಿಂದ ಮುನ್ನಡೆದು ಆ ಮಹಾಕಾರ್ಯಗಳಲ್ಲಿ ಸಂಪೂರ್ಣ ಸಿದ್ಧಿ ಯಶಸ್ಸುಗಳನ್ನು ಪಡೆಯುತ್ತಿದ್ದರು. ಅವರ ಸ್ವಪ್ನ ಸಿದ್ಧಿಯು ಹೀಗೆ ಅನರ್ಘವಾಗಿತ್ತು. ಅಮೋಘವಾಗಿತ್ತು.

ಅವರು ತಮ್ಮ ಜೀವಿತದಲ್ಲಿ ಒಂದು ಸಲವಾದರು ದುಃಸ್ವಪ್ನವನ್ನು ಕಂಡವರಲ್ಲ. ದುರಾಚಾರ – ದುರ್ಭಾವಿಗಳಿಗೆ ಒಳಗಾದವರಲ್ಲವೆ ದುಃಸ್ವಪ್ನಗಳ ಅವತಾರ; ಅವರ ಹತ್ತಿರಕ್ಕೆ ಅವು ಸುಳಿಯಕೂಡದು. ಪಂಚಜ್ಞಾನೇಂದ್ರಿಯಗಳು ಪರಿಶುದ್ಧವಾಗಿದ್ದವು; ಪರಿಶುಭ್ರವಾಗಿದ್ದವು. ಹಿಂದೆ ಹೇಳಿದಂತೆ ಅವರ ನಾಲಗೆ ನಯನಗಳು ಪವಿತ್ರವಾಗಿದ್ದಂತೆ ಘ್ರಾಣ ಶ್ರೋತ್ರಗಳು, ಪರಿಶುದ್ಧವಾಗಿದ್ದವು. ನಾಸಿಕದಿಂದ ಮೋಹಕಗಂಧಗಳನ್ನು ಮೂಸುತ್ತಿರಲಿಲ್ಲ. ಶ್ರೋತ್ರದಿಂದ ಶೃಂಗಾರ ಸಂಗೀತವನ್ನು ಶಬ್ದವನ್ನು ಕೇಳುತ್ತಿರಲಿಲ್ಲ. ನೇತ್ರದಿಂದ ಮೋಹಕವಸ್ತುವನ್ನು ವ್ಯಕ್ತಿಯನ್ನು ಚಿತ್ರವನ್ನು ನೋಡುತ್ತಿರಲಿಲ್ಲ. ಮಾದಕ ತಾಮಸ ಆಹಾರಗಳಿಗೆ ಅವರ ನಾಲಗೆ ಎಡೆಯಾಡುತ್ತಿರಲಿಲ್ಲ. ಮನಸ್ಸು ಸಮಾಜ-ವಿಷಯೋಗಗಳ ಎಲ್ಲೆಯನ್ನು ಮೀರಿ ಹೋಗುತ್ತಿರಲಿಲ್ಲ. ಇದರಿಂದಾಗಿ ಸುಳ್ಳು ಜೊಳ್ಳು ಸ್ವಪ್ನಗಳನ್ನೆ ಅವರು ಕಂಡಿರಲಿಲ್ಲ. ದುಷ್ಪರಿಣಾಮಿ ಸ್ವಪ್ನಗಳೇ ಅವರ ಬಳಿ ಸುಳಿಯಲಿಲ್ಲ. ಸತ್ಕಾರ್ಯ ನಿರ್ಣಯಗಳಿಗಾಗಿ ಮಾತ್ರ ಸತ್ಯಸಂಕಲ್ಪದಿಂದ ಸ್ವಪ್ನಗಳನ್ನು ಕಾಣುತ್ತಿದ್ದರು. ಅವು ಅವರ ಸತ್ಯಸೃಷ್ಟಿ, ಸಿದ್ಧಿಸೃಷ್ಟಿ.



# ಯೋಗ - ಯೋಗಿ

ಕುಮಾರಯೋಗಿಯ ಪಂಚಜ್ಞಾನೇಂದ್ರಿಯ ಮತ್ತು ಸ್ವಪ್ನಗಳ ಶುದ್ಧಿ ಸಿದ್ಧಿಗಳನ್ನು ನೋಡಿಯಾಯಿತು. ಇನ್ನು ಇವಕ್ಕೆಲ್ಲ ಕಾರಣವಾದ ಮನದ ನಿರ್ಮಲತೆಯನ್ನು ನೋಡಬೇಕು; ನಿಶ್ಚಲತೆಯನ್ನು ನಿರೀಕ್ಷಿಸಬೇಕು. ಇವೆರಡನ್ನು ಅವರು ಪಡೆದದ್ದು ಯೋಗ ಮಾರ್ಗದಿಂದ. ಅದರಿಂದಾಗಿ ಅವರು ಪರಮಯೋಗಿಗಳಾದರು. ಅದು ಕಾರಣ ಅಂತಹ ಯೋಗವವಿಚಾರವನ್ನು ಇಲ್ಲಿ ಯಥಾಮತಿಯಾಗಿ ಮೊದಲು ಮಾಡಲಾಗುತ್ತದೆ.

ಯೋಗ ಮಾರ್ಗವು ಪುರಾತನದ್ದು. ಪರಮ ಪವಿತ್ರಮಾರ್ಗಗಳಲ್ಲಿ ಒಂದಾದದ್ದು. ಯೋಗದ ಅರ್ಥವು ವಿಶಾಲವಾದದ್ದು, ವಿಶಿಷ್ಟವಾದದ್ದು. ಇಲ್ಲದ್ದು ನೆರೆದು ಬರುವುದೆ ಯೋಗಾರ್ಥ. ಅದು ಭೌತಿಕವಿರಬಹುದು, ದೈಹಿಕವಿರಬಹುದು. ಮಾನಸಿಕವಿರಬಹುದು, ಆಧ್ಯಾತ್ಮಿಕವಿರಬಹುದು. ಇವುಗಳಲ್ಲಿ ಒಂದಕ್ಕಿಂತಲು ಇನ್ನೊಂದು ಹೆಚ್ಚು ಹೆಚ್ಚು ಉತ್ತಮವಾದು ದೆಂಬುದನ್ನು ಮಾತ್ರ ಒಪ್ಪಿಕೊಳ್ಳಬೇಕು. ಹೀಗಿದ್ದರು ಅವುಗಳಲ್ಲಿ ಯಾವು ದನ್ನು ತಿರಸ್ಕರಿಸಬೇಕಿಲ್ಲ; ತಿರಸ್ಕರಿಸಬಾರದು. ಅವು ಪರಿಶುದ್ಧವಾಗಿರುವಲ್ಲಿ ಪರಸ್ಪರ ಸಹಾಯಕವಾಗಿವೆ, ಸಾಪೇಕ್ಷವಾಗಿವೆ.

ಈಚೆಗೆ ಈ ಯೋಗಕ್ಕೆ ಒಂದು ಶಾಸ್ತ್ರಸ್ವರೂಪ ಬಂದಿತು. ಅದನ್ನು ತಂದು ಕೊಟ್ಟವರು ಮುಖ್ಯವಾಗಿ ಮೂವರು. ಅವರಲ್ಲಿ ಮೊದಲಿಗನು ಪತಂಜಲಿ ಮಹರ್ಷಿ. ಎರಡನೆಯವನು ಶ್ರೀಕೃಷ್ಣ ಭಗವಾನನು. ಮೂರನೆ ಯವನು ಚನ್ನಸದಾಶಿವ ಶಿವಯೋಗಿಯು.

ಭೌತಿಕದಲ್ಲಿ ಸುಖ – ಸಂಪತ್ತುಗಳ ಸಮಾಗಮಕ್ಕೆ ಯೋಗ ಶಬ್ದವು ರೂಢವಾಗಿದೆ. ಪತಂಜಲಿಯು ಆ ಯೋಗ ಶಬ್ದಕ್ಕೆ ಮಾನಸಿಕಾರ್ಥವನ್ನು ಮುಖ್ಯಾಂಗವಾಗಿ ಪರಿಗ್ರಹಿಸಿ "ಯೋಗಶ್ಚಿತ್ತವೃತ್ತಿ ನಿರೋಧಃ" ಎಂದು ಸೂತ್ರಿಸಿದನು. ಶ್ರೀಕೃಷ್ಣನು ಕರ್ಮಜ್ಞಾನಗಳಿಗೆ ಅಗ್ರತೆಯನ್ನು ಸಲ್ಲಿಸಿ "ಯೋಗಃ ಕರ್ಮಸು ಕೌಶಲಂ" "ಜ್ಞಾನಯೋಗೋ ವಿಶಿಷ್ಯತೇ" ಎಂದು

ಮುಂತಾಗಿ ಗೀತೆಗೈದನು. ಚನ್ನಸದಾಶಿವ ಶಿವಯೋಗಿಯು ಆತ್ಮ ಪ್ರಾಧಾನ್ಯವನ್ನಿಟ್ಟುಕೊಂಡು 'ಶಿವಯೋಗ'ವೆ ಶ್ರೇಷ್ಠವೆಂದು ಪ್ರತಿಪಾದಿಸಿದನು. ಪತಂಜಲಿಯು ತನ್ನ ಯೋಗಕ್ಕೆ ಫಲವಿದೆ, ಫಲಬೇಕು ಎಂಬನು. ಶ್ರೀಕೃಷ್ಣನು 'ಕೃಪಣಾಃ ಫಲಹೇತವಃ' ಎಂದು ಆ ವಾದವನ್ನು ಖಂಡಿಸಿ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂದು ಹೇಳಿ ಫಲ ಬೇಡೆಂದನು. ಚನ್ನಸದಾಶಿವ ಶಿವಯೋಗಿಯು ಬೇಕು - ಬೇಡೆಂಬ ಎರಡು ವಾದಗಳನ್ನೂ ಅಲ್ಲಗಳೆದನು. ಶಿವಯೋಗಿಗೆ ಬೇಕೆಂಬ ರತಿಯು ಬೇಡ; ಬೇಡೆಂಬ ವಿರತಿಯು ಬೇಡ. ಇವೆರಡು ಭವಬೀಜಗಳು. ಇವನ್ನು ಹುರಿದು ಭೋಗ ಯೋಗ ತ್ಯಾಗಗಳ ಸಮನ್ವಯಗೊಳಿಸಿದನು. ಮೊದಲಿನ ಇಬ್ಬರ ವಾದಗಳನ್ನು ಅಂಗೀಕರಿಸಿಯೂ ಕರಿಸದಂತೆ ತನ್ನದೇ ಆದ ಒಂದು ವೈಶಿಷ್ಟ್ಯಪೂರ್ಣವನ್ನು ಪ್ರತಿಪಾದಿಸಿದನು. ಇವನ ಶಿವಯೋಗ ಶಾಸ್ತ್ರದ ಮೇಲೆ ಮತ್ತೊಂದು ಶಾಸ್ತ್ರ ಹುಟ್ಟಲಿಲ್ಲ, ಹುಟ್ಟಲಾರದು.

ಯೋಗ ಭೇದಗಳನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದಾರೆ; ಹಲವು ಬಗೆಯಾಗಿ ಬಿತ್ತರಿಸಿದಾರೆ. ಪತಂಜಲಿಯು ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ ಎಂದು ಅಷ್ಟಾಂಗವಾಗಿ ವಿಭಾಗಿಸಿದಾನೆ. ಶ್ರೀಕೃಷ್ಣನು ಕರ್ಮ, ಧ್ಯಾನ, ಬುದ್ಧಿ, ಭಕ್ತಿ, ಸಾಂಖ್ಯ, ಅಮನಸ್ಕ, ಬ್ರಾಹ್ಮ ಎಂಬುದಾಗಿ ಅನೇಕ ಬಗೆಯಾಗಿ ಭಾಗಿಸಿದಾನೆ. ಮುನಿಗಳು ಮಂತ್ರ ಲಯ ಹಠ ರಾಜ ಎಂದು ಚತುರ್ವಿಭಾಗ ಮಾಡಿದಾರೆ. ಇವುಗಳೊಡನೆ ಶಿವಯೋಗ ಸೇರಿಸಿ ಯೋಗ ಪಂಚಕವಾಗಿ ಕೆಲವರು ನಿರೂಪಿಸಿದ್ದಾರೆ. ಶಿವಯೋಗ ಪ್ರತಿಪಾದಕರು ಮೇಲೆಕಂಡ ಎಲ್ಲ ಯೋಗಗಳನ್ನು ಬಿಡದೆ ಶಿವಯೋಗದಲ್ಲಿ ಸಮನ್ವಯ ಮಾಡಿಕೊಂಡು ತರುವಿಸ್ತಾರವನೊಳಕೊಂಡ ಬೀಜದಂತಾಗಿ ಇರಿಸಿದಾರೆ. ಹಠ, ಮಂತ್ರ, ಲಯ ಯೋಗಗಳು ಕ್ರಮವಾಗಿ ಮೈ - ಮಾತು - ಪ್ರಾಣಗಳ ಶುದ್ಧೀಕರಿಸ ಬಲ್ಲವು. ಮೈ ಮಾತು ಉಸಿರುಗಳಿಗೆ ರಾಜನಾದ ಜೀವನನ್ನು ಶುದ್ಧಿಗೊಳಿಸ ಬಲ್ಲದು ರಾಜಯೋಗ. ರಾಜಯೋಗದಿಂದ ಶುದ್ಧನಾದ ಜೀವ (ಅಂಗ)ನು ಶಿವನ (ಲಿಂಗದ)ಲ್ಲಿ ಸಮರಸನಾಗುವುದೆ ಶಿವಯೋಗ. ಶಿವಯೋಗದ ಶ್ರೇಷ್ಠತೆಗೆ ಇದೂ ಒಂದು ನಿದರ್ಶನ.

ಇತ್ತೀಚಿಗೆ ಕೆಲವರು ಶಿವಯೋಗ ಶಬ್ದಕ್ಕೆ ಸಂಕುಚಿತಾರ್ಥ ಕಲ್ಪಿಸಿಕೊಂಡು ಆಸನಾದಿಗಳು ವೀರಶೈವರಿಗೆ ಬೇಕಿಲ್ಲೆಂದು ವಾದಿಸುತ್ತಾರೆ. ಈ ವಾದದಲ್ಲಿ ಹುರುಳಿಲ್ಲವಾದರು ಮಗ್ಗೆ ಮಾಯಿದೇವರ ಪೂರ್ವಯೋಗ-ಉತ್ತರಯೋಗ ಎಂಬ ಅಷ್ಟಾಂಗ ಯೋಗದ ವಿಭಾಗವನ್ನು ಮುಂದು ಮಾಡಿ ಧ್ಯಾನ ಧಾರಣ ಸಮಾಧಿಗಳೆ ಉತ್ತರಯೋಗಗಳು. ಅವೆ ಆವಶ್ಯಕ. ಉಳಿದವು ಅನಾವಶ್ಯಕ ಎಂದು ಭ್ರಮಿಸುತ್ತಾರೆ. ಮಗ್ಗೆಯ ಮಾಯಿದೇವರು ಗೌಣ ಮುಖ್ಯ ವಿಮರ್ಶೆಗೆ ಹೊರಟಿದಾರೆಯೆ ವಿನಹ ಪೂರ್ವಯೋಗವನ್ನು ಅಲ್ಲಗಳೆಯಲು ಹೊರಟಿಲ್ಲ. ಒಂದುವೇಳೆ ಅಲ್ಲಗಳೆದಿದ್ದರೆ ಅದು ಸಮಂಜಸವಲ್ಲ. ಶಿವಯೋಗಕ್ಕೆ ಗೌಣವಾಗಿಯಾದರು ಯಮ ನಿಯಮಾಸನಾದಿಗಳು ಅನಿವಾರ್ಯ; ಅಂಗೀಕಾರ್ಯ. ಈ ವಿಷಯದಲ್ಲಿ ಶಿವಯೋಗ ಪ್ರದೀಪಿಕೆಯ ಎರಡನೆಯ ಪಟಲವನ್ನು ಓದಬೇಕು. ಶಿವಯೋಗಕ್ಕೆ ಹಠಯೋಗವು ಸಾಧನವೆಂದು, ಬಾಹ್ಯಾಭ್ಯಂತರಗಳಾದ ಅಷ್ಟಾಂಗಯೋಗಗಳಿಂದ ಆತ್ಮಶುದ್ಧಿಯೆಂದು ಹೇಳಲಾಗಿದೆ. ಗ್ರಂಥವಿಸ್ತರ ಭಯದಿಂದ ವಿಶೇಷ ಉಲ್ಲೇಖಿಸಲು ಸಾಧ್ಯವಿಲ್ಲ.

ಸ್ವಾಮಿಗಳವರು ಮೇಲೆಕಂಡ ಎಲ್ಲ ಯೋಗಗಳಲ್ಲಿಯು ಬಲ್ಲಿದರಾಗಿದ್ದರು. ಎಲ್ಲ ಕರಣೇಂದ್ರಿಯಗಳೊಡನೆ ಮನ ಆತ್ಮಗಳನ್ನು ಪರಿಶುದ್ಧಗೊಳಿಸಿದ್ದರು. ಅವರ ಆತ್ಮನಲ್ಲಿ ಪರಮಾತ್ಮ ಯೋಗವಾಗಿತ್ತು. ಸಾಲದ್ದಕ್ಕೆ ಸ್ವಾಮಿಗಳವರು ಶಿವಯೋಗ ಮಂದಿರವನ್ನೆ ಕಟ್ಟಿ ಅದನ್ನು ಎಲ್ಲ ಯೋಗಗಳ ಪ್ರಯೋಗ ಶಾಲೆಯನ್ನಾಗಿಸಿದರು. ತಾವು ಈ ವಿಷಯದಲ್ಲಿ ಆಳವಾಗಿ ಅಭ್ಯಸಿಸಿದ್ದರು. ಅಧಿಕೃತವಾಗಿ ಪ್ರತಿಪಾದಿಸುತ್ತಿದ್ದರು, ಪ್ರತಿಪಾಲಿಸುತ್ತಿದ್ದರು.

ಯೋಗಿಗಲ್ಲದೆ ದೊರೆವುದೆ ಪರತರ ಮುಕ್ತಿ ||ಪ||

ಚಿರ ಸುಖಾಸನತೆ ಶರೀರದ ನಸಿನತೆ |
ಕರಣ ನಿಕರದ ನಿಶ್ಚಲತೆ ||
ಮರುತ ಮನ ದಿಟ್ಟಿಗಳೊಂದು ಗೂಡುತೆ |
ಪರಶೂನ್ಯಯಾನು ಸಂಧಾನತೆ ||೧||

ಮಂಡಲತ್ರಯದ ತಾರಾಗ್ರದ ನಭದೊಳ-।
ಖಂಡ ಚಂದ್ರೋದಯವಾಗಲು ॥
ಕಂಡು ತದೀಯ ಸುಧೆಯನು ದಣ್ಣನೆ ದಣ-।
ದುಂಡು ನಿಜಾನಂದ ಲೀಯತೆ ॥೨॥

ಮೂರು ಪೊಳೆಯ ನಡುವಣ ನಾದವನು ಕೇಳ ।
ಮೀರುತದನು ವಾಗೀಶ್ವರಿಯೊಳು ।
ಬೇರಾಗದೊಂದೆನಿಸಿದ ಚಿತ್ತಿನೊಡನೊಂದಿ ॥
ತೋರುವ ಶಂಭುಲಿಂಗೈಕ್ಯತೆ ॥೩॥

ಈ ಪದ್ಯದ ಮೂರ್ತಿಯೆ ಕುಮಾರಯೋಗಿಗಳಾಗಿದ್ದರು. ಈ ಪದ್ಯದ ಪ್ರತಿಯೊಂದು ಮಾತಿನ ಸಂಧಾನತೆ ಸಲ್ಲೀಯತೆ ಲಿಂಗೈಕ್ಯತೆಗಳನ್ನು ಅವರು ಪ್ರತಿನಿತ್ಯವೂ ಆಚರಿಸುತ್ತಿದ್ದರು ; ಅನುಭವಿಸುತ್ತಿದ್ದರು.

ನಿಜವಾಗಿಯೂ ಕುಮಾರಯೋಗಿಗಳವರು ಸಿದ್ಧಾಸನದಲ್ಲಿ ಅದೆಷ್ಟು ಹೊತ್ತಾದರು ಸುಖವಾಗಿ ನಿರಾಯಾಸವಾಗಿ ಕುಳಿತು ಕೊಳ್ಳುತ್ತಿದ್ದರು. ಆರ್ಜವವಾಗಿ ಕುಳಿತ ಅವರ ಮೈ ಬಳುಕುತ್ತಿರಲಿಲ್ಲ. ಬೆನ್ನು ಬಾಗುತ್ತಿರಲಿಲ್ಲ ಕರಣ ನಿಕರಗಳ ನಿಶ್ಚಲತೆಯನ್ನು ಕುರಿತು ಬೇರೆ ಹೇಳಬೇಕಿಲ್ಲ. ಅವರ ಉಸಿರು - ಮನ - ದಿಟ್ಟಿಗಳು ಒಂದು ಗೂಡಿ ಹೃದಯಾನುಸಂಧಾನವಾಗಿರುತ್ತಿದ್ದ ವೆಂಬುದಕ್ಕೆ 'ದೃಷ್ಟಿಶುದ್ಧಿ' ಪ್ರಕರಣವೇ ಸಾಕ್ಷಿ. ಪದ್ಯದ ಮೊದಲಿನ ನುಡಿಯು ಕುಳಿತ ಕುಮಾರಯೋಗಿಗಳ ಮೂರ್ತಿಸ್ವರೂಪವನ್ನು ಕಣ್ಣಾರೆ ಕಂಡು ವರ್ಣಿಸಿ ದಂತಿದೆ. ಅವರ ನಡೆಗು ಈ ನುಡಿಗು ಎಳ್ಳಷ್ಟು ವ್ಯತ್ಯಾಸವಿಲ್ಲ. ಇದರಂತೆಯೆ ಮುಂದಿನ ಎರಡು ಪದ್ಯನುಡಿಗಳ ನಡೆಯು ಕುಮಾರಯೋಗಿಗಳಲ್ಲಿ ಕುಶಾಗ್ರ ದಷ್ಟು ಕಮ್ಮಿಯಿರಲಿಲ್ಲ. ಇದರಿಂದಾಗಿ ಆ ಕಾರಣಿಕ ಕುಮಾರನನ್ನು 'ಯೋಗಿ' ಎಂಬ ವ್ಯಾಪಕ ಪದದಿಂದ ಕರೆಯಲಾಗಿದೆ. ಆತ ನಿಜವಾಗಿಯೂ ಯೋಗಿ ಕುಮಾರ , ಕುಮಾರ ಯೋಗಿ.

ಸ್ವಾಮಿಗಳವರು ಮೊದಲು ಎಳಂದೂರು ಬಸವಲಿಂಗ ಯೋಗಿಗಳಲ್ಲಿ ಎಲ್ಲ ಯೋಗಗಳನ್ನು ಅಭ್ಯಾಸಮಾಡಿ ಆಮೇಲೆ ಯೋಗಿ ಕುಮಾರರಾದರು. ತರುವಾಯ ಶಿವಯೋಗ ಮಂದಿರದಲ್ಲಿ ಅನೇಕ ಮಕ್ಕಳನ್ನು ಸಲಹಿ ಯೋಗಾಭ್ಯಾಸಮಾಡಿಸಿ ಕುಮಾರ ಯೋಗಿಯಾದರು. ಎರಡೂ ಸಾರ್ಥಕ ನಾಮಗಳೆ! ಸಮರ್ಪಕ ನಾಮಗಳೆ !!



# ಬುದ್ಧಿಶಕ್ತಿ

ಬಿಜ್ಜೆಯು ನನಿತಂ ಕಲ್ತೊಡ
ಮುಜ್ಜಳಿಪ ವಿವೇಕಮಿಲ್ಲದಂದದು ವಿಫಲಂ ।
ಸಜ್ಜಾಕ ಮೆನಿತಿರ್ದೊಡಮೇಂ
ಗೊಜ್ಜಗೆ ಬೀರುಗುಮೆ ಕಂಪನಲರೆಡ ಮುನ್ನಂ ॥

—ನೀತಿಮಂಜರಿ.

ಕುಮಾರ ಯೋಗಿಗಳವರು ಹೆಚ್ಚಾಗಿ ಓದಿದವರಲ್ಲ. ಕನ್ನಡ ಕೊಂಚ ಕಲಿತವರು. ಆದರೂ ಅವರ ಆಳವಾದ ಅನುಭವ ವಿಶಾಲವಾದ ವಿಚಾರ ಎಂಥವರನ್ನು ಆಶ್ಚರ್ಯ ಚಕಿತರನ್ನಾಗಿ ಮಾಡುತ್ತಿದ್ದವು. ಅವರ ಆ ಜ್ಞಾನ ಪ್ರಭೆಯ ಮುಂದೆ ಮಹಾಮಹಾ ದಿಗ್ಗಂತಿ ಪಂಡಿತರು ಸಹ ತಮ್ಮ ಸೋಲನ್ನು ಒಪ್ಪಿಕೊಳ್ಳುತ್ತಿದ್ದರು. ವೇದಾಂತಿಗಳು ವಚೋಹೀನರಾಗುತ್ತಿದ್ದರು. ಅವರ ಓದು ಅಲ್ಪಾಗಿದ್ದರು ಬುದ್ಧಿ ಒಳ್ಳೆ ಹರಿತಾಗಿತ್ತು.

ಒಮ್ಮೆ ಒಬ್ಬ ವೇದಾಂತಿಯು ಸ್ವಾಮಿಗಳವರ ದರ್ಶನಕ್ಕೆ ಬಂದನು. ಆತನು ವೇದಾಂತವೇದ್ಯನೆಂಬ ಹೆಸರು ವಾಸಿಯಾಗಿದ್ದನು. ಬ್ರಹ್ಮಜಿಜ್ಞಾಸೆ ಪ್ರಾರಂಭವಾಯಿತು. 'ಬ್ರಹ್ಮ ಸತ್ಯಂ ಜಗನ್ಮಿಥ್ಯಂ' ಎಂದು ವೇದಾಂತಿಯು ಉಸುರಿದನು. ಅದಕ್ಕೆ ಸ್ವಾಮಿಗಳು ಹೀಗೆ ಅಪ್ಪಣೆ ಕೊಡಿಸಿದರು :

ವೇದಾಂತವೇದ್ಯರೆ, ಅದ್ವೈತವೆ ವೇದಾಂತದ ಗುರಿಯಲ್ಲವೆ? ನಿಜ. ಹಾಗಾದಮೇಲೆ ಸತ್ಯ-ಮಿಥ್ಯಗಳೆರಡು ವಸ್ತುಗಳ ನಿಮ್ಮ ಪ್ರತಿಪಾದನೆಯಿಂದ ಅದ್ವೈತಕ್ಕೆ ಹಾನಿಯಲ್ಲವೆ? ವೇದಾಂತಿ ನಿರುತ್ತರನಾದನು. ಸ್ವಾಮಿಗಳವರು ವೇದಾಂತಿಗಳೆ, ಜಗನ್ಮಿಥ್ಯೆಯಲ್ಲ; ಸತ್ಯ. ಬೀಜದಿಂದೊಗೆದ ಹೆಮ್ಮರ ಮರಳಿ ಬೀಜದಲ್ಲಡಗುವಂತೆ ಅದ್ವೈತದಿಂದೊಗೆದ ಜಗತ್ತು ತಿರುಗಿ ಅದೇ ಅದ್ವೈತ ಗರ್ಭದಲ್ಲಡಗುತ್ತದೆ. ಆಗ ತೋರದಂತಿರಬಹುದು. ಆದರೆ ತೋರದಿರುವುದು ಯಾರಿಗೆ ಎಂಬುದನ್ನು ಅರಿಯಬೇಕು ಎಂದು ಸಮಾಧಾನ ಹೇಳಿ ಕಳುಹಿದರು.

ಮತ್ತೊಮ್ಮೆ ಮತ್ತೊಬ್ಬ ಕಾಶೀ ವಿದ್ವಾಂಸನು ಸ್ವಾಮಿಗಳವರ ಸಂದರ್ಶನಕ್ಕೆ ಆಗಮಿಸಿದನು. ಆತನು ವೇದಾಂತಿ; ಕುಶಲಮತಿ. "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಅದ್ವೈತ ವಿಚಾರಕ್ಕೆ ಆರಂಭಿಸಿದನು. ಸ್ವಾಮಿಗಳವರು ಸಮಸ್ತವು ಬ್ರಹ್ಮಸ್ವರೂಪ ಎಂದು ಹೇಳುವಿರಿ. ಈ ಭೂವಲಯ ವೆಲ್ಲವು ಬ್ರಹ್ಮವೇನು ? ವೇದಾಂತಿ ಉತ್ತರ :—ಹೌದು. ಭಾರತವೆಲ್ಲವು ಬ್ರಹ್ಮವೇನು ? ಹೌದು. ನೀವಿರುವ ಊರು ? ಹೌದು. ನೀವಿರುವ ಈ ಮಠವು ? ಹೌದು. ಈಗ ನಿಮ್ಮೆದುರಿಗಿರುವ ಕರ್ಪುರವು ? ಹೌದು. ನೀವು ? ಹೌದು. ಎಲ್ಲಕ್ಕೂ ಹೌದೆಂದೆ ಉತ್ತರ ಬರಲು ಸ್ವಾಮಿಗಳವರು ತಮ್ಮ ಶಿಷ್ಯರೊಬ್ಬರನ್ನು ಕರೆದರು. ಆ ಕರ್ಪುರವನ್ನು ತೆಗದುಕೊಂಡು ವೇದಾಂತಿಗಳ ತಲೆಯ ಮೇಲೆ ಇಡು ಎಂದು ಆಜ್ಞಾಪಿಸಿದರು. ಶಿಷ್ಯನು ಹಾಗೆಯೆ ಮಾಡಿದನು. ಅಂಟಿಸೆಂದರು. ಶಿಷ್ಯನು ಹಾಗೆಯೆ ಮಾಡಲು ಉದ್ಯುಕ್ತನಾಗುವನು. ಆಗ ವೇದಾಂತಿಯು ಬೆಚ್ಚಿ ಭಯಗ್ರಸ್ತನಾಗಿ ಥಟ್ಟನೆ ಮೇಲಕ್ಕೆದ್ದನು. ಆಗ ಸ್ವಾಮಿಗಳವರು ಮುಗುಳು ನಗೆಯಿಂದ ವೇದಾಂತಿಯನ್ನು ಕೇಳಿದರು: ಏನು, ಬ್ರಹ್ಮವು ಬ್ರಹ್ಮನಿಗೆ ಹೆದರುವುದೆ ? ನೀವು ಬ್ರಹ್ಮ, ಬೆಂಕಿಯು ಬ್ರಹ್ಮ, ಭಯವೇನು ? ನಿಮ್ಮ ನುಡಿಯೊಂದು ಪರಿ, ನಡೆ ಇನ್ನೊಂದು ಪರಿ. ಇದು ವಿಚಿತ್ರವಲ್ಲವೆ ? ವೇದಾಂತಿ ಮೂಕನಾದನು. ಸ್ವಾಮಿಗಳವರು, 'ಒಳನದಿರದ್ವೈತವನು ಬಾಹ್ಯದಲ್ಲಿ ನಿನ್ನೊಳಗೇಕೋ ಭಾವನೆಯೊಡಗೂಡು' ಎಂದು ಉಪಹರಿಸಿ ತಮ್ಮ ಶೈಲಿಯಾದ ಮಾತಿನಲ್ಲಿ ತಿಳಿಹೇಳಿದರು.

ಮೊಗದೊಮ್ಮೆ ಮತ್ತೊಬ್ಬ ಮಹಾ ವೇದಾಂತಿಯು ಬಂದು ಸ್ವಾಮಿಗಳವರಲ್ಲಿ ವೇದಾಂತ ಕೇಸರಿಯೆಂದು ಆತ್ಮಶ್ಲಾಘನೆ ಮಾಡಿಕೊಂಡನು. ಆಗ ಸ್ವಾಮಿಗಳವರು, ಅಯ್ಯಾ! ವೇದಾಂತದ ಹೊಲಬಾವುದು, ಫಲವಾವುದು ? ಎಂದು ಕೇಳಿದರು. ಅದಕ್ಕೆ ವೇದಾಂತ ಕೇಸರಿಯು "ಜ್ಞಾನಾದೇವ ತು ಕೈವಲ್ಯಂ" ವೇದಾಂತಕ್ಕೆ ಜ್ಞಾನವೇ ಮಾರ್ಗ, ಕೈವಲ್ಯವೇ ಫಲ ಎಂದು ಉತ್ತರಿಸಿದನು. ಕೈವಲ್ಯವೆಂಬ ಒಂದು ಫಲವಿದ್ದ ಮೇಲೆ ಅದು ಕೇವಲ ಜ್ಞಾನದಿಂದ ಹೇಗೆ ಲಭ್ಯವಾಗುತ್ತದೆ ಎಂದು ಸ್ವಾಮಿಗಳು ಕೇಳಿದರು. ಅರಿವೆ ಫಲವೆಂದು ಉತ್ತರ ಬಂದಿತು. ಅದಕ್ಕೆ ಸ್ವಾಮಿಗಳವರು ಅರಿವೇ ಫಲ

ವಾಗದು. ಅರಿವು ಮಾರ್ಗವೆಂದು ನೀವೇ ಒಪ್ಪಿರುವಿರಿ. ಅರಿವು ಮಾರ್ಗವೇನೊ ನಿಜ. ಆದರದು ಪರಿಪೂರ್ಣ ಮಾರ್ಗವಲ್ಲ. ಅದು ಒಂದೆ ಕೈವಲ್ಯ ಫಲವನ್ನು ತಾರದು; ತೋರಬಹುದು ಮಾತ್ರ. ಅದು ಹೇಗೆ ಎಂದು ವೇದಾಂತ ಕೇಸರಿಯು ಪ್ರಶ್ನಿಸಲು ಸ್ವಾಮಿಗಳವರು ಈ ಕತೆಯ ಮುಖಾಂತರ ತಿಳಿಸುವರು :

ವೇದಾಂತಿಗಳೆ, ಒಂದು ಊರಬಳಿ ಒಬ್ಬನು ಮಾವಿನ ತೋಪನ್ನು ಹಾಕಿದ್ದನು. ಮಾವಿನ ಗಿಡಗಳು ಚೆನ್ನಾಗಿ ಹಣ್ಣು ಬಿಟ್ಟಿದ್ದವು. ತೋಪಿಗನು ತೋಪಿನಲ್ಲಿಯೆ ಕಾವಲಿದ್ದನು. ಆ ಸಮಯದಲ್ಲಿ ಒಬ್ಬ ದಾರಿಹೋಕನು ಆ ತೋಪಿನ ಬಳಿಗೆ ಬಂದನು. ಬಿಟ್ಟ ಹಣ್ಣುಗಳನ್ನು ಅವು ತೊಟ್ಟಬಣ್ಣವನ್ನು ನಿಟ್ಟಿಸಿ ನೋಡಿದನು. ಹಣ್ಣು ಚಸ್ನಾಗಿವೆಯೆಂದು ಅರಿತನು. ಹಣ್ಣು ತಿನ್ನುವ ಆಶೆಯಾಯಿತಾದರು ಆತನ ಆಶೆ ಈಡೇರಲಿಲ್ಲ. ಬರೀ ಹಣ್ಣುಗಳ ರೂಪು ರುಚಿಗಳ ನೋಡುತ್ತ ನೆನೆಯುತ್ತ ಮುನ್ನಡೆದನು. ಆಮೇಲೆ ಮತ್ತೊಬ್ಬ ಪಾಂಥನು ಬಂದನು. ಅದೇ ಮಾವಿನ ತೋಪನ್ನು ನೋಡಿದನು. ಹಣ್ಣಿನ ವಾಸನೆ ತಾಗಿತು. ಹಣ್ಣಿನ ಆಶೆ ಹೆಚ್ಚಿತು. ಆ ಕ್ಷಣವೆ ತೋಪಿನೊಳಕ್ಕೆ ಹೋದನು. ತೋಪಿನ ಒಡೆಯನು ಗಿಡಗಳಿಗ ಮಡಿಗಳನ್ನು ಮಾಡಿಸುತ್ತಿದ್ದನು. ಬಂದ ದಾರಿಕಾರನು ಸಹ ಅಲ್ಲಿಯೆ ಬಿದ್ದಿದ್ದ ಆಯುಧವೊಂದನ್ನು ತೆಗೆದುಕೊಂಡು ತಾನು ಕೆಲವು ಮಡಿಗಳನ್ನು ಮಾಡಿ ಮುಗಿಸಿದನು. ತೋಪಿನ ಒಡೆಯನಿಗೆ ಕೈಮುಗಿದು, ಹೋಗಿ ಬರುವೆನೆಂದನು. ಒಡೆಯನ ಮನಸ್ಸು ಸುಮ್ಮನೆ ಕಳಿಸುವಷ್ಟು ಕಠಿಣವಾಗಿರಲಿಲ್ಲ. ಅವನ ದುಡಿಮೆಗೆ ಮೆಚ್ಚಿ ಒಂದೊಂದು ಜಾತಿಯ ಒಂದೊಂದು ಹಣ್ಣು ಹರಿಯಿಸಿ ಕೊಟ್ಟು ಕಳಿಸಿದನು. ಪಾಂಥನು ಅವನ್ನು ತಿಂದು ಚಸ್ನಾಗಿ ಸಂತೋಷಪಟ್ಟನು. ಪಂಡಿತರೆ, ಜ್ಞಾನಿಗು-ಜ್ಞಾನಕ್ರಿಯಾವಂತನಿಗು ಇರುವ ವ್ಯತ್ಯಾಸವಿದು. ಕೈವಲ್ಯಫಲಕ್ಕೆ ಶರೀರವೆ ಆಶ್ರಯ. ಮಾವಿನ ಫಲಕ್ಕೆ ಆಶ್ರಯವಾದ ಭೂಮಿಯನ್ನು ತನ್ನ ಕೆಲಸದಿಂದ ಹಸನ ಮಾಡಿದ್ದಕ್ಕೆ ಅವನಿಗೆ ಫಲ ದೊರೆತಂತೆ ವೇದಾಂತಿಯು ತನ್ನ ನಿಷ್ಕಾಮ ಕ್ರಿಯೆಯಿಂದ ಶರೀರವನ್ನು ಹಸನಗೊಳಿಸಿದರೆ ಆ ಕೈವಲ್ಯ ಫಲವು ಪ್ರಾಪ್ತಿಯಾಗಿ ಪರಮಾನಂದ ಪರಿಣಾಮವೊದಗುವುದು. ಇಲ್ಲದಿದ್ದಲ್ಲಿ ಮೊದಲಿನ ಪಾಂಥನಂತೆ ಬರೀ ಅರಿವಿನಲ್ಲಿಯೆ ಇದ್ದರೆ ಮುಂದು ಸಾಗಿದರೆ ಫಲಕ್ಕೆ

ದೂರನಾಗಬೇಕಾಗುತ್ತದೆ ಎಂದು ಮನ ಮುಟ್ಟುವಂತೆ ಬೋಧಿಸಿ ಕಳು ಹಿಸಿದರು.

ಸ್ವಾಮಿಗಳವರ ಬುದ್ಧಿಶಕ್ತಿ ಬಹುಮುಖವಾಗಿ ಬೆಳೆದಿತ್ತು. ಅದನ್ನು ಅವರು ಬರೀ ಓದಿನಿಂದಲೇ ಸಂಪಾದಿಸಿರಲಿಲ್ಲ. 'ಹನಿಹನಿ ಗೂಡಿ ಹಳ್ಳ, ತೆನೆ ತೆನೆ ಗೂಡಿ ರಾಶಿ' ಎಂಬುದನ್ನು ಅರಿಯದವರಾರು ? ಅದರಂತೆ ಆಚರಿಸು ವವರು ಮಾತ್ರ ವಿರಳ. ಈ ನುಣ್ಣುಡಿಯನ್ನು ತಮ್ಮ ಜ್ಞಾನಮಾರ್ಗದಲ್ಲಿ ಸಾರ್ಥಕಪಡಿಸಿಕೊಂಡವರಲ್ಲಿ ಸ್ವಾಮಿಗಳವರು ಒಬ್ಬರು, ಒಂದು ತೂಕ ಮೇಲಾದವರು.

ಯಾವ ಜ್ಞಾನವೆ ಇರಲಿ ಅದು ಯಾರಲ್ಲಿಯೆ ಇರಲಿ ಅದನ್ನು ಶೋಧಿಸಿ ಸಂಗ್ರಹಿಸದೆ ಇರುತ್ತಿರಲಿಲ್ಲ. ಜ್ಞಾನನಿಧಿ ಸಂಗ್ರಹಕ್ಕೆ ಅನಂತ ಮುಖಗಳಿವೆ. ಕಲಿತು, ಕಂಡು, ಕೇಳಿ ಸಂಪಾದಿಸಬಹುದು. ಸತ್ಸಂಗಿಯಾಗಿ ಸದಾಚಾರಿ ಯಾಗಿ ಸಂಪಾದಿಸಬಹುದು. ಸ್ವಾಮಿಗಳವರು ಇವೆಲ್ಲ ಮಾರ್ಗಗಳನ್ನು ಅನು ಸರಿಸಿದ್ದರು, ಅಂಗೀಕರಿಸಿದ್ದರು.

ಯಾವ ಕಾಯಕದವರೆ ಬರಲಿ ಅವರನ್ನು ಸ್ವಾಮಿಗಳವರು ಉದಾಸೀನ ಮಾಡುತ್ತಿರಲಿಲ್ಲ. ಅವರನ್ನು ಕೂರಿಸಿಕೊಂಡು ಅವರ ಕೆಲಸಗಳ ಬಗೆಗಳನ್ನು ವಿಚಾರಿಸುತ್ತಿದ್ದರು. ಅವರಿಂದ ಏನಾದರು ವಿಶೇಷ ವಿಚಾರ ಬಂದಲ್ಲಿ ಅದನ್ನು ತಾವು ಗ್ರಹಿಸುತ್ತಿದ್ದರು. ಅವರಿಗೆ ಅವುಗಳಲ್ಲಿ ಅರಿಯದ್ದು ಯಾವುದಾದ ರಿದ್ದರೆ ಅದನ್ನು ತಾವು ತಿಳಿದಿದ್ದರೆ ಅವರಿಗೆ ತಿಳಿಮನಸ್ಸಿನಿಂದ ತಿಳಿಹೇಳಿ ಕೊಡುತ್ತಿದ್ದರು. ಇದು ಸ್ವಾಮಿಗಳವರ ನಿರಂತರವಾದ ಕಾಯಕವಾಗಿತ್ತು. ಇದರಿಂದಾಗಿ ಅವರ ಜ್ಞಾನಭಂಡಾರ ಭರಿತವಾಗಿತ್ತು; ಪರಿಶುದ್ಧವಾಗಿತ್ತು.

ಹುಟ್ಟುವಾಗಲೆ ಮನುಷ್ಯನು ಬುದ್ಧಿವಂತನಾಗಲಾರ. ಆಮೇಲೆ ಜ್ಞಾನ ಸಂಪಾದಿಸಬೇಕು. ಪ್ರಕೃತಿ ಸಿದ್ಧವಾದ ಬುದ್ಧಿ ಮನುಷ್ಯನಿಗೆ ಸಾಲದು. ಅದು ಸರ್ವಜೀವಸಾಮಾನ್ಯವಾದುದು. ಹೆಚ್ಚಿನ ಜ್ಞಾನ ಮನುಷ್ಯನಿಗೆ ಅಗತ್ಯ. ಶಾಸ್ತ್ರೀಯ ಜ್ಞಾನ ಸಂಪಾದಿಸದವನು ಮನುಷ್ಯನಾಗಲಾರ. ಮನುಷ್ಯ ಗೆಸಿ ಈ ಜ್ಞಾನದ ಅಗತ್ಯವಿದೆ. 'ಅರಿವರೆ ಶರಣ, ಮರೆವರೆ ಮಾನವ.' ಅರಿವು ಮಾನವನ ಮಟ್ಟವನ್ನು ಮೇಲಕ್ಕೆತ್ತುತ್ತದೆ, ಮಹಾತ್ಮತೆಗೆ ತರುತ್ತದೆ. ಚಿಜ್ಜ್ಯೋತಿ ಯಿಲ್ಲದೆ ಚೀಕಟ ಹರಿಯದು. ಚಿನ್ಮಯ ಬೆಳಗು ಚಿಮ್ಮದು. ಸಚ್ಚಿದಾನಂದ

ವಸ್ತು ತೋರದು. ಆ ಜ್ಞಾನವೇ ಜೀವನದ ಬೆಳಕು; ಬಲ. ಹೀಗಿರುವಾಗ ಅನೇಕ ಜ್ಞಾನಗಳು ಹುರಿಗೊಂಡು ಹದಗೊಂಡು ನಿಂತರೆ ಆ ಶಕ್ತಿಗೆ ಸಮಾನವಾದ ಶಕ್ತಿ ಮತ್ತೊಂದಿಲ್ಲ. ಆ ಶಕ್ತಿಯನ್ನು ಸತ್ಕಾರ್ಯಗಳಲ್ಲಿ ಬಳಸಬೇಕು. ಬೆಳಸಬೇಕು. ಸ್ವಾಮಿಗಳವರು ಇವನ್ನೆಲ್ಲ ಮಾಡಿದ್ದರು. ಇದರಿಂದಾಗಿ ಅವರ ಬುದ್ಧಿಶಕ್ತಿ ಅಪಾರವಾಗಿತ್ತು; ಅಮೇಯವಾಗಿತ್ತು.



# ವಿಮರ್ಶ ಜ್ಞಾನ

ಯಾವ ವಸ್ತುವನ್ನೇ ಆಗಲಿ, ಯಾವ ವಿಚಾರವನ್ನೇ ಆಗಲಿ, ಯಾವ ಕಾರ್ಯವನ್ನೇ ಆಗಲಿ ಸ್ವಾಮಿಗಳವರು ಆಳವಾಗಿ ವಿಮರ್ಶಿಸುತ್ತಿದ್ದರು. ಇತರರ ವಿಮರ್ಶೆಗು ಅವಕಾಶ ಕಲ್ಪಿಸುತ್ತಿದ್ದರು. ಒಮ್ಮೊಮ್ಮೆ ಸಣ್ಣಪುಟ್ಟಮಕ್ಕಳನ್ನು ವಿಮರ್ಶೆಯಲ್ಲಿ ಭಾಗಿಗಳನ್ನಾಗಿ ಮಾಡುತ್ತಿದ್ದರು. ತಮ್ಮ ವಿಮರ್ಶಕ ಪ್ರವೃತ್ತಿ ಇತರರಿಗು ಬರಬೇಕೆಂಬುದೆ ಅವರ ಸತ್ಯಸಂಕಲ್ಪ. ಅಲ್ಲದೆ ವಿಮರ್ಶೆಗೆ ಪಾರವಿಲ್ಲ, ಪರಿಪೂರ್ಣತೆಯಿಲ್ಲ. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಮಾಡಬಹುದು, ನೋಡಬಹುದು. ಅವರವರ ದೃಷ್ಟಿಯಲ್ಲಿ ಬರುವ ವಿಮ ರ್ಶೆಯ ವೈವಿಧ್ಯವನ್ನು ಅರಿಯಬೇಕೆಂಬ ಚಿಕಿತ್ಸಕತೆ ಸ್ವಾಮಿಗಳವರದು. ಈ ವಿಶಾಲ ಭಾವನೆಯನ್ನು ಅವರಲ್ಲಿ ಅದೆಷ್ಟೋ ಬಗೆಯಾಗಿ ಕಾಣಬಹು ದಾಗಿತ್ತು.

ಒಮ್ಮೆ ಶಿವಯೋಗ ಮಂದಿರದಲ್ಲಿ ಆಸನ ಹಾಕುವವರ ಭಾವಚಿತ್ರ ಗಳನ್ನು ತೆಗೆಯಿಸಲಾಗಿತ್ತು. ಅವು ತಯಾರಾಗಿ ಬಂದಿದ್ದವು. ಪ್ರತಿಯೊಂದನ್ನು ತಾವು ವಿಮರ್ಶಿಸಿದ್ದಲ್ಲದೆ ಇತರರಿಂದಲು ಇವುಗಳಲ್ಲಿರುವ ಗುಣದೋಷಗಳೇನು ಎಂದು ಕೇಳಿದರು. ಆಗ ನಾವೆಲ್ಲ ಸಣ್ಣ ವಯಸ್ಸಿನವರು. ನಮ್ಮನ್ನು ಸಹ ಕರೆಯಿಸಿ ಒಂದು ಫೋಟೊ ತೋರಿಸಿ ಇದರಲ್ಲಿ ಏನೇನು ಹೆಚ್ಚು ಕಡಿಮೆಯಿದೆ ಹೇಳಬಲ್ಲಿರಾ? ಎಂದು ಅಪ್ಪಣೆಮಾಡಿದರು. ನಾವೇನು ತಿಳಿದು ಹೇಳ ಬಲ್ಲೆವು? ಆದರು ಸ್ವಾಮಿಗಳವರು ಯಾವ ವ್ಯಕ್ತಿಯಲ್ಲಿ ಯಾವ ಶಕ್ತಿಯಿದೆ ಎಂಬುದನ್ನು ವಿಮರ್ಶಿಸದೆ ಬಿಡುತ್ತಿರಲಿಲ್ಲ. ಇಂತಹ ವಿಷಯವನ್ನು ಎಲ್ಲರ ವಿಚಾರಕ್ಕೆ ತರುವುದು ಒಂದು ಸ್ವಾಮಿಗಳವರ ವಿಮರ್ಶೆಯ ವಿಶೇಷವೆಂದೇ ಹೇಳಬೇಕು.

ಆ ಭಾವಚಿತ್ರವನ್ನು ನೋಡಿ ಕೆಲವರು ಕಾಲು ಸರಿಯಾಗಿ ಇರಿಸಿಲ್ಲ ವೆಂದರು. ಕೆಲವರು ಕೈ ಕೊಂಕಾಗಿದೆಯೆಂದರು. ಇನ್ನು ಕೆಲವರು ಹೀಗೆಯೆ ಇನ್ನೇನೇನೊ ಹೇಳಿದರು.

ಎಲ್ಲರದು ಆದ ಮೇಲೆ ಸ್ವಾಮಿಗಳವರು ಆಯಿತೆ ಎಂದರು. ಯಾರೂ ಮರುಮಾತಾಡಲಿಲ್ಲ. ಆಗ ಸ್ವಾಮಿಗಳವರು, ನೀವೆಲ್ಲ ಕೇವಲ ಹೊರಗಿನ ವಿಚಾರಕ್ಕೆ ಬಿದ್ದಿರಿ. ನಿಮ್ಮ ದೃಷ್ಟಿಗಳು ಹೊರಗಿನ ನ್ಯೂನತೆಗಳನ್ನೇ ನೋಡ ತೊಡಗಿದವು. ನೈಜವಾದ ನ್ಯೂನತೆಗಳನ್ನು ನೋಡದಾದವು. ಯಾವ ಆಸನಕ್ಕೆ ಯಾವುದರ ಪ್ರಾಧಾನ್ಯವಿರುತ್ತದೆಯೋ ಅದನ್ನು ಮೊದಲು ನಿರೀಕ್ಷಿಸ ಬೇಕು. ಪರೀಕ್ಷಿಸಬೇಕು. ಅದನ್ನು ಬಿಟ್ಟು ಸೋಗೆಯಲ್ಲಿ ಯಾವ ರಸ ಸಿಕ್ಕಬಲ್ಲುದು ?

ಸಿದ್ಧಾಸನ ಹಾಕಿದವರ ದೃಷ್ಟಿ ಮುಖಗಳನ್ನು ಪರೀಕ್ಷಿಸಬೇಕು. ಈಗ ನೋಡಿರಿ ಆ ಫೋಟೋ. ಕಣ್ಣು ಪೂರ್ಣ ತೆರೆದಿಲ್ಲ. ಮುಖದ ಮುದ್ರೆ ಶಾಂತ ವಾಗಿಲ್ಲ. ಮುಖದ ಮುದ್ರೆ ಮನಸ್ಸಿನ ಕೈಗನ್ನಡಿ. ಮುಖ ವ್ಯಗ್ರವಾಗಿದ್ದರೆ ಮನಸ್ಸು ವ್ಯಗ್ರವಾಗಿದೆ ಎಂದೇ ಗ್ರಹಿಸಬೇಕು, ಎಂದು ಅಪ್ಪಣೆಯಿತ್ತರು.

ಮತ್ತೊಮ್ಮೆ ಯಾವುದೊ ಪ್ರಸಂಗದಲ್ಲಿ ಯಾವನಾದರೊಬ್ಬ ವ್ಯಕ್ತಿ ಯೋಗಬಲ್ಲಿದನೆಂದು ನಾವು ತಿಳಿಯಬೇಕಾದರೆ ಆತನು ರುಜುಕಾಯನಾಗಿ ಕುಳಿತುಕೊಳುವುದನ್ನು ಕಣ್ಣೆವೆಗಳನ್ನು ಮೇಲಿಂನ ಮೇಲೆ ಹಳಚದಿರುವಿಕೆ ಯನ್ನು ಪರೀಕ್ಷಿಸಬೇಕು. ಅವೆರಡು ಸರಿಯಾಗಿದ್ದಲ್ಲಿ ಆತ ಯೋಗಿಯೆಂದು ನಿರ್ಣಯಿಸ ಬಹುದಾಗಿದೆ. ಕಣ್ಣೆವೆಯನ್ನು ಹೆಚ್ಚಾಗಿ ಹೊಡೆವವನು ಅಲ್ಪಾಯುವೆಂದು ಭಾವಿಸಬೇಕು. ಮೇಲಿಂದ ಮೇಲೆ ಅಲ್ಲಾಡುವವನ ಚಿತ್ತವು ಸ್ಥಿರವಿಲ್ಲೆಂದು ಊಹಿಸಬೇಕು, ಎಂದು ಬೋಧಿಸುತ್ತಿದ್ದರು.

ಮತ್ತೊಂದು ದಿನ ಮಧ್ಯಾಹ್ನ. ಒಂದು ಗಂಟೆಯ ಸಮಯ. ಸ್ವಾಮಿ ಗಳವರ ಸಮ್ಮುಖದಲ್ಲಿ ಎಂದಿನಂತೆ ಶಿವಾನುಭವ ನಡೆದಿತ್ತು. ಶತಕತ್ರಯದ ವಿಷಯ. ಓದಿ ಅನುಭವ ಮಾಡುತ್ತಿದ್ದವರ ಹೆಸರು ನೆನಪಿಲ್ಲ. "ಲಿಂಗ ಮುಖಾರ್ಪಣೀಯವಹ ಸರ್ವ ವಿಶುದ್ಧ ಪದಾರ್ಥ ... ...." ಎಂಬ ಶ್ಲೋಕದ ವಿಷಯ ಉಪಸ್ಥಿತವಾಯಿತು. ಓದುವವರು ಒಂದು ವಿಧದಲ್ಲಿ ಅರ್ಥವಿಸಿದರು. ಅನುಭವಕ್ಕೆ ಸಮಂಜಸವಾಗಲಿಲ್ಲವೊ ಏನೊ? ಸ್ವಾಮಿಗಳವರು ಈ ವಿಷಯ ದಲ್ಲಿ ಯಾರಾರು ಏನನ್ನು ಹೇಳುವರೋ ನೋಡಬೇಕೆಂದು ಪ್ರತಿಯೊಬ್ಬರನ್ನು ವಿಚಾರಿಸಿದರು. ಅರ್ಥಮಾಡಬಲ್ಲ ಶಕ್ತಿಯುಳ್ಳ ಹಲವು ಮಂದಿ ಹಿರಿಯರು ತಮತಮಗೆ ತೋರಿದಂತೆ ಹೇಳಿದರು. ಚಿಕ್ಕವರಾದ ನಾವು ಏಳೆಂಟು ಜನ

ಇದ್ದೆವು. ಆಗಾಗ ರಘುವಂಶ ಕುಮಾರಸಂಭವ ಕಾವ್ಯಗಳನ್ನು ಓದುತ್ತಿದ್ದೆವು. ನಮಗೆ ಶಿವಾನುಭವದ ಗಂಧವೆ ಗೊತ್ತಾಗುತ್ತಿರಲಿಲ್ಲ. ನಮ್ಮನ್ನೂ ಕೇಳಿದರು. ಮೂಕರಾದೆವು. ಸ್ವಾಮಿಗಳವರು, ನಿಮ್ಮ ಕಾವ್ಯಗಳಲ್ಲಿ ಇಂತಹ ವಿಚಾರ ವಿಮರ್ಶೆಗಳು ಬರುವದಿಲ್ಲವೇನು ಎಂದು ಕೇಳಿದರು. ಏನೆಂದು ಉತ್ತರಿಸಲು ನಮ್ಮಿಂದ ಸಾಧ್ಯ ? ಅದಕ್ಕು ಸುಮ್ಮನಾದೆವು.

ಕೊನೆಗೆ ಯಾರ ಹೇಳಿಕೆಗಳು ಸ್ವಾಮಿಗಳವರ ಮನಸ್ಸಿಗೆ ಸರಿದೋರ ಲಿಲ್ಲ. ಸಂತೃಪ್ತಿಯಾಗಲಿಲ್ಲ. ಆದಕಾಗಿ ಎಲ್ಲರಿಗು ಒಟ್ಟಾಗಿ ಹೀಗೆ ಅಪ್ಪಣೆಯಿ ತ್ತರು : ಬರೀ ಓದುಬಂದರೆ ಸಾಲದು. ಅಕ್ಷರಾಭ್ಯಾನವೆ ಅಭ್ಯಾಸವಲ್ಲ. 'ಓದು ಒಕ್ಕಾಲು ಬುದ್ಧಿ ಮುಕ್ಕಾಲು ' ಎಂಬ ಗಾದೆಯನ್ನು ಗಮನಿಸಬೇಕು. ಸ್ವಂತ ವಿಮರ್ಶೆಮಾಡವ – ವಿಚಾರ ಮಾಡುವ ಶಕ್ತಿ ಬರಬೇಕು ; ಪ್ರವೃತ್ತಿಯಿರಬೇಕು. ನಿಮಗೆಲ್ಲ ಸರಿಯಾಗಿ ಸರಳಾಗಿ ಕುಳಿತುಕೊಳ್ಳಲಿಕ್ಕೆ ಬಾರದು. ಇನ್ನೇನು ಮಾಡಬಲ್ಲಿರಿ ? ಇನ್ನೆಷ್ಟು ಹೇಳಬಲ್ಲಿರಿ ?

ಮೊದಲು ರುಜುಕಾಯವಾಗಿ ಕುಳಿತುಕೊಳ್ಳಲು ಕಲಿಯಬೇಕು. ಆಮೇಲೆ ಅವಧಾನದಿಂದ ಅರ್ಪಿತಮಾಡಲು ಕಲಿಯಬೇಕು. ಮುದುಕರಂತೆ ಮೂರ್ಖರಂತೆ ಮುದುರಿಕೊಂಡು ಮನಬಂದಂತೆ ಕುಳಿತುಕೊಳ್ಳಬಾರದು. ಅದು ರೋಗಕ್ಕೆ ಕಾರಣ. ಯೋಗ ಮಾರ್ಗಕ್ಕೆ ಬಹಿಷ್ಕರಣ.

ಬಾಯಿಚ್ಛೆಗೆ ಬೇಕಾದ್ದನ್ನೆಲ್ಲ ಭುಂಜಿಸುವುದು ವಿಹಿತವಲ್ಲ, ಲಿಂಗಾರ್ಪಿತ ವಲ್ಲ. ಅಂಗ ಮುಖಿಗಳಾಗಬಾರದು. ಲಿಂಗ ಮುಖಿಗಳಾಗಬೇಕು. ಆಗ ಲಿಂಗಾರ್ಪಣೀಯ ವಿಶುದ್ಧ ಪದಾರ್ಥ ಜ್ಞಾನವಾಗುತ್ತದೆ. ಸಾತ್ವಿಕಾಹಾರದ ತತ್ವ ತಾನೇ ವಿಶದವಾಗುತ್ತದೆ. ಅಂತಹ ಪದಾರ್ಥಗಳು ಮಾತ್ರ ಪ್ರಸಾದವಲ್ಲ. ಕಾಯವು ಪ್ರಸಾದವಾಗಬೇಕು ಎಂದು ಮುಂತಾಗಿ ಅಪ್ಪಣೆಕೊಡಿಸುತ್ತ ಲಿಂಗ ಮುಖಾರ್ಪಣೀಯ ವಿಶುದ್ಧ ಪದಾರ್ಥಗಳ ವಿವರಣೆಯನ್ನು ಸ್ವಾಮಿಗಳವರು ಮಾಡಿದರು. ಅದನ್ನೆಲ್ಲ ತಿಳಿಯುವ ಮಟ್ಟದಲ್ಲಿ ನಾವಿರಲಿಲ್ಲ. ಅವರ ಆ ಅನುಭವದ ಅಮೃತವಾಣಿಯ ಜಾಡಿನಲ್ಲಿ ಬಿತ್ತರಿಸಲು ಸಾಧ್ಯವಿಲ್ಲ. ಇತ್ತೀಚಿಗೆ ಓದಿ ತಿಳಿದುದನ್ನು ಇಲ್ಲಿ ವಿವರಿಸಲು ಅವಕಾಶವಿಲ್ಲ, ಅಪ್ರಸ್ತುತ.

---

# ಯೋಗ - ಸಂಯೋಗ

ಯೋಗಕ್ಕು ಸಂಯೋಗಕ್ಕು ಬಹಳ ವ್ಯತ್ಯಾಸವಿದೆ. ಯೋಗದ ಗುಣಕಾರ್ಯಗಳೆ ಬೇರೆ. ಸಂಯೋಗದ ಗುಣಕಾರ್ಯಗಳೆ ಬೇರೆ. ಫಲಗಳು ಸಹ ಬೇರೆ ಬೇರೆ ಎಂದು ಅಪ್ಪಣೆಕೊಡಿಸುತ್ತಿದ್ದ ಸ್ವಾಮಿಗಳವರ ವಿಮರ್ಶಜ್ಞಾನ ಆಳವಾದುದು, ಆಲೋಚನೀಯವಾದುದು.

ಪದಾರ್ಥಗಳಲ್ಲಿ ಅನೇಕ ಅಂಶಗಳು ಇರುವಂತೆ ಪ್ರಕೃತಿ ಪುರುಷರಲ್ಲಿ ಅನೇಕಾವಯವಗಳು ಇರುತ್ತವೆ. ಎರಡು ಪದಾರ್ಥಗಳ ಅಂಶಗಳಲ್ಲಿ ಪರಸ್ಪರ ಒಂದಂಶ ಮಿಶ್ರವಾದರೆ ಅದು ಯೋಗ. ಪ್ರಕೃತಿ ಪುರುಷರ ಅವಯವ ಗಳಲ್ಲಿ ಒಂದೊಂದವಯವಗಳಿಂದ – ಅಂಗಗಳಲ್ಲಿ ಒಂದೊಂದಂಗದಿಂದ ಕೂಡಿ ದರೆ ಅದು ಯೋಗ. ಪದಾರ್ಥಗಳ ಅಂಶಗಳೆಲ್ಲ ಪ್ರಕೃತಿ ಪುರುಷರ ಅವಯವ ಗಳೆಲ್ಲ ಸಮಗ್ರವಾಗಿ ಸಮ್ಮಿಶ್ರವಾಗಿ ಸೇರಿದರೆ ಅದು ಸಂಯೋಗ.

ಹಾಲಿನಲ್ಲಿ ತುಪ್ಪ ಹಾಕಿದರೆ ನೀರಿನಲ್ಲಿ ಎಣ್ಣೆಯನ್ನು ಕದಡಿಸಿದರೆ ತಾವರೆಯ ಎಲೆಯ ಮೇಲೆ ನೀರು ಚಲ್ಲಿದರೆ ಆಗುವುದು ಯೋಗ ಮಾತ್ರ. ಇದಕ್ಕೆ ಸಂಯೋಗವೆಂದು ಹೇಳಲು ಸಾಧ್ಯವಿಲ್ಲ. ಅದೇ ಹಾಲಿನಲ್ಲಿ ಸಕ್ಕರೆ ನೀರಿನಲ್ಲಿ ಉಪ್ಪು ಉರಿಯಲ್ಲಿ ಕರ್ಪೂರ ಸೇರಿಸಿದರೆ ಆಗುವುದು ಸಂಯೋಗ. ಇದು ಬರೀ ಯೋಗವಲ್ಲ.

ಹೀಗೆಯೆ ಪ್ರಕೃತಿ ಪುರುಷರ ಅವಯವಗಳ ಮೇಳನದಲ್ಲಿ ಯೋಗ – ಸಂಯೋಗಗಳನ್ನು ಭಾವಿಸಿಕೊಳ್ಳಬೇಕು. ಸತಿಪತಿಗಳಿಬ್ಬರ ಮನಸ್ಸೊಂದಾದರೆ ಅದು ಸಂಯೋಗ. ಒಬ್ಬರ ಮನಸ್ಸು ಮಿಡಿದು ಇನ್ನೊಬ್ಬರ ಮನಸ್ಸು ಸಿಡಿದು ನಿಂತಿದ್ದರೆ, ವಿಧಿಯಿಲ್ಲದೆ ಬಾಹ್ಯಾವಯವಗಳಿಂದ ಕೂಡಿದ್ದರೆ ಅದು ಕೇವಲ ಯೋಗ. ಇದು ಲೌಕಿಕದ ಮಾತು. ಅಲೌಕಿಕದಲ್ಲಿಯು ಶರಣಸತಿ ಲಿಂಗ ಪತಿಗಳ ಸಮ್ಮಿಳದಲ್ಲಿಯು ಇದೇ ಬಗೆಯಾಗಿ ಯೋಗ – ಸಂಯೋಗಗಳಿವೆ. ಲಿಂಗವೆ ತಾನಾಗದೆ ಸುಮ್ಮನೆ ಧರಿಸಿದ್ದರೆ ಅದು ಯೋಗ. ತ್ರಿಕರಣಗಳಲ್ಲಿಯು

ಲಿಂಗವೆ ತಾನಾಗಿ ತಾನೇ ಲಿಂಗವಾಗಿ ಸಮ್ಮಿಲನವಾಗಿದ್ದರೆ ಅದು ಸಂಯೋಗ; ಅದು ಸಾಮರಸ್ಯ.

ಈ ವಿಚಾರ ವಿಮರ್ಶೆ ಬರಿ ನನ್ನ ಕಲ್ಪನೆಯೆಂದು ಯಾರು ಭಾವಿಸ ಬೇಕಿಲ್ಲ. ಸ್ವಾಮಿಗಳವರು ಇಷ್ಟೊಂದು ವಿವರವಾಗಿ ಅಪ್ಪಣೆ ಕೊಡಿಸ ದಿದ್ದರು 'ಪ್ರಾಣಲಿಂಗ ಲಿಂಗಪ್ರಾಣಿ' ಎಂಬ ವಿಷಯವನ್ನು ಮನನಾಟುವಂತೆ ಕತೆಯ ಕಲೆಯಿಂದ ಬಿತ್ತರಿಸುತ್ತಿಸ್ದುದನ್ನು ಕೇಳಿದವರಾರು ಅರಿಯದಿಲ್ಲ. ಆ ಬೀಜಾವಾಪವೆ ಈ ತರು ವಿಸ್ತಾರಕ್ಕೆ ಮೂಲಕಾರಣ. ಆದುದರಿಂದ ಇದು ಸ್ವಾಮಿಗಳವರ ವಿಮರ್ಶೆಯೆ; ವಿಜ್ಞಾನವೆ.



# ಲಯ - ವಿಲಯ

ಇವುಗಳ ವಿಷಯದಲ್ಲಿಯೂ ಅಷ್ಟೆ. ಇವೆರಡರಲ್ಲಿಯೂ ಮಹದಂತರವಿದೆ, ಮನಸೀಯೆ ವಿಚಾರಿಸಿದೆ. ಲಯದಲ್ಲಿ ಮರಳಿ ಬರುವ ಗುಣವಿದೆ. ವಿಲಯದಲ್ಲಿ ಮತ್ತೆ ಮರಳದೆ ಅವಿರಳವಾಗುವ ಗುಣವಿದೆ. ಮರಳಿ ಬರುವಿಕೆಗು ಅವಿರಳವಾಗಿರುವಿಕೆಗು ಮಹದಂತರವಲ್ಲವೆ ?

ನಿದ್ರೆ ಸಮಾಧಿಗಳನ್ನು ಉದಹರಿಸಬಹುದು. ದಿನದಿನದ ನಿದ್ರೆಯಿಂದ ಮರಳಿ ಮರಳಿ ಜಾಗ್ರತೆಗೆ ಬರುತ್ತೇವೆ. ನಿರಾಲಂಬ ಸಮಾಧಿಯಿಂದ ನಿರಂತರವಾಗಿ ಮರಳದೆ ಅಲ್ಲಿಯೆ ಉಳಿಯುತ್ತೇವೆ. ನಿದ್ರೆ ಲಯ, ಸಮಾಧಿ ವಿಲಯ. ಸಾವು ಸಹ ಲಯವೆ, ಪುನರ್ಜನ್ಮಕ್ಕೆ ಕಾರಣವಾದಲ್ಲಿ. ಇದು ಕಾರಣ ಸೃಷ್ಟಿ ಸ್ಥಿತಿ ಲಯವೆಂದು ಹೇಳುವುದರ ಮರ್ಮವು ಇದುವೆ. ಜಗದ ಲಯವು ವಿಲಯವಲ್ಲ, ತಿರುಗಿ ಸೃಷ್ಟಿಯಾಗುವುದಾಗಿ.

ಅನುಭಾವಿಗಳು ಅಚ್ಚಳಿಯದ ಸುಖವೆಂದು ಹೇಳುವುದು ವಿಲಯ. ಅದರಲ್ಲಿ ಲಯದ ಕಾರ್ಯವಿಲ್ಲ.

ಒಮ್ಮೊಮ್ಮೆ ಕೇಳುತ್ತ ಕೇಳುತ್ತ ಮನಸ್ಸು ಎಲ್ಲಿಯೋ ಹೋಗಿರುತ್ತದೆ. ಸ್ವಲ್ಪ ಹೊತ್ತಿನ ಮೇಲೆ ಮರಳಿ ಬರುತ್ತದೆ. ಹೋಗಿ ಬರುವ ಆ ವೇಳೆಯಲ್ಲಿ ಹೇಳಿದ್ದು ತಿಳಿಯದೆ ಹೋಗುತ್ತದೆ, ಕೇಳದೆ ಹೋಗುತ್ತದೆ. ಆಗ ಮನಸ್ಸು ಕಿವಿಯಲ್ಲಿ ಇರುವುದಿಲ್ಲ. ಮನಸ್ಸು ಕಿವಿಯಿಂದ ಲಯವಾಗಿ ಹೋಗಿರುತ್ತದೆ. ಆದರೂ ಮನಸ್ಸು ಬುದ್ಧಿಯಲ್ಲಿಯೋ ಬೇರಾವ ವಿಷಯದಲ್ಲಿಯೊ ಹೋಗಿ ವಾಸವಾಗಿರುತ್ತದೆ. ಅಲ್ಲಿಂದ ಮರಳಿ ಬರುತ್ತದೆ, ಆಗಲೆ ಬರುತ್ತದೆ. ಇದು ಲಯ.

ಪ್ರತಿದಿನ ನಮಗಾದ ಆಗುವ ಲೋಕಾನುಭವಗಳು ಅದೆಷ್ಟೋ ಇರುತ್ತವೆ. ಅವೆಲ್ಲವು ಎಲ್ಲ ಕಾಲದಲ್ಲಿಯು ಮನಸ್ಸಿನಲ್ಲಿ ಬುದ್ಧಿಯಲ್ಲಿ ಮತ್ತೊಮ್ಮೆ ಇರುವುದಿಲ್ಲ. ಇಲ್ಲದ ಮಾತ್ರಕ್ಕೆ ವಿಲಯವೆಂದೆನಿಸದು. ಅವೇ ಮರಳಿ ಭಾವ ಮನಗಳಿಗೆ ಬರುತ್ತವೆ. ವಿಲಯವಾದುದು ಹೀಗೆ ಮರಳಿ ಬಾರದು.

ಇದು ಲಯ ವಿಲಯಗಳ ವಿಮರ್ಶೆ. ಇದು ಸ್ವಾಮಿಗಳವರ ಅನುಭಾವ ವಿಮರ್ಶೆಯ ಒಂದಂಶ.

# ದೈವ - ದುಡಿಮೆ

ಮನುಷ್ಯನು ಪಡೆವ ಫಲಾಫಲಗಳಿಗೆ ಕಾರಣವು ದೈವಬಲವೊ ದುಡುಮೆಯ ಬಲವೊ ಎಂಬುದೊಂದು ವಾದ ಆಗಾಗ ಅಲ್ಲಲ್ಲಿ ತಲೆಯೆತ್ತುತ್ತಿರುತ್ತದೆ. ಪ್ರಯತ್ನ ಪ್ರವಾದಿಯು 'ದೈವೇನ ದೇಯಮಿತಿ ಕಾಪುರುಷಾ ವದಂತಿ' ಎಂದು ದೈವವಾದಿಯನ್ನು ನಿಂದಿಸುತ್ತಾನೆ. ನಿದರ್ಶನ ಕೊಡುತ್ತಾನೆ. ಸಿಂಹವು ತಾನು ಮೃಗರಾಜನೆಂದು ಪ್ರಯತ್ನ ಪಡದೆ ಹೆಮ್ಮೆಯಿಂದ ಹಸಿದು ಬಾಯ್ದೆರೆದು ಒಂದೆಡೆಯಲ್ಲಿ ಕುಳಿತಿದ್ದರೆ ಬೇಟೆಯು ತಾನೇ ಬಂದು ಬಾಯಲ್ಲಿ ಬೀಳುವುದೆ? ತಾನು ಅದೆಷ್ಟು ಪರಾಕ್ರಮ ಶಾಲಿಯಾದರು ಎದ್ದು ಅತ್ತಿತ್ತ ಅಲೆದು ಸುತ್ತು ಮುತ್ತ ನೋಡಿ ಬೇಟೆಯಾಡುವ ಪ್ರಯತ್ನವನ್ನು ಮಾಡಿಯೆ ಆಗಬೇಕು ಎಂದು ದುಡಿಮೆಯ ದೊಡ್ಡಸ್ತಿಕೆಯೊಂದನ್ನೆ ಪ್ರತಿಪಾದಿಸುತ್ತಾನೆ.

ದೈವವಾದಿಯು 'ಯತ್ನೇನ ಲಭ್ಯಮಿತಿ ಕಾಪುರುಷಾ ವದಂತಿ' ಎಂದು ಹೇಳಿ ಅದೇ ನುಡಿಯಿಂದ ಯತ್ನವಾದಿಯನ್ನು ಹೀಗಳೆಯಬಹುದಲ್ಲವೆ?

ದೈವಬಲವುಳ್ಳವನಿಗೆ ಅನಿರೀಕ್ಷಿತವಾಗಿ ದ್ರವ್ಯಪ್ರಾಪ್ತಿಯಾಗುವುದಿಲ್ಲವೆ? ದೈವಬಲವಿಲ್ಲದವನು ದೀರ್ಘವಾದ ಪ್ರಯತ್ನಮಾಡಿಯು ಫಲಪ್ರಾಪ್ತಿಯಾಗದೆ ಜೊಳ್ಳುಕುಟ್ಟಿದಂತಾಗಿ ಶ್ರಮಕ್ಕೆ ಶ್ರಮವೆ ಫಲವಾಗಿ ನನ್ನ ಹಣೆ ಬರಹ ಒಳ್ಳೆಯದಿಲ್ಲೆಂದು ಉಸುರ್ಗರೆವುದಿಲ್ಲವೆ? ಉದಾಹರಣೆಗಾಗಿ ವರ್ಷಾದ್ಯಂತ ಕೃಷಿಮಾಡಿ ಬಿತ್ತಿದ ಬೀಜಕ್ಕೆ ಮಳೆಬೀಳದಿದ್ದಲ್ಲಿ ಆತನ ಪ್ರಯತ್ನ ಅದೇನಾಗಬಲ್ಲುದು? ಒಂದುವೇಳೆ ಮಳೆಯಾಗಿ ಬೆಳೆಚನ್ನಾಗಿ ಬೆಳೆದೂ ಸರಿಯಾಗಿ ಕಾಳು ಬಾರದಿದ್ದರೆ ಆಗ ಅವನ ಬಾಯಿಂದ ಅದೇನು ಬರಬಲ್ಲುದು? ನನ್ನ ದೈವ ಚನ್ನಾಗಿಲ್ಲ ಎಂದಲ್ಲವೆ? ದೈವಬಲವಿದ್ದರೆ ಕೊರಡು ಕೊನರುವುದು. ಬರಡು ಹಯನಹುದು. ಅದೇ ದೈವಕೃಪೆಯಿಲ್ಲದ ಕೊನರು ಕಮರುವುದು. ಹಿಂಡುವ ಹಸು ಬರಡಹುದಲ್ಲವೆ? ಎಂದು ಮುಂತಾಗಿ ದೈವವಾದಿಯು ದೈವದ ಹೆಚ್ಚುಗಾರಿಕೆಯನ್ನೆ ಮುಂದುಮಾಡುತ್ತಾನೆ.

ನಿಜವಾಗಿ ನೋಡಿದಲ್ಲಿ ಇವೆರಡು ಜೊಳ್ಳು ವಾದಗಳು. ಏಕಪಕ್ಷೀಯ

ವಾದಗಳು. ಇವೆರಡು ಪರಸ್ಪರ ಪೂರಕವಾದವುಗಳು. ಇವೆರಡು ಅವಶ್ಯಕವಾದವುಗಳು, ಅನಿವಾರ್ಯವಾದವುಗಳು. ಮಡಿದು ಪಡೆದದ್ದು ಒಮ್ಮೊಮ್ಮೆ ದಕ್ಕದೆ ಹೋಗಬಹುದು ; ಹೋಗುತ್ತದೆ. ಇದರಿಂದಾಗಿಯೆ 'ಕೈಗೆ ಬಂದುದು ಬಾಯಿಗೆ ಬರಲಿಲ್ಲ' ಎಂದು ಹೇಳಿಕೆಯಿದೆಯಲ್ಲವೆ ? ಎರಡನೆಯದಾಗಿ ದೈವವಾದಿಯು ಹೇಳುವಂತೆ ದಾರಿಹೋಕನಿಗೆ ದೈವಬಲದಿಂದ ಅನಿರೀಕ್ಷಿತವಾಗಿ ದುಡ್ಡು ಸಿಗಬಹುದು. ಅದನ್ನು ರಕ್ಷಿಸಿ ಹೆಚ್ಚಿಸಿಕೊಳ್ಳುವ ಪ್ರಯತ್ನ ಮಾಡದಿದ್ದರೆ ದೈವಕೊಟ್ಟದ್ದು ಅದೆಷ್ಟು ದಿನ ನಿಲ್ಲಬಲ್ಲುದು ? 'ಧರ್ಮಕೊಟ್ಟುದನ್ನು ಕರ್ಮಕೊಚ್ಚಿಕೊಂಡು ಹೋಯಿತಂತೆ' ಎಂದು ಆಡಿಕೊಳ್ಳುವ ರೂಢಿಯಿಲ್ಲವೆ ? ಆದ್ದರಿಂದ ಯಾರು ಯಾರನ್ನೂ ಆಡಿಕೊಳ್ಳಬೇಕಾಗಿಲ್ಲ. ದೈವ - ದುಡಿಮೆಗಳೆರಡು ಎಲ್ಲರಿಗು ಎಲ್ಲ ಕಾಲಗಲ್ಲಿಯು ಬೇಕೇ ಬೇಕು ಎಂಬುದು ಸ್ವಾಮಿಗಳವರ ಹಿತೋಪದೇಶವಾಗಿತ್ತು. ಅದರಂತೆ ಅವರು ತಮ್ಮ ಜೀವನದಲ್ಲಿ ಎರಡಕ್ಕು ಸಮಾನವಾದ ಸ್ಥಾನಗಳನ್ನು ಕಲ್ಪಿಸಿಕೊಟ್ಟಿದ್ದರು.

ಒಳ್ಳೆಯ ದೈವವಿದ್ದರೆ ಬರಲಿ, ಇಲ್ಲದಿದ್ದರೆ ಹೋಗಲಿ ಎಂದು ಅದೆಂದಿಗೂ ಅವರು ಹೇಡಿ ಮಾತುಗಳನಾಡುತ್ತಿರಲಿಲ್ಲ. ಸುಮ್ಮನೆ ಕುಳಿತುಕೊಳ್ಳುತ್ತಿರಲಿಲ್ಲ. ಪ್ರಯತ್ನ ಪಡುವುದು ನಮ್ಮ ಕೆಲಸ. ಫಲಕೊಡುವುದು ದೈವದ ಕರ್ತವ್ಯ ಎಂದು ಅವರು ಮುಂದುವರಿಯುತ್ತಿದ್ದರು. ಒಮ್ಮೆಗೆ ಫಲ ದೊರೆಯದಿದ್ದರೆ ಮತ್ತೆ ಮತ್ತೆ ಪ್ರಯತ್ನಿಸುತ್ತಿದ್ದರು. ನೂರು ಸಲವಾಗಲಿ ಬೇಸರಪಡದೆ ಪ್ರಯತ್ನಿಸುತ್ತಿದ್ದರು. ದೈವಕೃಪೆಯನ್ನು ಪಡೆಯುತ್ತಿದ್ದರು. ಪ್ರಯತ್ನ ಫಲವನ್ನು ಹೊಂದುತ್ತಿದ್ದರು. ದೇವಧ್ಯಾನವನ್ನು ದೇಹದುಡಿಮೆಯನ್ನು ಅವರು ಎಂದೆಂದಿಗು ಬಿಟ್ಟಿರಲಿಲ್ಲ.

ಮಾರ್ಕಂಡೇಯನು ತನ್ನ ಅಲ್ಪಾಯುವನ್ನು ಕಳೆದುಕೊಂಡುದು ಬರೀ ತನ್ನ ಪ್ರಯತ್ನದಿಂದಲ್ಲ, ದೈವಿಕ ಸಹಾಯದಿಂದ ದೈವಿಕ ಸಹಾಯ ವಿಲ್ಲದಿದ್ದರೆ ಅವನ ಪ್ರಯತ್ನ ಫಲಿಸುತ್ತಿರಲಿಲ್ಲ. ಪ್ರಯತ್ನವೆ ಫಲದಾಯಕವಾಗಿದ್ದರೆ ಯಮನು ಬಂದು ತನ್ನ ಪಾಶವನ್ನು ಮಾರ್ಕಂಡೇಯನ ಮೇಲೆ ಹಾಕಬೇಕಾಗಿರಲಿಲ್ಲ. ದೈವಿಕ ಬಲವಿಲ್ಲದಿದ್ದಲ್ಲಿ ಯಮನ ಆ ಪಾಶ ಕೆಲಸಮಾಡದೆ ಇರುತ್ತಿರಲಿಲ್ಲ. ದೈವ - ದುಡಿಮೆ ಎರಡು ಸೇರಿಯೆ ಒಂದು ಫಲಿತಾಂಶವಾಗುತ್ತದೆ ಎಂಬುದನ್ನು ಇದರಿಂದ ಚನ್ನಾಗಿ ಗ್ರಹಿಸಬಹುದಲ್ಲವೆ ? ಎಂದು ಬೋಧಿಸುತ್ತಿದ್ದರು.

# ನೀತಿ ಬೋಧ, ರೀತಿ ಶೋಧ

ಸ್ವಾಮಿಗಳವರು ನೀತಿಯನ್ನು ಬೋಧಿಸುತ್ತಿದ್ದರು. ನಡತೆಯನ್ನು ಶೋಧಿಸುತ್ತಿದ್ದರು. ನೀತಿಬೋಧೆಯು ರೀತಿಶೋಧದಲ್ಲಿಯೆ ಪರ್ಯವಸಾನ ಪಡೆಯಬೇಕು. ಆಗ ಅದು ಪ್ರಯೋಜನಕಾರಿಯಾಗಬಲ್ಲುದು, ಆಗುತ್ತದೆ. ಇಲ್ಲವಿದ್ದಲ್ಲಿ ಗಂಟಿಕ್ಕದೆ ಹಗ್ಗ ಹೊಸೆದಂತೆ!

ಈ ತತ್ತ್ವವನ್ನು ತಿಳಿದು ಸ್ವಾಮಿಗಳವರು ಆ ರೀತಿ ಮಾಡುತ್ತಿದ್ದರು. ಅದು ಅವರದೆ ಒಂದು ವಿಜ್ಞಾನಮಾರ್ಗ. ಅವರು ಯಾರಿಗಾದರು ಒಂದು ನೀತಿಯನ್ನು ಬೋಧಿಸಿದ್ದರೆ ಅದರ ಪ್ರಯೋಜನವನ್ನು ಆತನು ಪಡೆಯುವ ವರೆಗೂ ಆತನಿಗೆ ನೀತಿ ಬೋಧೆಯನ್ನು ಮುಂದುವರಿಸುತ್ತಿರಲಿಲ್ಲ. ಅತಿ ಭೋಜನಶೀಲನಿಗೆ ಮಿತವಾಗಿ ಭುಂಜಿಸುವ ನೀತಿಯನ್ನು ಹೇಳಿದ್ದರೆ ಆತನು ಅದರಂತೆ ಆಚರಿಸುತ್ತಿರುವನೊ ಇಲ್ಲೊ ಎಂದು ಆತನಿಗೆ ತಿಳಿಯದಂತೆ ಆತನ ಮೇಲ ಪರಿಶೋಧನೆನಡೆದಿರುತ್ತಿತ್ತು. ಅಲ್ಲಿಯ ವರೆವಿಗು ಅವರ ಆತ್ಮ ಕಳಕಳಿ. ಅಲ್ಲಿಯ ವರೆವಿಗು ಅವರ ರೀತಿಶೋಧ.

ನೈತಿಕ ಶಿಕ್ಷಣವೆ ಸ್ವಾಮಿಗಳವರ ಉಸಿರು. 'ಕ್ರಮ ತಪ್ಪಿ ನಡೆವುದರಿಂ ಕಷ್ಟಮಿನ್ನುಂಟೆ?' ಎಂದು ಯಾವಾಗಲು ಅಪ್ಪಣೆ ಕೊಡಿಸುತ್ತಿದ್ದರು. ಬಡವನಾಗಲಿ ಬಲ್ಲಿದನಾಗಲಿ ಸಂನ್ಯಾಸಿಯಾಗಲಿ ಸಂಸಾರಿಯಾಗಲಿ ಅಧಿಕಾರಿಯಿರಲಿ ಅನಧಿಕಾರಿಯಿರಲಿ ನೀತಿ ರೀತಿಗಳಿಲ್ಲದಿದ್ದರೆ ಅವರೆಲ್ಲ ಮನುಷ್ಯತ್ವಕ್ಕೆ ಸಲ್ಲದವರೆಂದು – ನೀತಿ ನ್ಯಾಯಗಳಿಂದ ನಡೆವವರೆ ಮಹಾನುಭಾವರೆಂದು ಸ್ವಾಮಿಗಳವರು ತಿಳಿದಿದ್ದರು, ತಿಳಿಹೇಳುತ್ತಿದ್ದರು.

ಸ್ವಾಮಿಗಳವರು ಬೋಧಿಸುತ್ತಿದ್ದ ನೀತಿಗಳು ಅನೇಕ ಇವೆ. ಅನುಭವಪೂರ್ಣವಾದ ನೀತಿ ಮಾತುಗಳನ್ನೆ ಬೋಧಿಸುತ್ತಿದ್ದರು. ನಿಜಗುಣರ ನೀತಿಯ ಮಾತುಗಳನ್ನು ತಮ್ಮದೇ ಆದ ವಿಚಾರ ಸರಣಿಯಿಂದ ವಿಮರ್ಶಿಸಿ ಬೋಧಿಸುತ್ತಿದ್ದರು. ಅವುಗಳಲ್ಲಿ ಒಂದೆರಡು ನೀತಿಗಳನ್ನು ಇಲ್ಲಿ ವಿವರಿಸಲಾಗುತ್ತದೆ.

## ೧. ಶ್ರೀಗುರು ವಚನದಿಂದಧಿಕ ಸುಧೆಯುಂಟೆ?

ಇದು ಮಾನವ ಜೀವನಕ್ಕೆ ಎಷ್ಟು ಅಗತ್ಯನೀತಿ, ಎಂತಹ ಅಮೃತ ೀತಿ. ಮಾನವನು ಅಮರನಾಗಿ ಅಖಂಡನಾಗಿ ಬದುಕಬೇಕಾದರೆ ಈ ೀತಿಯನ್ನು ಪರಿಪೂರ್ಣವಾಗಿ ಆಚರಿಸಿಯೆ ತೀರಬೇಕು, ಅನುಭವಿಸಿಯೆ ಗಬೇಕು. ಮೊದಲು ಶ್ರೀಗುರುಗಳು ಎಷ್ಟು ಮಂದಿಯೆಂಬುದನ್ನು ಅರಿಯ ೀಕು. ಬೋಧಕ ವೇದಕ ನಿಷಿದ್ಧ ಕಾಮ್ಯ ಸೂಚಕ ವಾಚಕ ಕಾರಣ ವಿಹಿತ ಂದು ಎಂಟು ಬಗೆಯಾಗಿ ಶ್ರೀಗುರುಗಳಲ್ಲದ ಬರೀ ಗುರುಗಳಿರುವರೆಂದು ಜಗುಣರು ಹೇಳಿದಾರೆ. ಆದರೆ ಅವರೆಲ್ಲ ಅಷ್ಟೊಂದು ಉಪಯುಕ್ತರಾದವ ಲ್ಲ. ಅದರಿಂದಾಗಿ ಅವರು ಶ್ರೀಗುರುಗಳಲ್ಲ. ಅವರೆಲ್ಲರ ವಿಚಾರ ಇಲ್ಲಿ ೀಕಿಲ್ಲ. ಶ್ರೀಗುರುಗಳು ಅಂದರೆ ಶ್ರೇಷ್ಠ ಗುರುಗಳು ಮುಖ್ಯವಾಗಿ ತಾಯಿ ಂದೆ ಅಧ್ಯಾಪಕ ಆಚಾರ್ಯ ಎಂಬುದಾಗಿ ನಾಲ್ವರೆ ಎಂದು ಹೇಳಬೇಕು. ಈ ನಾಲ್ವರು ನರರಿಗೆಲ್ಲ ಶ್ರೀಗುರುಗಳು. ಇವರ ವಚನ ಸುಧೆಯನ್ನು ಪ್ರತಿ ೊಬ್ಬ ನರನು ಪಾನಮಾಡಬೇಕು. ಅನೇಕರು ಮಾಡುತ್ತಿಲ್ಲ. ಇದ ಂದಾಗಿ ಮಾನವನು ಬಾಳಿನಲ್ಲಿ ಮುಗ್ಗರಿಸುತ್ತಿದ್ದಾನೆ. ಪರಿಪೂರ್ಣ ಜೀವನ ಂದ ವಂಚಿತನಾಗುತ್ತಿದ್ದಾನೆ.

ಮಾತೆ ಮೊದಲನೆಯ ಶ್ರೀಗುರು. ಇವಳು ಕೊಡುವುದು ವಚನಸುಧೆ. ಾನವನಿಗೆ ಇದಕ್ಕೆ ಹೆಚ್ಚಿನ ಸುಧೆ ಬೇರೊಂದಿಲ್ಲ. ಮಾನವನು ಮೊದಲು ಲಿಯಬೇಕಾದ್ದು ಮಾತು. ಮಾತಿಲ್ಲದೆ ಮಾನವನ ಚರಿತಾರ್ಥತೆ ನಾಗುವು ಲ್ಲ. ಪ್ರತಿಯೊಂದಕ್ಕೂ ಮಾತುಬೇಕು. ಮಾತಿಲ್ಲದೆ ಹೋದರೆ ಮೂಕ ಪ್ರಾಣಿಯಾಗಿ ಇತರ ಪಶುಪ್ರಾಣಿಗಳಂತೆ ಬದುಕಬೇಕಾಗುತ್ತು, ಬದುಕಬೇಕು. ುಂದಿನ ನಾಗರಿಕ ಮಾನವ ಜೀವನ ಕನಸಿನ ಮಾತಾಗುತ್ತಿತ್ತು. ಮಾನವತೆ ಾತಿನಿಂದ ಮೊದಲಾಗುತ್ತದೆ. ಮಾತು ಮಾತೆಯಿಂದ ಮೊದಲಾಗುತ್ತದೆ. ಈ ಕಾರಣದಿಂದ ವಚನಸುಧೆಯನೀವ ಪ್ರಥಮ ಶ್ರೀಗುರು ಮಾತೆ. ಇವಳು ನ್ನ ಕರ್ತವ್ಯವನ್ನು ನೆರವೇರಿಸುತ್ತಿದ್ದಾಳೆ. ಮಾನವರಾಗಿ ಹುಟ್ಟಿಬರುವವ ಲ್ಲರು ಈ ವಚನಸುಧೆಯನ್ನು ಪಾನಮಾಡುತ್ತಿದ್ದಾರೆ. ಆದರ ಇಷ್ಟಕ್ಕೆ ೀರದು. ಇದು ಶ್ರೀಗುರುವಿನ ವಚನಸುಧೆಯ ನಾಲ್ಕನೆಯ ಒಂದು ಭಾಗ ಾತ್ರ. ಇದಾದ ಮೇಲೆ ಎರಡನೆಯ ಭಾಗವನ್ನು ಪಾನಮಾಡಬೇಕು.

ಆ ಎರಡನೆಯ ಭಾಗದ ಅಮೃತವನ್ನು ಕೊಡುವ ಶ್ರೀಗುರು ತಂದೆ. ಈತನು ಕೊಡುವುದು ಉದ್ಯಮಾಮೃತ. ಮಾತು ಕಲಿತಾದ ಮೇಲೆ ಮಾಡುವುದನ್ನು ಕಲಿಯಬೇಕು. ಕೃತಿಯಿಲ್ಲದ ಮಾತು ಯಾವ ಕೆಲಸಕ್ಕೂ ಬಾರದು. ಕೆಲಸ ಮಾಡದವನು ಉಣಲಾರನು. ಕಾರ್ಯ ಮಾಡದವನಿಗೆ ಅನ್ನ ಆರೋಗ್ಯಗಳಿಲ್ಲ. ಅನ್ನ ಆರೋಗ್ಯಗಳಿಲ್ಲದ ಜೀವನ ಅದೊಂದು ಮೃತಜೀವನ. ಅನ್ನ ಆರೋಗ್ಯಗಳನ್ನು ಸಂಪಾದಿಸುವ ಕಾರ್ಯಗಳಿಗೆ ಮೊದಲು ಪಿತನು ಪ್ರಚೋದಿಸುತ್ತಾನೆ. ಆದ್ದರಿಂದ ಈತನು ಎರಡನೆಯ ಶ್ರೀಗುರು. ಇದು ಈತನಿಂದಲೇ ಆಗುವ ಕಾರ್ಯ. ತಾಯಿ ವಚನ ಪೂರಕಳಾದರೆ ತಂದೆ ಕಾರ್ಯ ಪ್ರೇರಕ. ಕಾರ್ಯ ಮಾಡದಿದ್ದರೆ ತಾಯಿ ಸಹಿಸಬಹುದು ಸಹಿಸುತ್ತಾಳೆ. ತಂದೆ ಸಹಿಸಲಾರ. ಯಾವುದಾದರೊಂದು ಕಾಯಕಕ್ಕೆ ಪ್ರಚೋದಿಸುತ್ತಾನೆ; ಪ್ರಾರಂಭ ಮಾಡಿಸುತ್ತಾನೆ. ಇದನ್ನು ಬಹು ಮಂದಿ ಪರಿಪಾಲಿಸುತ್ತಾರೆ. ತಂದೆಯ ಮಾತನ್ನು ಮೀರಿದ ನಿರುದ್ಯೋಗಿಗಳು ನಮ್ಮ ಭಾರತದಲ್ಲಿ ಇನ್ನೂ ಅದೆಷ್ಟೋ ಜನರಿದ್ದಾರೆ, ಸೋಮಾರಿಗಳಿದ್ದಾರೆ. ನಿರುದ್ಯೋಗ ನಿರುತ್ಸಾಹಗಳು ಹೊರಟುಹೋಗಬೇಕು. ಎಲ್ಲರು ಕಾರ್ಮಿಕರಾಗಬೇಕು. ಕಾರ್ಮಿಕ ಮಾತ್ರರಾದರೆ ಸಾಲದು. ಇದು ಶರೀರ ಮಾತ್ರ ಪೋಷಿಸಬಲ್ಲುದು. ಮಾನವನಿಗೆ ಶರೀರ ಪೋಷಣೆಯೆ ಚರಮ ಗುರಿಯಲ್ಲ. ಅದರಾಚೆ ಬುದ್ಧಿಯೊಂದಿದೆ. ಅದನ್ನು ಅಭಿವರ್ಧಿಸುವ ಕರ್ತವ್ಯವಿದೆ. ಅದಕ್ಕಾಗಿ ಮತ್ತೊಬ್ಬ ಶ್ರೀಗುರುಬೇಕು.

ಅವನೆ ಮೂರನೆಯವನಾದ ಅಧ್ಯಾಪಕನು. ಈತನು ಮಾತೆಯ ಕಾರ್ಯವನ್ನು ಮುಂದುವರಿಸುತ್ತಾನೆ. ಮಾತೆಯು ಬರೀ ಮಾತು ಕಲಿಸಿರುತ್ತಾಳೆ. ಆದರೆ ಅದರ ಅರಿವು ಬುದ್ಧಿ ಸಂಸ್ಕಾರಕ್ಕೆ ಬಂದು ನಿಲುಕುವಷ್ಟು ಆಗಿರುವುದಿಲ್ಲ. ಬರೀ ಕಾರ್ಯಸಾಧನೆಗೆ ಸಹಾಯಕವಾಗಿರುವುದೇ ಹೊರತು ಮಾತಿನ ಮರ್ಮ-ಮೂಲಗಳ ಅರಿವು ಸಾಕಷ್ಟಿರುವುದಿಲ್ಲ. ಭೌತಿಕ-ಬೌದ್ಧಿಕ ವಿಚಾರಾಭಿವೃದ್ಧಿ ಇರುವುದಿಲ್ಲ. ಇದಾಗದ ವಿನಹ ಮನುಷ್ಯನು ಮನುಷ್ಯನಾಗಲಾರ; ನಾಗರಿಕನಾಗಲಾರ.

ತಾಯಿಯಲ್ಲಿ ಕಲಿವುದು ಬಾಹ್ಯವಾಣಿ. ಅಧ್ಯಾಪಕನಲ್ಲಿ ಕಲಿವುದು ಅಂತರ್ವಾಣಿ. ಇದುವೆ ಕಾವ್ಯ. ಕಾವ್ಯನೆಂದರೆ ಕೇವಲ ಛಂದೋ ಬದ್ಧವಾದ ಕವಿತೆ

ಯಲ್ಲ; ಪದ್ಯವಲ್ಲ. ಗದ್ಯವೂ ಕಾವ್ಯ. ಕಾವ್ಯವೆಂದರೆ ರಸವತ್ತಾದ ಸಾಹಿತ್ಯ. ತಾಯಿಯಿಂದ ಕಲಿತ ಮಾತಿನಲ್ಲಿ ಈ ರಸವಂತಿಕೆ ಬಹುಮಟ್ಟಿಗೆ ಇರುವುದಿಲ್ಲ, ಇದು ಕಾರಣ ರಸವಾಣಿಯನ್ನು ಮನುಷ್ಯನು ಅಳವಡಿಸಿಕೊಳ್ಳಲೇಬೇಕು. ಆಗ ಬುದ್ಧಿವಂತನೆನಿಸುತ್ತಾನೆ, ಜಾಣನೆಂದೆನಿಸುತ್ತಾನೆ. 'ಜವವಿಲ್ಲದ ಅಶ್ವ, ಕುವರನಿಲ್ಲದ ಮನೆ, ಕವಿತ್ವವಿಲ್ಲದ ಜಾಣ್ಮೆ' ಇವು ಪ್ರಯೋಜನವಿಲ್ಲೆಂದು ಕವಿ ಷಡಕ್ಷರಿಯು ಹೇಳಿದಾನೆ. ತಾಳಿಕೆಯ ಮಾತಿದು. ಉಳಿದ ಪಶುಗಳಂತೆ ಸಾಮಾನ್ಯವಾದ ನಡಿಗೆಯುಳ್ಳಡೆ ಅದು ಜಾತ್ಯಶ್ವವಲ್ಲ. ಅದರ ನಡಿಗೆಯಲ್ಲಿ ಚುರುಕು ಬರಬೇಕು. ವೇಗ ಹುಟ್ಟಬೇಕು. ಆಗ ಕುದುರೆ ಕುದುರೆಯಾಗಬಲ್ಲುದು. ಇಲ್ಲದಿದ್ದರೆ ಕತ್ತೆಯಾಗಬಲ್ಲುದು. ಮನುಷ್ಯನ ಮಾತಿನಲ್ಲಿಯು ಅಷ್ಟೆ. ಬರೀ ಮಾತುಬಂದರೆ ಸಾಲದು. ತಾಯಿಯಲ್ಲಿ ಕಲಿತ ಆ ಮಾತು ಶಿಕ್ಷಣ ಸಂಸ್ಕಾರದಿಂದ ಸ್ವಲ್ಪ ಚುರುಕಾದರೆ ರಸಯುಕ್ತವಾದರೆ ಅದೇ ಕಾವ್ಯವಾಗುತ್ತದೆ. ಆಗ ಮಾತು ಇಡಿಯಾಗುತ್ತದೆ. ಬಾಳು ಇಡಿಯಾಗುತ್ತದೆ. ಇಲ್ಲದಿದ್ದರೆ ನಡಿಗೆಯಿಲ್ಲದ ಕುದುರೆಯಂತೆ ಆಗಬೇಕಾಗುತ್ತದೆ. ಆಗ ಈತನನ್ನು 'ನರೋ ವಾ ವಾನರೋ ವಾ' ಎಂದು ಪ್ರಶ್ನಿಸಬೇಕಾಗುತ್ತದೆ. ಇದಕ್ಕೆ ಉತ್ತರ ಪ್ರಶ್ನೆಯೆ ಉತ್ತರವಾಗಬಲ್ಲುದು. ಓದು ಬಾರದವನ ಬಾಳು ನಿಜಕ್ಕೂ ವಾನರ ಬಾಳೆಂದೇ ಹೇಳಬೇಕು.

ಮಾತು ಪ್ರತ್ಯಕ್ಷ ಅಪ್ರತ್ಯಕ್ಷವೆಂದು ಎರಡು ಬಗೆಯಾಗಿದೆ. ಯಾರೊಡನೆ ಮಾತಾಡಬೇಕೋ ಅವರು ಪ್ರತ್ಯಕ್ಷವಾಗಿದ್ದಲ್ಲಿ ಅದು ಪ್ರತ್ಯಕ್ಷ ಮಾತು. ಒಬ್ಬರ ಮಾತನ್ನು ಇನ್ನೊಬ್ಬರ ಮುಖಾಂತರ ಮಾತಾಡುವುದು ಪರೋಕ್ಷ ಮಾತಿನ ಒಂದು ಬಗೆಯಾದರು ಬರೆಹ ಮೂಲಕ ಮಾತಾಡುವುದು ಮತ್ತೊಂದು ಬಗೆಯಾಗಿದೆ. ನಿದರ್ಶನಕ್ಕಾಗಿ ಕವಿ ಕಾಳಿದಾಸನು ಅದೆಂದೊ ಆಗಿ ಹೋಗಿದಾನೆ. ಅವನು ಇಂದು ಪ್ರತ್ಯಕ್ಷವಿಲ್ಲ. ಆದರೇನು? ಅವನ ಅಂತರ್ವಾಣಿ ಪ್ರತ್ಯಕ್ಷವಾಗಿದೆ. ಆತನು ತನ್ನ ಆ ಅಂತರ್ವಾಣಿಯನ್ನು ಕಾವ್ಯ ಅಥವಾ ಸಾಹಿತ್ಯ ಮುಖದಲ್ಲಿ ಇರಿಸಿದಾನೆ. ಕಾವ್ಯವಾಣಿಯಲ್ಲಿ ನಮ್ಮೊಡನೆ ಮಾತಾಡುತ್ತಾನೆ. ರಾಮಾಯಣದ ಕತೆಯನ್ನೆಲ್ಲ ಹೇಳುತ್ತಾನೆ. ಕುಮಾರನ ಕತೆಯನ್ನು ಚಿತ್ರಿಸುತ್ತಾನೆ. ದುಷ್ಯಂತ ಶಕುಂತಲೆಯರ ಬಾಳಬಗೆಯನ್ನು ಬಣ್ಣಿಸುತ್ತಾನೆ. ಇದು ಅವನು ಅಪ್ರತ್ಯಕ್ಷನಾಗಿದ್ದು ನಡೆವ ಮಾತು. ಇಷ್ಟು

ದೂರದ ಮಾತು ಬೇಡ. ಇದೀಗ ಈ ಪರೋಕ್ಷ ಮಾತಿನ ವ್ಯವಹಾರ ಹೆಚ್ಚಿ ಹೋಗಿದೆ. ಇದಕ್ಕೆ ಪತ್ರವ್ಯವಹಾರವೆ ಒಂದು ನಿದರ್ಶನ. ನಮ್ಮ ಬಂಧುಗಳು ಎಷ್ಟೋ ದೂರದಲ್ಲಿದ್ದರು ನಾವು ಮಾತಾಡುತ್ತೇವೆ. ಎಷ್ಟೋ ದೂರದ ರಾಜಕೀಯ ಮುಂತಾದ ವಿಚಾರಗಳನ್ನು ಪತ್ರಿಕೆಗಳ ಮುಖಾಂತರ ತಿಳಿದು ಮಾತಾಡುತ್ತೇವೆ. ಪತ್ರಗಳ ಪತ್ರಿಕೆಗಳ ಮಾತುಗಳು ರಸವತ್ತಾಗಿದ್ದರೆ ಅವು ಕಾವ್ಯಗಳಾಗಬಲ್ಲವು. ಸಾಹಿತ್ಯವಾಗಬಲ್ಲುದು. ಆಗಿವೆ. ವಿವೇಕಾನಂದರ ಜವಹಿರಲಾಲರ ಅನೇಕ ಪತ್ರಗಳು ಕಾವ್ಯಗಳಾಗಿವೆ ?

ಒಟ್ಟಿನಲ್ಲಿ ಇಂದಿನ ವ್ಯಾವಹಾರಿಕ, ರಾಜಕೀಯ ಧಾರ್ಮಿಕ ದೃಷ್ಟಿಯಿಂದ ಪರೋಕ್ಷ ಮಾತುಗಳನ್ನು ಕಲಿವುದು ಅವಶ್ಯಕ, ಅನಿವಾರ್ಯ. ಇದರಿಂದ ಮಾನವನ ಮಟ್ಟ ಮೇಲಕ್ಕೇರುತ್ತದೆ. ಮಾತಿನ ಪೂರ್ಣತೆ ತುಂಬಿ ಬರುತ್ತದೆ.

ಇದರಿಂದಾಗಿ ಅಧ್ಯಾಪಕನು ಕೊಡುವ ಬೌದ್ಧಿಕ ಶಿಕ್ಷಣವನ್ನು ತಪ್ಪದೆ ಕಲಿತಾಗಬೇಕು. ಈ ಶಿಕ್ಷಣ ಸುಧೆಯ ಪಾನವನ್ನು ಅನೇಕರು ಮಾಡುತ್ತಿಲ್ಲ. ಇದರಿಂದಾಗಿ ತಮ್ಮ ನಾಗರಿಕ ಜೀವನಕ್ಕೆ ಎರವಾಗುತ್ತಿದ್ದಾರೆ. ಅನೇಕರು ಕಲಿತು ನಾಗರಿಕರಾಗಿ ಮೂರನೆಯ ಹಂತದಲ್ಲಿ ಬಾಳಿ ಭೌತಿಕ ಬೌದ್ಧಿಕ ಸುಧೆಯನ್ನು ಪಾನಮಾಡುತ್ತಿದ್ದಾರೆ, ಮಾಡುತ್ತಾರೆ. ಇದಾವರು ಕೊರತೆಯದೆ. ಇದರಾಚೆ ಇನ್ನೊಂದಿದೆ. ಅದೇ ಆತ್ಮ. ಅದರಿಂದಲೆ ಬುದ್ಧಿ ಸಂಪತ್ತು ಶಕ್ತಿಸಂಪತ್ತು ವಾಕ್ ಸಂಪತ್ತು ಬರಬಲ್ಲವು, ಸಾರ್ಥಕವಾಗಬಲ್ಲವು. ಇವೆಲ್ಲಕ್ಕು ಕಾರಣವಾದ ಆ ಆತ್ಮ ಸಂಸ್ಕಾರವಿಲ್ಲದ ಮೇಲೆ ಮಾನವನಾಗಿ ಪ್ರಯೋಜನವಿಲ್ಲ. ಮಾತು ಮೈ ಬುದ್ಧಿ ಸಂಸ್ಕಾರಗಳನ್ನು ಪಡೆದ ಮನುಷ್ಯ ಕಡೆಯದಾಗಿ ಆತ್ಮ ಸಂಸ್ಕಾರವನ್ನು ಪಡೆಯಲೇಬೇಕು. ಆಗ ಮಾನವನು ಪರಿಪೂರ್ಣನಾಗಬಲ್ಲನು, ಮಹೋದಯನಾಗಬಲ್ಲನು.

ಈ ಮಹತ್ಕಾರ್ಯವನ್ನು ಮಾಡುವವನು ನಾಲ್ಕನೆಯ ಶ್ರೀಗುರುವಾದ ಆಚಾರ್ಯನು. ಮಾತು ಮೈಗಳ ಸಂಸ್ಕಾರ ಬಹಿರಂಗದ್ದು. ಬುದ್ಧಿ ಆತ್ಮಗಳ ಸಂಸ್ಕಾರ ಅಂತರಂಗದ್ದು. ಬಹಿರಂಗ ಸಂಸ್ಕಾರದ ಶ್ರೀಗುರುಗಳು ತಾಯಿ ತಂದೆಗಳು. ಅಂತರಂಗ ಸಂಸ್ಕಾರದ ಶ್ರೀಗುರುಗಳು ಅಧ್ಯಾಪಕ ಆಚಾರ್ಯರು. ಇವರಿಬ್ಬರು ಅಂತರಂಗದ ತಾಯಿ ತಂದೆಗಳು. ಅಧ್ಯಾಪಕನು ತಾಯಿಯ

ಕೆಲಸವನ್ನು ಮುಂದುವರಿಸಿದರೆ ಆಚಾರ್ಯನು ತಂದೆಯ ಕೆಲಸವನ್ನು ಮುಂದುವರಿಸುತ್ತಾನೆ. ಕೃತಿಯಿಲ್ಲದ ಮಾತು ಹೇಗೆ ಕೊರತೆಯುದೋ ಹಾಗೆ ಆತ್ಮಾನುಭವವಿಲ್ಲದ ಪಾಂಡಿತ್ಯ ಕೊರತೆಯದೆ. ಜನನಿಯ ಕೆಲಸವನ್ನು ಜನಕನು ಪೂರೈಸಿ ಕಳೆಕಟ್ಟಿಸಿದರೆ ಅಧ್ಯಾಪಕನ ಕೆಲಸವನ್ನು ಆಚಾರ್ಯನು ಪೂರೈಸಿ ಕಳೆ ಕಟ್ಟಿಸುತ್ತಾನೆ. ಅರಿತುದನ್ನು ಆಚರಿಸು ಎಂದು ಹೇಳುತ್ತಾನೆ. ಆಚರಿಸಿ ಅನುಭವಿಸು ಎಂದು ಬೋಧಿಸುತ್ತಾನೆ. ಅದರಂತೆ ನಡೆವುದೆ ಮಾನವನ ಉತ್ತಮಸ್ಥಿತಿ. ಉನ್ನತಗತಿ. ಇದೇ ಚರಮಗುರಿ ; ಪರಮಸಿರಿ.

ಇದರಿಂದಾಗಿ ಆಚಾರ್ಯನ ಆರ್ಯತ್ವ ಅತ್ಯಧಿಕವಾಮದು, ಶ್ರೀಗುರುತ್ವ ಹಿಂದಿನ ಮೂವರಿಗಿಂತಲು ಶ್ರೇಷ್ಠವಾದುದು.

ಈ ಶ್ರೀಗುರುವಿನ ಬೋಧೆಗೆ ಬಹುಮಂದಿ ಮನಸ್ಸು ಮಾಡುವುದಿಲ್ಲ, ಸುಧೆಗೆ ಬಾಯಿಬಿಡುವುದಿಲ್ಲ. ಮನಸ್ಸುಮಾಡಿ ಮಹಾತ್ಮರಾಗಿ ಆದರ್ಶಜೀವಿಗಳಾಗಿ ಅಖಂಡ ಜೀವಿಗಳಾಗಿ ಬದುಕುವುದಿಲ್ಲ. ಜಗದ ಜೀವಿಗಳಲ್ಲಿ ಒಂದು ಜೀವಿಯಾಗಿ ಜನನ ಮರಣದ ಜಂಜಡಕ್ಕೊಳಗಾಗಿ ಹೋಗುವವರೆ ಬಹಳ.

ಆತ್ಮವಿದ್ಯೆಯನ್ನು ಅಳವಡಿಸಿಕೊಳ್ಳುವವರು ಅಪರೂಪ. ಏಕೆಂದರೆ ಅಲ್ಲಿ ಜೀವನದ ಪರಿಪೂರ್ಣತೆ ಪರಿತೃಪ್ತತ ಇನೆಯೆಂದು ತಿಳಿದವರು ತೀರ ಅಪರೂಪ. ಇದರಿಂದಾಗಿ ಆ ಆತ್ಮವಿದ್ಯೆಯನ್ನು ಬೋಧಿಸುವ ಶ್ರೀ ಗುರುಗಳು ಮತ್ತೂ ಅಪರೂಪರಾಗಿದ್ದಾರೆ. ಇಂದಿನ ಯುಗದಲ್ಲಿ ಈ ಆತ್ಮ ಸುಧೆಯನ್ನು ಸುರಿದು ಪರಿಪೂರ್ಣ ಪರಮಾದರ್ಶ ಜೀವನ ಸಾಗಿಸಿದವರಲ್ಲಿ ಮಹಾತ್ಮಾ ಗಾಂಧೀಜಿಯವರೊಬ್ಬರು. ಇದು ಇನ್ನು ತಿಳಿದವರಿಗೂ ಅಗತ್ಯ ವಲ್ಲವೆ ?

ಮಾತಾಡುವಿಕೆ, ಮಾಡುವಿಕೆ ಅರಿಯುವಿಕೆ ಅಳವಡಿಸಿಕೊಳ್ಳುವಿಕೆ ಹೀಗೆ ನಾಲ್ಕುವಿಧವಾದಂತಹ ಶ್ರೀಗುರು ವಚನಸುಧೆಗಿಂತ ಬೇರೆ ಸುಧೆಯಿಲ್ಲ. ಈ ನೀತಿಬೋಧೆಗಿಂತ ಬೇರೆ ನೀತಿಬೋಧೆಯಿಲ್ಲ. ಇದನ್ನು ಕಂಡು ಕುಮಾರ ಯೋಗಿಗಳವರು ಬೋಧಿಸುತ್ತಿದ್ದರು.

ಆತ್ಮಾನುಭವವನ್ನು ಅಳವಡಿಸಿಕೊಳ್ಳುವುದೆ ಪರಮನೀತಿ ಅದನ್ನು ಅಳವಡಿಸಿಕೊಳ್ಳುವವನಿಗೆ ಆಚಾರ್ಯನು ಬೋಧಿಸುವ ನೀತಿಗಳಾವು, ಸನ್ನಡತೆಗಳಾವು ಎಂಬುದನ್ನು ಇನ್ನು ಅರಿತಾಗಬೇಕು.

## ೨. ರಾಗದಿಂ ಬೇರಿನ್ನು ಭವಬೀಜವುಂಟೆ ?

ರಾಗ ವಿರಾಗಗಳು ಮಾನವ ಜೀವನದಲ್ಲಿ ರಾತ್ರಿಹಗಲಿನಂಥವು. ರಾತ್ರಿ ಕಳೆದು ಹಗಲು ಬಾರದಿದ್ದರೆ ಮಾನವ ಜೀವನ ಅದೊಂದು ಶೂನ್ಯ. ಅದೇ ಒಂದು ಬಂಧನ. ಮಾನವನು ಮಹಾನುಭಾವನಾಗಬೇಕಾದರೆ ರಾಗದ ರಾತ್ರಿಯನ್ನು ಕಳೆದಾಗಬೇಕು. ವಿರಾಗ ರವಿ ಮೂಡಿಯಾಗಬೇಕು.

ಮಾನವನು ಮನೋವೃತ್ತಿಗೆ ಒಳಗಾಗಿ ಬದುಕುವಾಗ ಸ್ವಾರ್ಥಿಯಾಗಿ ಬಾಳುತ್ತಾನೆ. ಸ್ವಾರ್ಥವು ರಾಗದ (ಅತ್ಯಾಸೆಯ) ಬೀಜ. ರಾಗವು ಭವದ (ಬಳಲಿಕೆಯ) ಬೀಜ.

ಇಲ್ಲಿ ಭವವೆಂದರೆ ಬಳಲಿಕೆ. ಅದು ಹುಟ್ಟು ಸಾವುಗಳದ್ದಾದರು ಆಗ ಬಹುದು. ಅದು ಬೇಕು ಇದು ಬೇಕು ಎಂದು ಬಯಸಿ ಶ್ರಮಿಸುವದಾದರು ಆಗಬಹುದು. ಮನದ ಆಶೆಗೆ ಪಾರವಿಲ್ಲ. ಪಾರವಿಲ್ಲದ ಆ ಆಶೆಗೆ ಒಳ ಗಾಗುವುದೆ ಪಾರತಂತ್ರ್ಯ, ಪಾಮರತ್ವ. ಆತನ ಚಿತ್ತ ಆತನ ಸಾತಂತ್ರ್ಯ ದಲ್ಲಿರದು. ಕರ್ತವ್ಯಾಕರ್ತವ್ಯಗಳನ್ನು ಅರಿಯದು. ಬಯಸಿದ್ದು ಯಾವುದೆ ಇರಲಿ – ಅದು ಹೇಗೆ ಬರಲಿ ಅದನ್ನು ಸಂಪಾದಿಸುವುದೇ ಅದರ ಕರ್ತವ್ಯ. ಅದರಿಂದಾಗಿ ಮಾನವನು ಪಶುವೃತ್ತಿಗಿಳಿಯುತ್ತಾನೆ. ಅದರ ತಂತ್ರನಾಗಿ ಬಾಳುತ್ತಾನೆ, ಬೀಳುತ್ತಾನೆ.

ರಾಜಕೀಯ ರಂಗದಲ್ಲಿಯೆ ಆಗಲಿ ಧಾರ್ಮಿಕ ರಂಗದಲ್ಲಿಯೆ ಆಗಲಿ ಮಾನವನು ಅತಿ ಆಶೆಗೆ ಒಳಗಾದರೆ ಆ ರಂಗದಲ್ಲಿ ವಿಪ್ಲವ ಕಟ್ಟಿಟ್ಟ ಬುತ್ತಿ. ಇಂದಿನ ಕಳ್ಳಸಂತೆಯ ವಿಪ್ಲವದ ಕತೆ ಎಲ್ಲಿಗೇರಿದೆ? ಯಾವ ಪರಿಸ್ಥಿತಿಗೆ ಒಳಗಾಗಿಸಿದೆ? ಎಂಬುದು ಎಲ್ಲರಿಗು ತಿಳಿದ ವಿಷಯ. ಹೀಗೆಯೆ ಧಾರ್ಮಿಕ ರಂಗದಲ್ಲಿಯೂ ರಾಗದಿಂದ ರಸವಿಲ್ಲ. ರಾಗವು ಎಲ್ಲ ರಂಗಗಳಲ್ಲಿಯು ವಿರಸ. ಅದನ್ನೆ ರಸವೆಂದು ಭಾವಿಸಿ ಭ್ರಮಿಸಿ ಜೀವನು ಮುನ್ನಡೆಯುತ್ತಿದ್ದಾನೆ, ಮುಂಗಾಣದವನಾಗಿದ್ದಾನೆ. ಇದನ್ನು ತಿಳಿದುಕೊಳ್ಳುವ ತೀರಕ್ಕೆ ಬಂದು ಹತ್ತದವನಾಗಿದ್ದಾನೆ.

ಮಹಾತ್ಮಾ ಗಾಂಧೀಜಿಯು ಮಾನವ ಹಂತದಿಂದ ಮಹಾತ್ಮ ಹಂತಕ್ಕೆ ಬಂದುದು ರಾಗದಿಂದಲ್ಲ, ವಿರಾಗದಿಂದ. ವಿರಾಗವೆಂದರೆ ಇದು :

ಎಲ್ಲವನ್ನು ಬಿಟ್ಟು ತಾನೆ ತಾನಾಗಿ ಇರುವುದೆ ವಿರಾಗದ ಪೂರ್ಣತೆಯಲ್ಲ. ಅದು ವೈಯಕ್ತಿಕ ಮಾತ್ರ. ಆತನು ಒಂದು ರೀತಿಯ ರಾಗಿಯೆ! ಅದೇ ಲೋಕ ಕಲ್ಯಾಣ ಸಾಧನವಾದಾಗ ವಿರಾಗ ಪರಿಪೂರ್ಣವಾಗಬಲ್ಲುದು. ತನ್ನ ಸ್ವಾರ್ಥಕ್ಕಾಗಿ ವಿರಾಗವನ್ನು ಬಳಸಿ ಲೋಕಸೇವೆಗಾಗಿ ರಾಗವನ್ನು ಬೆಳಸಿದರೆ ಅದು ವಿರಾಗವೆ! ಅಂತಹ ವಿರಾಗ ಇದೀಗ ಅತ್ಯಗತ್ಯ. ಎಂದೆಂದಿಗೂ ಅತ್ಯಗತ್ಯ.

ವ್ಯಕ್ತಿಹಿತವನ್ನು ಬಯಸುವವನು ಈ ಲೋಕ ಕಲ್ಯಾಣಕಾರಕವಾದ ವಿರಾಗಕ್ಕೆ ಬಾರನು. ಬಾರದ ಮೇಲೆ ಅವನು ಮಹಾನುಭಾವನಾಗಲಾರನು. ಆಗದ ಮೇಲೆ ಅವನಿಗೆ ಭವಬಂಧನ ತಪ್ಪದು. ಭವಭವಾಂತರದಲ್ಲಿ ಅವನು ಒಂದಿಲ್ಲ ಒಂದು ರೀತಿಯಿಂದ ಬಳಲಬೇಕು; ಬಳಲುತ್ತಾನೆ.

ರಾಗಿಗೆ ಎಷ್ಟು ಸಂಪಾದಿಸಿದರು ಅಶಾಂತಿ; ಅಸಂತೋಷ. ಸಂಪಾದಿಸದಿದ್ದರಂತು ಅವನ ಪಾಡು ಪಾಡೇ. ಅದನ್ನು ಹೇಳಲಾಗದು. ವಿರಾಗಿಗೆ ಸಂಪಾದಿಸಿದರು ಸಂತೋಷ, ಸಂತೃಪ್ತಿ. ಸಂಪಾದಿಸದಿದ್ದರು ಸಂತೋಷ, ಸಂತೃಪ್ತಿ. ರಾಗಿಯು ಮೈಸಿರಿ – ಮನೆಸಿರಿಗಳಿಗಾಗಿ ಹಿಗ್ಗುತ್ತಾನೆ, ಹೆಚ್ಚುತ್ತಾನೆ. ವಿರಾಗಿಯು ಭಾವದಸಿರಿ ಭುವನದ ಸಿರಿಗಳಿಗಾಗಿ ಹಿಗ್ಗಿಹೆಚ್ಚುತ್ತಾನೆ. ರಾಗಿಗೆ ಅಹೋರಾತ್ರಿಗಳು ಒಮ್ಮೊಮ್ಮೆ ಬಂದು ಒಮ್ಮೆ ಸುಖ ಒಮ್ಮೆ ದುಃಖ, ಒಮ್ಮೆ ಶಾಂತಿ ಇನ್ನೊಮ್ಮೆ ಅಶಾಂತಿ, ಒಮ್ಮೆ ಕ್ರಿಯೆ ಮತ್ತೊಮ್ಮೆ ಅಕ್ರಿಯೆ, ಒಮ್ಮೆ ದಯೆ ಮಗದೊಮ್ಮೆ ಅದಯೆ ಹೀಗೆ ಅಸ್ಥಿರವಾಗಿ ಹುಟ್ಟಿಸುತ್ತವೆ. ವಿರಾಗಿಗೆ ಅವು ಯಾವಾಗಲು ಒಟ್ಟಾಗಿಯೆ ಇದ್ದು ಶಾಂತತೆ ಸತ್ಕಾರ್ಯ ದಕ್ಷತೆ ಮುಂತಾದವುಗಳನ್ನು ಸದಾಕಾಲದಲ್ಲಿ ಹುಟ್ಟಿಸುತ್ತವೆ. ರಾಗಿಯು ರಹಸ್ಯಕ್ಕಿಂತ ರಂಜನೆಗೆ ಹೆಚ್ಚು ವಾಲುತ್ತಾನೆ. ಅವಶ್ಯಕ್ಕಿಂತ ಹೆಚ್ಚು ಅನವಶ್ಯಕತೆಗಳಿಗೆ ಆಶಿಸುತ್ತಾನೆ. ವಿರಾಗಿಯು ಇವುಗಳಿಗೆ ವಿರುದ್ಧವಾಗಿ ವರ್ತಿಸುತ್ತಾನೆ. ರಾಗವು ತನ್ನನ್ನೆ ಬಂಧನದಿಂದ ದಾಟಿಸದು. ವಿರಾಗವು ಭುವನವನ್ನೆ ಬಂಧ ಬಳಲಿಕೆಗಳಿಂದ ದಾಟಿಸುತ್ತದೆ. ಅದು ರಾಗದ ಗುಣ. ಇದು ವಿರಾಗದ ಗುಣ. ಅದು ಭವಬಂಧನಕ್ಕೆ ಬೀಜ; ಇದು ಭವ ವಿಮುಕ್ತಿಗೆ ಬೀಜ; ಭವ್ಯ ಶಕ್ತಿಗೆ ಬೀಜ.

ಇಂತಹ ವಿರಾಗವು ವಿವಾಹವಾಗದ ಸಂನ್ಯಾಸಿಗಳಿಗೆ ಮಾತ್ರವಲ್ಲ, ಸಂಸಾರಿಗಳಿಗು ಆವಶ್ಯಕವಾದುದು. ಪ್ರತಿಯೊಬ್ಬನು ಪಾಲಿಸಬೇಕಾದುದು. ಅಂದಿಗೆ ಜಗತ್ಕಲ್ಯಾಣವಾಗುತ್ತದೆ. ಜೀವನ್ಮುಕ್ತಿಯ ಸವಿ ಸಿಕ್ಕುತ್ತದೆ. ಜೀವನ್ಮುಕ್ತಿಯೇ ಜೀವನ. ವಿದೇಹ ಮುಕ್ತಿಯೆ ಮರಣ. ಜೀವನ್ಮುಕ್ತಿಯ ಜೀವನಕ್ಕೆ ಶರಣು ಹೋಗುವುದೆ ಲೇಸು. ಭವಬೀಜವಾದ ರಾಗವ ಬಿಡುವುದೇ ಲೇಸು.

ಇವಲ್ಲದೆ ಇನ್ನು ಅನೇಕ ನೀತಿಗಳನ್ನು ಬೋಧಿಸುತ್ತಿದ್ದರು. ಅವನ್ನೆಲ್ಲ ಇಲ್ಲಿ ವಿವರಿಸದೆ ಕ್ರೋಢೀಕರಿಸಿ ಕೈಬಿಡಲಾಗುತ್ತದೆ.

ತಿರೆಯಲ್ಲಿ ನರಜನ್ಮಕ್ಕೆ ಹಿರಿದಿಲ್ಲ. ಕರಣ ವಿಜಯದಿಂದ ಕಲಿತನವಿಲ್ಲ. ಯಾಚನೆಗಿಂತ ನೀಚತನವಿಲ್ಲ. ಆತ್ಮದರಿವಿಗಿಂತ ಜಾಣ್ಮೆಯಿಲ್ಲ. ಕೃಪಣತೆಯೆ ಕುಗುಣ. ಅಪವಾದವೆ ಆತ್ಮಹತ್ಯ. ಸತ್ಯವೇ ಶುದ್ಧತಪ. ಸ್ವಾಭಿಮಾನವೆ ಸಂಪದ. ಕಾಯಬಿಟ್ಟು ಮಾಯದಾಟವಿಲ್ಲ. ಕಾಮಬಿಟ್ಟು ಚುಚ್ಚು ಕತ್ತಿಯಿಲ್ಲ, ವಿನಯಬಿಟ್ಟು ಉಪಚಾರವಿಲ್ಲ, ತನ್ನ ಬಿಟ್ಟು ನನ್ನಿವಿಷಯವಿಲ್ಲ. ಶಮೆಯೆ ಮುಕ್ತಿಸಾಧನ, ವಿಮಲಮಾನಸವೆ ಶುಭತೀರ್ಥ. ಕ್ರಮತಪ್ಪಿ ನಡೆವುದೆ ಕಡುಕಷ್ಟ. ಮಮಕಾರವೆ ಮುಕ್ತಿನಬಂಧ. ದಯೆಯಿರಲು ಧರ್ಮ ಬೇಡ, ವಿರತಿಯಿರಲು ಸಂಪದ ಸುಖಬೇಡ. ಅಚ್ಚಭಕುತಿಯಿರಲು ನಚ್ಚರಿತ ವೇಕೆ ? ತಾನಿರಲು ತಿರೆಯ ದೇವರೇಕೆ ?

ಸಮತೆ ಸಹಜತೆ ಸ್ನೇಹ ಸೇವೆ ಸಂತ್ಸಂಗ ನಿಸ್ಸಂಗ ಆದರಣೆ ಲೌಕಿಕ ಪರಮಾರ್ಥ ಜಾಣ್ಮೆ ನೇಮ ನಿಷ್ಠೆ ಪೂಜೆ ಪ್ರಾರ್ಥನೆ ವಿನಯ ವಿವೇಕ ವಿರತಿ ವಿದ್ಯೆ ಶಮೆ ದಮೆ ಸತ್ಯ ಸತ್ಕೃತ್ಯ ಧೈರ್ಯ ಸ್ಥೈರ್ಯ ದಾನ ಧರ್ಮ ಇವೆಲ್ಲ ಅನುಸರಿಸತಕ್ಕ ನೀತಿಗಳು.

ಪರವಧುವಿನಕೂಟ ಪರವಿತ್ತಾಪಹರಣ ಅಭಕ್ಷಸೇವನೆ ಹಿಂಸೆ ಇವು ತನುವಿನಿಂದಾಗುವ ಅನೀತಿಗಳು ; ಪಾಮರ ಜನ್ಮ ಕಾರಣಗಳು ಇವನ್ನು ಪರಿತ್ಯಜಿಸಬೇಕು.

ಅಸತ್ಯ ಅನುಚಿತ ನಿಷ್ಠುರತೆ ಪೈಶುನ್ಯ ಇವು ಮಾತಿನಲ್ಲಿ ಮೂಡುವ ಅನೀತಿಗಳು. ಪಶು ಪಕ್ಷಿ ಮೃಗಜನ್ಮ ಸಾಧನಗಳು. ಇವನ್ನು ಪರಿತ್ಯಜಿಸಬೇಕು.

ಅಕಾರ್ಯಯೋಚನೆ ಅನಿಷ್ಟಚಿಂತನೆ ಅನ್ಯಧನದಾಶೆ ಅನ್ಯಸತಿ ಕಾಂಕ್ಷೆ ಇವು ಮಾನಸಿಕ ಅನೀತಿಗಳು. ಪಾಪಜನನ ಮೂಲಗಳು. ಇವನ್ನು ಪರಿವರ್ಜಿಸಬೇಕು. ಅಲ್ಲದೆ ಮದ ಮಾನ ಲೋಭ ಮೋಹ ರೋಷ ಮಾತ್ಸರ್ಯ ಮಂದಭಾವ ಕದನ ಕರ್ಕಶ ಕಪಟ ಕೋಪ ಸಿದ್ಧಿವಾದ ವಶ್ಯವರ್ಗ ಅವಿವೇಕ ಅಲಸಿಕೆ ಹಿಂಸೆ ನಿಂದೆ ತವಕ ಶೋಕ ಕರಣವೃತ್ತಿ ಮಾಯಾವಿಲಾಸ ಹವಣಿಸದಾಸೆ ಕುಮತಶಾಸ್ತ್ರಾನುಗತಿ ವಿರತಿ ಸಂಸೃತಿ ಅತಿಮಮತೆ ಚಿಂತೆ ದುರಾತ್ಮರ ಸಮರತಿ ಇವೆಲ್ಲ ಬಿಟ್ಟುಬಿಡತಕ್ಕ ಅನೀತಿಗಳು.

ಇವೆಲ್ಲ ನಿಜಗುಣರು ನಿರೂಪಿಸಿದ ನೀತಿ ಅನೀತಿಗಳಾದವು ಸ್ವಾಮಿಗಳು ಇವನ್ನೆಲ್ಲ ತಮ್ಮ ನಡೆಯಲ್ಲಿ ಒಂದೂ ತಪ್ಪದೆ ತಂದುಕೊಂಡು ತಮ್ಮದೇ ಆದ ಒಂದು ವಿಶಿಷ್ಟತೆಯಿಂದ ವೈಶಾಲ್ಯದಿಂದ ಮನಮುಟ್ಟುವಂತೆ ಉಪದೇಶಿಸು ತ್ತಿದ್ದರು. ಉಪದೇಶ ಕೇಳಿದವರು ಅದರಂತೆ ನಡೆಯುತ್ತಿರುವರೊ ಇಲ್ಲೊ ಎಂಬುದನ್ನು ಶೋಧಿಸುತ್ತಿದ್ದರು. ಈ ವಿಷಯದಲ್ಲಿ ಅವರ ದೃಷ್ಟಿ ಅಪ್ರಮಾಣ ವಾಗಿತ್ತು. ಅದರಿಂದ ಅದು ಅಪ್ರಮೇಯವೆಂದು ಹೇಳಬೇಕಾಯಿತು.

ಸ್ವಾಮಿಗಳವರ ಸದ್ಬೋಧೆಯಿಂದ ನೀತಿಜ್ಯೋತಿಯು ಬೆಳಗಿತು. ರೀತಿ ಪ್ರೀತಿಯು ಹೆಚ್ಚಿತು. ಸ್ವಾಮಿಗಳವರು ನೀತಿ ರೀತಿಗಳ ಮಹೋನ್ನತಿಗೆ ಮೂಲಕಾರಣರಾದರು.

'ಎಲ್ಲರೊಡನೆ ವೈರವಿಲ್ಲದೆ ಕೂರ್ಪುದೆ ಚಂದವು'



# ಕಾಲೋಚಿತವ ಬಲ್ಲ; ಕ್ರಮವ ತಪ್ಪುವನಲ್ಲ

ರವಿಬಳ್ಳ ಮುಪ್ಪಿನಂ ಮಾ-
ನವರಾಯುಮ ನಳೆದು ನಿಚ್ಚಲುಂ ಜವನುಂಬಂ |
ಅವನಿಯೊಳಿರ್ಪನ್ನೆವರಂ
ವಿವೇಕದಿಂ ಧರ್ಮಮೊಸಗಿ ಕಳೆವುದು ದಿನಮುಂ ||

—ನೀತಿಮಂಜರಿ.

ಹೊತ್ತಿನ ಮಹತ್ತ್ವನ್ನು ಅರಿತವರಲ್ಲಿ ಸ್ವಾಮಿಗಳವರು ಅಗ್ರಗಣ್ಯರು. 'ಸುಮ್ಮನೆ ಕಾಲವನು ಕಳೆದು ಸಾವುದುಚಿತವೆ ಮನುಜ' ಎಂಬ ನಿಜಗುಣರ ಹಿತನುಡಿಯನ್ನು ಸ್ವಾಮಿಗಳವರು ಸಂಪೂರ್ಣ ಪರಿಪಾಲಿಸುತ್ತಿದ್ದರು. ಅಲ್ಲದೆ ಹೋದ ಹೊತ್ತು ಹೊರಳಿ ಬಾರದು, ಕಳೆದ ಕಾಲ ಕೋಟಿ ಕೊಟ್ಟರು ಮರಳಿ ಬಾರದು. ವ್ಯರ್ಥ ಕಾಲಕ್ಷೇಪ ಮಾಡುವವನ ಜೀವನ ನಿರರ್ಥಕವಾದುದು. ಎಂದು ಪರರಿಗು ತಿಳಿಹೇಳುತ್ತಿದ್ದರು.

ಕಾಲವೆಂಬ ಉಯ್ಯಾಲೆಯಲ್ಲಿ ನಾವು ನೇತಾಡುತ್ತಿರುವೆವು. ಅದು ಯಾವಾಗ ಹರಿದು ಬೀಳುತ್ತದೆಯೊ ಬಲ್ಲವರಾರು ? ಕಾಲದ ಔಚಿತ್ಯವನ್ನರಿದು ಮುನ್ನಡೆಯಬೇಕು. ಕಾಲವನ್ನು ಕನಕದಂತೆ ಬಳಸಬೇಕು ಭಾವಿಸಬೇಕು ಎಂದು ಬಿತ್ತರಿಸುತ್ತಿದ್ದರು.

ಕಾಲವೆಂಬುದು ಒಂದು ಪ್ರವಾಹ. ಅದನ್ನು ಒಳ್ಳೆಯದಕ್ಕೆ ಉಪಯೋಗಿಸಿಕೊಳ್ಳುವವನೆ ಜಾಣ. ಆತನು ಸತ್ಕೀರ್ತಿಯೆಂಬ ಹುಲುಸುಬೆಳೆಯು ಬೆಳೆಯಬಲ್ಲ. ಕಾಲವನ್ನು ಮೀರಿ ಕೀರ್ತಿಕಾಯದಿಂದ ನಿಲ್ಲಬಲ್ಲ. ತಿಳಿಯದವನು ಕಾಲಪ್ರವಾಹವನ್ನು ಉಪಯೋಗಿಸಿಕೊಳ್ಳದೆ ಹರಿಯಬಿಡುವನು. ಅದರ ಸೆಳತಕ್ಕೆ ಸಿಕ್ಕಿ ಸಾವಿನ ಸಾಗರದಲ್ಲಿ ಮುಳುಗಿ ಹೋಗವನು ಎಂದು ಉದ್ಬೋಧಿಸುತ್ತಿದ್ದರು.

ಸ್ವಾಮಿಗಳವರು ಕಾಲವನ್ನು ಕೆಟ್ಟದರಲ್ಲಿ ಕಳೆಯದಂತೆ ಕಾರ್ಯಕ್ರಮ ಳನ್ನು ಏರ್ಪಡಿಸುತ್ತಿದ್ದರು. ಸತ್ಕಾರ್ಯ ಸಮೂಹಗಳಲ್ಲಿ ಪ್ರವೃತ್ತರನ್ನಾಗಿ ಾಡುತ್ತಿದ್ದರು. ಕಾಲದ್ದಕ್ಕೆ ಯಾವಾವ ವೇಳೆಯಲ್ಲಿ ಏನೇನು ಮಾಡಿದ ಂಬುದನ್ನು ಅರಿಯಲು 'ಡೈರಿ' ಬರೆಯಲು ಸಾಧಕರಿಗೆಲ್ಲ ಕಟ್ಟಪ್ಪಣೆಯ ಾಡಿದ್ದರು. ಸುಮ್ಮನೆ ಕಾಲಕಳೆವ ಸೋಮಾರಿಗಳನ್ನು ಕಂಡರೆ ಸ್ವಾಮಿ ಳವರಿಗೆ ಆಗುತ್ತಿರಲಿಲ್ಲ.

ಆಯುಷ್ಯವೆ ನಮಗೆ ನಿಜವಾದ ಆರ್ಥಿಕ ಸಂಪತ್ತು. ಆಯುಷ್ಯ ಲ್ಲದ ಅರ್ಥ ಅದೆಷ್ಟಿದ್ದರೇನು? 'ಅರ್ಥರೇಖೆಯಿದ್ದಲ್ಲಿ ಫಲವೇನು ಆಯುಷ್ಯ ೇಖೆಯಿಲ್ಲದನ್ನಕ್ಕರ' ಎಂಬ ಅಣ್ಣ ಬಸವಣ್ಣನ ವಚನವನ್ನು ನೆನೆಯಿರಿ. ದರಿಂದ ಹೊರಗಿನ ಹಣಕ್ಕಿಂತಲು ಆಯುಷ್ಯಸಂಪತ್ತನ್ನು ಸಂರಕ್ಷಿಸಬೇಕು, ದುಪಯೋಗಪಡಿಸಿಕೊಳ್ಳಬೇಕು.

ಕ್ರಮದಿಂದ ನಡೆವುದರಲ್ಲಿಯೆ ಸ್ವಾಮಿಗಳವರಿಗೆ ಹೆಚ್ಚಿನ ಪ್ರೇಮ. ಷ್ಟು ಕೆಲಸಗಳಿದ್ದರು ಎಷ್ಟು ಕಷ್ಟಗಳೊದಗಿದರು ತಮ್ಮ ಕ್ರಮದಿಂದ ತಾವು ಷ್ಟೂ ತಪ್ಪುತ್ತಿರಲಿಲ್ಲ.

'ಕ್ರಮತಪ್ಪಿನಡೆವುದರಿಂ ಕಷ್ಟಮುಂಟೆ?'



# ಸಂಗೀತ - ಸಾಹಿತ್ಯ

ಸಂಗೀತದಲ್ಲಿಯು ಸಾಹಿತ್ಯದಲ್ಲಿಯು ಸ್ವಾಮಿಗಳವರಿಗೆ ಸಂಪ್ರೀತಿಯಿತ್ತು ; ಸ್ವಾಮಿತ್ವವಿತ್ತು. ಸಂಗೀತ ಕಳಾಭಿವೃದ್ಧಿಗೆ ಅವರು ಮಾಡಿದ ಸಹಾಯ ಸಂಪತ್ತಿ ಸಣ್ಣದಲ್ಲ. ಸ್ವಾಮಿಗಳವರು ಹಾನಗಲ್ಲ ತಾಲೂಕಿನಲ್ಲಿ ಒಮ್ಮೆ ಸಂಚರಿಸುತ್ತಿರುವಾಗ ಅದೇ ತಾಲೂಕಿನ ಕಾಡಸೆಟ್ಟಿಹಳ್ಳಿಯಲ್ಲಿನ ಮಠದ ಒಬ್ಬ ಅಯ್ಯನವರಿಗೆ ಇಬ್ಬರು ಹುಟ್ಟುಗುರುಡ ಮಕ್ಕಳಿದ್ದರು. ತಂದೆ ತೀರ ಬಡವನಾದ್ದರಿಂದ ಆ ಮಕ್ಕಳನ್ನು ಸಲುಹಲು ಸಾಧ್ಯವಾಗದೆ ಸಾಕಾಗಿದ್ದನು. ಸ್ವಾಮಿಗಳವರು ಕಣ್ಣಿಲ್ಲದ ಆ ಎರಡು ಹುಡುಗರನ್ನು ಕರೆತಂದು ಸಂಗೀತಾಭ್ಯಾಸಕ್ಕೆ ಹಚ್ಚಿದರು. ಹುಡುಗರಿಗೆ ಕಣ್ಣಿಲ್ಲದಿದ್ದರು ಕಂಠವಿತ್ತು, ಕಲರವವಿತ್ತು. ಅದರಿಂದಾಗಿ ಸ್ವಾಮಿಗಳವರು ಉತ್ಕಂಠಿತರಾಗಿ ಉದಾರ ಸಹಾಯ ನೀಡಿ ಸಂಗೀತ ಶಿಕ್ಷಕರೊಬ್ಬರನ್ನು ನಿಯಮಿಸಿದರು. ಇಬ್ಬರನ್ನು ಸಂಗೀತ ಕಲಾಭಿಜ್ಞರನ್ನಾಗಿ ಮಾಡಿಸಿದರು. ಅಷ್ಟರಲ್ಲಿ ಹಿರಿಯ ಹುಡುಗನು ತೀರಿಹೋದನು. ಉಳಿದ ಚಿಕ್ಕವರೆ ಪಂಚಾಕ್ಷರಿ ಗವಾಯಿಗಳೆಂದು ಪ್ರಸಿದ್ಧಿಪಡೆದರು. ಕನ್ನಡ ಸಂಗೀತರಂಗದಲ್ಲಿ ಅವರದೇ ಒಂದು ಪ್ರತಿಭೆ; ಅವರದೇ ಒಂದು ಶೋಭೆ. ಇದರಿಂದಾಗಿ ಕನ್ನಡನಾಡಿನಲ್ಲೆಲ್ಲ ಕೀರ್ತಿಗಳಿಸಿದರು, ಕಲಾವಂತರೆನಿಸಿದರು. ಸಂಗೀತ ಕಲೆ ಸೋಜ್ವಲವಾಗಿ ಪಸರಿಸಲು ಅನುವಾಯಿತು. ಇದಕ್ಕೆಲ್ಲ ಕುಮಾರಯೋಗಿಯ ಕೃಪೆಯೆ ಕಾರಣವಾಯಿತು.

ಸ್ವಾಮಿಗಳವರಿಗೆ ಸಂಗೀತ ಬಾರದಿದ್ದರು ಅರಿತಿದ್ದರು. ಹಾಡುವ ಆಸೆ ಇಲ್ಲದಿದ್ದರು ಹಾಡಿಸುವ ನಿರೀಕ್ಷೆ ಇತ್ತು. ಅಲ್ಲದೆ ತಾವೇ ಸ್ವತಃ ಬೇರೆ ಬೇರೆ ರಾಗಗಳಲ್ಲಿ ಭಾವಗೀತಗಳನ್ನು ಬರೆದಿದಾರೆ, ಪ್ರಾರ್ಥನಾ ಪದ್ಯಗಳನ್ನು ರಚಿಸಿದಾರೆ. ಇದರಿಂದಾಗಿ ಸ್ವಾಮಿಗಳವರದು ಸಂಗೀತ ಮಿಶ್ರ ಸಾಹಿತ್ಯ. ಭಕ್ತಿ ಸಮ್ಮಿಶ್ರ ಸಂಗೀತ. ಸ್ವಾಮಿಗಳು ಸಂಗೀತ ಸಾಹಿತ್ಯ ಕೃಷಿಯಲ್ಲಿದ್ದರು. ಅವುಗಳಲ್ಲಿ ಖುಷಿಯಾಗಿದ್ದಾರೆ. ಸ್ವಾಮಿಗಳವರು ಸಂಗೀತ ಪ್ರೋತ್ಸಾಹಕರು; ಸಾಹಿತ್ಯ ನಿರ್ಮಾಪಕರು.

ಕುಮಾರಯೋಗಿಗಳವರು ಬಾಹ್ಯಸಂಗೀತ ಗಾಯಕರಾಗದಿದ್ದರು ಆತ್ಮಗಾನದಲ್ಲಿ ಅವಿರತ ನಿರತರಾಗಿದ್ದರು; ಆಗಿರುತ್ತಿದ್ದರು. ಅದಕ್ಕಾಗಿ ಅವರಿಗೊಂದು ವೀಣೆಯಿತ್ತು. ಒಂದು ರಾಗವಿತ್ತು: ಅದನ್ನು ಸುಶ್ರಾವ್ಯವಾಗಿ ಸುಮಧುರವಾಗಿ ಬಾಜಿಸುತ್ತಿದ್ದರು; ಬಾಹ್ಯವನು ಮರೆಯುತಿದ್ದರು.

"ಯೋಗಿ ನಿಜಾನಂದದೊಳು ನುಡಿಸುವ ವೀಣೆ |
ರಾಗ ರಸದ ತರಂಗಿಣಿ ನೋಡು ರಮಣಿ ||

ತನುವೆಂಬ ಹೊಳಹಿಗೆರಡು ದಿಟ್ಟಿಯೆಂಬ ಕಾಯ
ನನುವರಿದಲುಗದಂತಿರೆ ಕೀಲಿಸಿ |
ನನುಮತವಾದ ಷೋಡಶಾಧಾರವೆಂಬ ರಮ್ಯ
ಮಿಸುನುವ ಮೆಟ್ಟುಗಳ ನೆಲೆಯ ನಾಟ್ಟಿದು ನೋಡಿ ||

ತಿಕದೇಳು ಮುಖ್ಯನಾಡಿಯೆಂಬ ತಂತಿಗಳನು
ಮಾಗಲಿ ಮತಿ ಮನವನುಮಿಂದ್ರಿಯಂಗಳ |
ಕುಲಿವೆಂಬ ತಿರುಪುಗಂಬದೊಳು ಬಂಧಿಸಿ ಮೂಲ
ದೊಳಗಣ ತಾರೆಯೆಂಬ ಕಳಿಯ ಶ್ರುತಿಯನೆತ್ತಿ ||

ವರ ಶಂಕರಾಭರಣವನು ಮೇಳೈಸಿ ಯೋಗ
ಕರಣವೆಂಬಂಗುಲಿಯನಿಟ್ಟು ಬಾಜಿಸಿ |
ಪರನಾದವೆಂಬ ಗೀತವನು ಗುರುಶಂಭುಲಿಂಗ
ವರದಿಂದು ಮುಟ್ಟಿ ಮುಕ್ತಿಪದ ವೀಣೆ ಕೇಳಿಸುವ ||

ಅವರು ತಮ್ಮ ಆ ಆತ್ಮಗಾನಕ್ಕೆ ಈ ವೀಣೆಯನು ಉಪಯೋಗಿಸಿ ಎಡೆಬಿಡದೆ ನುಡಿಸಿದರು, ನುಡಿದರು. ಆ ರಾಗರಸ – ಆ ಸಮರಸಗಳಲ್ಲಿ

ತಾವೇ ತಾವಾಗಿ ಇರುತ್ತಿದ್ದರು. ಬಾಹ್ಯಸಂಗೀತಕ್ಕಿಂತಲು ಭಾವಸಂಗೀತದಲ್ಲಿ ಹೆಚ್ಚು ಪ್ರವೀಣರಾಗಿದ್ದರು, ಪರಮಾನಂದ ಭರಿತವಾಗಿದ್ದರು.

ಎರಡನೆಯದಾಗಿ ಸ್ವಾಮಿಗಳವರಿಂದ ಸಾಹಿತ್ಯ ರಚನೆಗಿಂತ ಸಾಹಿತ್ಯ ಪೋಷಣೆ ಅನನ್ಯಸಾಧಾರಣವಾಗಿ ಜರಗಿತು. ಪರಿಶೋಧನೆ ಪರಿಣಾಮ ಕಾರಿಯಾಗಿ ಫಲಿಸಿತು.

ಆಧುನಿಕ ಸಾಹಿತಿಗಳಿಗೆ ಪ್ರಾಚೀನ ಸಾಹಿತ್ಯ ಅದೊಂದು ಪಿತ್ರಾರ್ಜಿತ ಆಸ್ತಿ. ಆಧುನಿಕ ಸಾಹಿತ್ಯ ವೃಕ್ಷದ ತಾಯಿಬೇರು. ಆಧುನಿಕ ಸಾಹಿತ್ಯ ಸುಂದರಭವನದ ಅಸ್ತಿವಾರ.

ಆಂಗ್ಲ ವಿದ್ಯೆಯನೋದಿ ಅಧಿಕಾರಾರೂಢನಾಗಿ ಹಳ್ಳಿಯಲ್ಲಿರುವ ತನ್ನ ಪಿತ್ರಾರ್ಜಿತ ಆಸ್ತಿಯನ್ನು ಮರೆತ ಆಧುನಿಕ ನಾಗರಿಕನ ಸ್ಥಿತಿ ಸಾಹಿತಿಯ ದಾಗಿತ್ತು. ಅಧಿಕಾರ ಇರುವವರೆಗಿಗು ಅಂದ ಚಂದದ ಬಾಡಿಗೆಯ ಮನೆಗಳ ವಾಸಸೌಖ್ಯ ದೊರೆಯಬಹುದು. ಅದೇ ನಿವೃತ್ತನಾದ ಮರುದಿನ ಮರಳಿ ಪಿತ್ರಾರ್ಜಿತ ಆಸ್ತಿಯತ್ತ ಹೊರಳಬೇಕು. ಅಷ್ಟರಲ್ಲಿ ಇದು ಹಾಳು ಬಿದ್ದಿದ್ದರೆ ಗತಿ ? ದುರ್ಗತಿ.

ಸಾಹಿತಿಯ ಸ್ಥಿತಿಯು ಇಂತಹದಾಗಿತ್ತು. ಆತ ತನ್ನ ಪಿತ್ರಾರ್ಜಿತ ಆಸ್ತಿಯನ್ನೆ ಲಕ್ಷಿಸದೆ ಪೋಷಿಸದೆ ಪರಕೀಯ ಎರವಲ ಸಾಹಿತ್ಯಸೌಧದಲ್ಲಿ ಓಲಾಡುತ್ತಿದ್ದನು. ಪರರ ಸೊತ್ತಿನಿಂದ ಬಾಳುವುದು ಅದೆಷ್ಟು ದಿನ ? ಸ್ವಂತ ಆಸ್ತಿ ಶೇಖರವಾಗುವ ಬಗೆಯೆಂತು ? ವ್ಯಾಪಾರಿಯು ಸಾಲತಂದ ಮೂಲ ಹಣದಿಂದ ಅದೆಷ್ಟನ್ನು ಸಂಪಾದಿಸಬಲ್ಲ ? ಅದೆಷ್ಟು ಸುಖ ಪಡಬಲ್ಲ ?

ಹೊಸ ನುಡಿಯ ಹೆಮ್ಮರದ ಬೇರುಗಳು ಮಣ್ಣಲ್ಲಿ ಮುಚ್ಚಿದ್ದವು. ಅಷ್ಟೆ ಅಲ್ಲ ಹುಳ ಹಿಡಿದಿದ್ದವು. ಮರ ಮುಗುಳೊಡೆವುದು ಒಂದೆಡೆಗಿರಲಿ ಬಾಡ ತೊಡಗಿತ್ತು. ಆ ಸಮಯದಲ್ಲಿ ಸ್ವಾಮಿಗಳವರು ಪಿತ್ರಾರ್ಜಿತ ಆಸ್ತಿಯನ್ನು ಜೀರ್ಣೋದ್ಧಾರ ಮಾಡಿದರು. ಬೇರಿಗೆ ಬಿದ್ದ ಹುಳಗಳನ್ನು ಬಿಡಕಿ ತೆಗೆದು ಹಾಕಿದರು. ಅಲ್ಲಿಂದೀಚೆಗೆ ಕನ್ನಡ ನುಡಿಗಿಡ ಚಿಗುರ ತೊಡಗಿತು. ತನ್ನದೇ ಆದ ಕುಸುಮಗಳು ಅರಳಿದವು. ಫಲಭರಿತ ವಾಯಿತು. ರಸಭರಿತವಾಯಿತು.

ವಚನ ವಾಙ್ಮಯವನ್ನು ಮೊದಲು ಸ್ವಾಮಿಗಳವರು ಸಂಗ್ರಹಿಸಿ ಸಂರಕ್ಷಿಸದಿದ್ದರೆ ಅದರ ಪ್ರಭಾವದಿಂದ ಇದೀಗ ಬೆಳೆದ ಕನ್ನಡ ರಸವತ್ತಾದ ರಹಸ್ಯ ಪೂರ್ಣವಾದ ಸಾಹಿತ್ಯ ಕನಸಿನ ಮಾತಾಗುತ್ತಿತ್ತು. ಸ್ವಂತದ ಮನೆಯಿಲ್ಲದಂತಾಗುತ್ತಿತ್ತು.

ಸ್ವಾಮಿಗಳವರು ಎಲ್ಲೆಲ್ಲಿಯೊ ಸುತ್ತಿ ತಾಳೆಗರಿಗಳನ್ನು ಶಿವಯೋಗ ಮಂದಿರದಲ್ಲಿ ಸಂಗ್ರಹಿಸಿದರು. [illegible]ಗಳ ಬಾಯಿಗೆ ಬಿದ್ದು ಅಳಿವ ಸಾಹಿತ್ಯವನ್ನು ಉಳಿಸಿದರು, ಬೆಳೆಸಿದರು. ನಾಡುನುಡಿಗಳಿಗೆ ಭಾಗ್ಯ ತಂದರು.

ಸ್ವಾಮಿಗಳವರು ಸ್ವಂತ ರಚಿಸಿದ ಅಲ್ಪಸ್ವಲ್ಪ ಸಾಹಿತ್ಯ ಸೇವೆಗಿಂತಲು ಈ ಪ್ರಾಚೀನ ಸಾಹಿತ್ಯ ಸಂಗ್ರಹ ಸೇವೆಯು ಸ್ಮರಣೀಯವಾದುದು, ಆದರಣೀಯವಾದುದು.



# ವಿರತಿ, ವಿರತ

"ಮೋಹಕ್ಕಿಂತ ಸುಡುವ ಬೆಂಕಿಯಿಲ್ಲ. ದ್ವೇಷಕ್ಕಿಂತ ಜಂಜ್ಝದ ಅಲೆಗಿಲ್ಲ. ಭ್ರಾಂತಿಗಿಂತ ಬೇರೆ ಪಾಶವಿಲ್ಲ. ದುರಾಶೆಗಿಂತ ಬೇರೆ ಶತ್ರುವಿಲ್ಲ."

—ಬುದ್ಧದೇವ.

ಕುಮಾರ ಯೋಗಿಗಳವರ ಅಂತಃಕರಣಗಳಲ್ಲಿ ಮನಬುದ್ಧಿಗಳ ಶುದ್ಧಿ ಸಿದ್ಧಿಗಳನ್ನು ಕಂಡುದಾಯಿತು. ಇನ್ನು ಚಿತ್ತದ ಸಂವಿತ್ತಿಯನ್ನು ನೋಡೋಣ! ಅದು ಕಾಣಬೇಕಾದರೆ ವಿರತಿಯ ಮುಖದಲ್ಲಿಯೇ!

ಇತ್ತೀಚೆಗೆ ವಿರತಿಯ ವ್ಯಾಖ್ಯಾನ ಗಡುಸಾಗಿ ನಿಂತಿದೆ, ಪೆಡುಸಾಗಿ ಕುಂತಿದೆ. ವಿರತಿಯು ನಿವೃತ್ತಿಯಿಂದ ಪ್ರವೃತ್ತಿಗಿಳಿದಿದೆ. ನಿರಂಜನ ನಿರೂಪದಿಂದ ರಂಜನರೂಪಕ್ಕೆ ಮಾರುಹೋಗಿದೆ.

ವಿಚಾರಿಸಿದರೆ ವಿರತಿಯು ಸಂಸ್ಕಾರ ಜನ್ಯ ಮಾತ್ರವಲ್ಲ; ಸಂಸ್ಫುರಣ ಜನ್ಯವಾದುದು. ಆಗ ಅದು ಪರಿಪೂರ್ಣ, ಪರಮಾರ್ಥ. ವಿರತಿಗೆ ಸಂಸ್ಕಾರ - ಸಂಸ್ಫುರಣ ಎರಡೂ ಎರಡು ಮುಖಗಳು. ಒಂದು ಬಾಹ್ಯಮುಖ, ಇನ್ನೊಂದು ಅಂತರ್ಮುಖ. ಸಂಸ್ಫುರಣವಿಲ್ಲದ ಸಂಸ್ಕಾರ ಜಡ, ಜಂಜಡ, ನೀರಸ.

ವಿಚಾರ – ವಿವೇಕ ಹೀನವಾದುದು ವಿರತಿಯಲ್ಲ. ವಿರತಿಗೆ ವಿಜ್ಞಾನದ ಕಣ್ಣು ಅತ್ಯಗತ್ಯ ವಿಜ್ಞಾನವಿಲ್ಲದ ವಿರಕ್ತಿಯಿಂದ ಪೂರ್ಣ ಮುಕ್ತಿದೊರೆಯದು, ಪ್ರಾರಬ್ಧ ದುಃಖ ಬಿಡದು. ಅಲ್ಲದೆ ಅದು ಜಗತ್ಕಲ್ಯಾಣ ಸಾಧನವಾಗದು. ತನ್ನ ಕಲ್ಯಾಣವೇ ಇಲ್ಲದ ಮೇಲೆ ಜಗತ್ತಿನ ಕಲ್ಯಾಣವೆಲ್ಲಿ?

ಹೆಣ್ಣು ಒಂದರಲ್ಲಿ ರತಿಯಿಲ್ಲದಿರುವುದು ವಿರತಿಯ ಸಾಕಲ್ಯಲಕ್ಷಣವಲ್ಲ. ವಿಷಯ ಹೊನ್ನು ಹೆಣ್ಣು ಮಣ್ಣು ಎಂದು ಮೂರು ವಿಧ. ರೂಪು ರಸ ಗಂಧ ಶಬ್ದ ಸ್ಪರ್ಶ ಎಂದು ಐದು ಬಗೆ. ಮೊದಲಿನ ಮೂರರಲ್ಲಿ ಮಧ್ಯದ ಒಂದನ್ನು ಬಿಟ್ಟರೆ ಅದು ಹೇಗೆ ವಿರತಿ? ಅದು ಮನಸ್ಸಿಲ್ಲದ ಮನಸ್ಸಿನಿಂದ ನಿರ್ಬಂಧ

ಬಂಧಿತರಾಗಿ ಬಿಟ್ಟಲ್ಲಿ ಅದು ಮತ್ತೂ ವಿರತಿಯ ಲಕ್ಷಣವಲ್ಲ. ಎಲ್ಲ ವಿಷಯಗಳಲ್ಲಿಯೂ ವಿರತಿಭಾವ ಆವಿರ್ಭವಿಸಬೇಕು. ಕಲ್ಲಿನಲ್ಲಿರುವ ನಿರಾಶಕತೆ ಕನಕದಲ್ಲಿ ಬರಬೇಕು. ಹರನಲ್ಲಿರುವ ಪೃಷ್ಟಿಭಾವಗಳು ಹೆಣ್ಣಿನಲ್ಲಿ ಬೆಳೆಯಬೇಕು. ಮಣ್ಣಿನಲ್ಲಿರುವ ನಿರ್ಮಮತೆ ಪಂಚವಿಷಯಗಳಲ್ಲಿ ಪ್ರಾದುರ್ಭವಿಸಬೇಕು.

ಹೊಟ್ಟೆಯ ಪಾಡಿಗೆ ಕಾಷಾಯವೇಷ ಹೊದ್ದರೆ ವಿರತಿಯಲ್ಲ. ಹೊಟ್ಟೆ ಬಟ್ಟೆಗಳ ಆಸೆಗೆ–ಆಕಾಂಕ್ಷೆಗೆ ಇಡೀ ಜಗತ್ತೆ ಸಿಲುಕಿದೆ. ವಿರತನು ಈ ಪಾಲೆಯಲ್ಲಿ ಬಂದರೆ ವಿರತಿಯ ವಿಶೇಷವೇನು? ವಿಶೇಷ ರತಿಯ ವಿಶೇಷವೇನು? ಹಾಗಾದರೆ ಶಾಂತಿಗೆ ಸ್ಥಾನವೆಲ್ಲಿ?

"ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಸ್ಪೃಹಃ |
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ||

ಇದನ್ನು ಚನ್ನಾಗಿ ಅರಿಯಬೇಕು. ಶಾಂತಿ ನಿಲಯವಾದ ನಿಸ್ಪೃಹ ನಿರ್ಮಮ ನಿರಹಂಕಾರಗಳನು ಅಳವಡಿಸಿಕೊಳ್ಳದೆ ವಿರತಿಯಾಗಲಾರದು. ನಿರಾಶೆ ನಿರಹಂಕಾರಗಳು, ಆದರ್ಶಜೀವನದ ವಿರತಿಜೀವನದ ಅಡಿಗಲ್ಲುಗಳು.

ಮನುಷ್ಯನು ಯಾವ ಅಧಿಕಾರಕ್ಕೆ ಬರಬೇಕಾದರು ಒಂದು ಅರ್ಹತೆ ಬೇಕು. ಅರ್ಹತೆಯಿಲ್ಲದ ಅಧಿಕಾರದಿಂದ ಏನೂ ಫಲಿತಾಂಶವಿಲ್ಲ, ತಥ್ಯಾಂಶವಿಲ್ಲ. ಅಭ್ಯಾಸಮಾಡಿಯು ಅರ್ಹತೆಯನ್ನು ಪಡೆಯದ ಮೇಲೆ ಆ ಅಧಿಕಾರದ ಆಸೆಯೇಕೆ? ಆ ಮೋಹವೇಕೆ?

ವಿರತಿಗು ಒಂದು ಗುರಿಯಿರಬೇಕು, ಇದ. ತನ್ನ ಸ್ವಾರ್ಥತ್ಯಾಗ ಮಾತ್ರವೆ ವಿರತಿಯ ಗುರಿಯಲ್ಲ. ಸ್ವಾರ್ಥಸುಖಗಳ ತ್ಯಾಗದೊಡನೆ ಪರಹಿತ ಪರಾಯಣರಾಗುವುದೆ ಚರಮ ಗುರಿ, ಪರಮ ಆದರ್ಶ. ಲೋಕಕಲ್ಯಾಣ ಸಾಧಿಸಲು ವಿರತಿಮುಖನಾಗಬೇಕು. ತಾನು ಸಂಪಾದಿಸಿದ – ಸಂಪಾದಿಸುವ ಮಂಗಳವನ್ನೆಲ್ಲ ಜೀವಲೋಕಕ್ಕೆ ಧಾರೆಯೆರೆಯಬೇಕು. ಯಾರಲ್ಲಿ ದೋಷವಿದ್ದರು ದಾರಿದ್ರ್ಯವಿದ್ದರು ಅದೆಲ್ಲ ಪರಿಹಾರವಾಗಲಿ, ಯಾರಲ್ಲಿ ಅಜ್ಞಾನ–ಅಸೂಯೆಗಳಿದ್ದರು ಅವೆಲ್ಲ ಅಳಿದುಹೋಗಲಿ ಎಂದು ಹಾರೈಸಬೇಕು; ಪೂರೈಸ

ಬೇಕು. ಆಗ ವಿರತಿ ಸುಗತಿಗೆ ಸಾಧನವಾಗುತ್ತದೆ, ಸುಸ್ಥಿತಿಗೆ ಸಾಗರವಾಗುತ್ತದೆ.

ಕುಮಾರ ಯೋಗಿಗಳವರ ವಿರತಿಯು ಮೊದಲು ಸಂಸ್ಫುರಣ ಜನ್ಯವಾಯಿತು. ಮಠಾಧಿಕಾರಕ್ಕಾಗಿ ಆಶೆಬಿದ್ದು ಅವರು ವಿರತಿಯನ್ನು ತಾಳಲಿಲ್ಲ. ಅವರ ವಿರತಿಗೆ ಆತ್ಮ ಸಂಸ್ಕಾರದ ಒಲವಿತ್ತು. ಒಹಿರಂಗ ಕಾರಣದ ಕಿಡಿಯೊಂದು ಅವರ ಬೆಂಬಲವಾಗಿ ಭುಗಿಲೆಂದಿತು.

ಸ್ವಾಮಿಗಳವರು ಉಪಾಧ್ಯಾಯರಾಗಿದ್ದಾಗ ಒಂದು ದಿನ ಸಂಜೆ ಗಾಳಿಗೆಂದು ಸ್ನೇಹಿತರೊಬ್ಬರೊಡನೆ ಹೊರಟಿದ್ದಾರೆ. ಜೊತೆಯವರೊಡನೆ ವೇದಾಂತ ವಿಚಾರದಲ್ಲಿ ತಲ್ಲೀನರಾಗಿದ್ದಾರೆ. ಆ ವೇಳೆಯಲ್ಲಿ ಒಬ್ಬ ನವ ಯವ್ವನದ ಹೆಣ್ಣುಮಗಳೊಬ್ಬಳು ನೀರಿಗೆಂದು ಬರೀಕೊಡ ತೆಗೆದುಕೊಂಡು ಅವರಿಬ್ಬರ ಮಧ್ಯದಲ್ಲಿ ಮೈ ಸೋಂಕಿಸುತ್ತ ದಿಟ್ಟತನದಿಂದ ಹಾಯ್ದು ಹೋಗುವಳು. ಅದನ್ನು ಕಂಡು ಸ್ವಾಮಿಗಳವರ ಮನಸ್ಸು ಮಾರ್ಪಟ್ಟಿತು. ಆ ಕ್ಷಣವೆ ಸ್ನೇಹಿತರಿಗೆ ಹೀಗೆಂದು ಹೇಳುತ್ತಾರೆ. ನೋಡಿದಿರಾ! ಹೆಣ್ಣಿನ ಹೆಮ್ಮೆಯನ್ನು; ಮಾಯದ ಮದವನ್ನು. ವೇದಾಂತದ ಹಾಲಿನಲ್ಲಿ ಹುಳಿಹಿಂಡಿದಂತಾಯಿತು. ಬ್ರಹ್ಮವ ಬಿಡಿಸಿ ಭೌತಿಕ ಭೂತವ ಹಿಡಿಸಿತು. ಇದೇ ಅಲ್ಲವೆ ಅಧ್ಯಾಸಕಾರಣ. ಒಂದು ಕ್ಷಣದಲ್ಲಿಯೆ ಸತ್ಯವ ಮರೆಯಿಸಿ ಮಿಥ್ಯದತ್ತ ಹೊರಳಿಸಿತು ಮಾಯೆ. ಇನ್ನು ಯಾವಾಗಲು ಇದರ ಸಂಗದಲ್ಲಿದ್ದರೆ ಗತಿಯೇನು? ಅವಳು ಹೊತ್ತೊಯ್ದ ಕೊಡ ಬರಿದಾಗಿ ಇರುವಂತೆ ನಾವು ಹೊತ್ತ ಈ ಘಟ ಬರಿದಾಗಿಯೆ ಹೋಗಬೇಕಾಗುತ್ತದೆ. ಇನ್ನು ಬ್ರಹ್ಮಾನಂದ ಜಲ ತುಂಬುವುದೆಲ್ಲಿ? ಹೆಣ್ಣಿನ ಮಾಯೆಗೆ ಸಿಕ್ಕು ತುಂಬಿದರೆ ಒಡಕು ಕೊಡದಲ್ಲಿ ಜಲವ ತುಂಬಿದಂತಾಗುತ್ತದೆ. ಅದರಿಂದ ನಾನು ನಿಶ್ಚಯವಾಗಿಯು ಲಗ್ನವಾಗಲಾರೆನು. ಸಂಸಾರಮಗ್ನನಾಗಲಾರೆನು ಎಂದು ಆಗಳೆ ಸ್ನೇಹಿತರಿಗೆ ತಮ್ಮ ಧೃಢಪ್ರತಿಜ್ಞೆಯನ್ನು ತಿಳಿಸಿಯೆ ಬಿಟ್ಟರು. ಬುದ್ಧದೇವನ ವಿರತಿಗೆ ಮೂರು ದೃಶ್ಯಗಳು ಕಾರಣವಾದರೆ ಸ್ವಾಮಿಗಳವರ ವಿರತಿಗೆ ಒಂದೇ ಒಂದು ದೃಶ್ಯ ಕಾರಣವಾಯಿತು. ಸ್ವಾಮಿಗಳವರ ಹೃದಯ ಅಷ್ಟು ಹದವಾಗಿತ್ತು; ಹಣ್ಣಾಗಿತ್ತು. ಅವರ ಅಂತರಂಗದ ಆತ್ಮಸ್ಫುರಣ ಅವರ ವಿರತಿಗೆ ಮೂಲಕಾರಣವಾಯಿತು.

ಸ್ವಾಮಿಗಳವರಲ್ಲಿ ಮತಿಯಿಲ್ಲದೆ ವಿರತಿಯಿರಲಿಲ್ಲ. ಅವರು ಮತಿವಂತರಾಗಿದ್ದರೆಂಬುದಕ್ಕೆ 'ಬುದ್ಧಿಶಕ್ತಿ' ಪ್ರಕರಣವೆ ನಿದರ್ಶನ. ಅವರು ಜ್ಞಾನಿಗಳಾಗಿ ಬುದ್ಧಿಶಾಲಿಗಳಾಗಿ ವಿರತರಾಗಿದ್ದರು. ಅವರಲ್ಲಿ ಜ್ಞಾನ ಸಂಪತ್ತಿಗೆ ಕೊರತೆಯಿರಲಿಲ್ಲ.

ಸ್ವಾಮಿಗಳವರಿಗೆ ಯಾವ ವಿಷಯದಲ್ಲಿಯೂ ಆಸೆಯಿರಲಿಲ್ಲ. ಅವರು ಹೆಣ್ಣೊಂದನ್ನೆ ಬಿಟ್ಟು ಇನ್ನೊಂದನ್ನು ಆಶಿಸಿದವರಲ್ಲ ಎಲ್ಲದರಲ್ಲಿಯೂ ನಿರಾಶೆಯಿತ್ತು; ನಿರ್ಮೋಹವಿತ್ತು. ಮಮತೆ ಚಿಂತೆ ವಾಂಛೆ ಇಚ್ಛೆ ಕಾಮ ಪ್ರೇಮ ಯಾವುದು ಅವರಲ್ಲಿರಲಿಲ್ಲ. ಸ್ಥಿರಚಿತ್ತರಾಗಿದ್ದರು. ಹರಚಿತ್ತರಾಗಿದ್ದರು.

ಒಂದು ಸಲ ಇನ್ನೊಂದು ಊರಿಗೆ ಪ್ರಯಾಣವಾಗಿದ್ದರು. ಜೊತೆಗೆ ಬೊಮ್ಮನಹಳ್ಳಿ ಶ್ರೀಗಳವರಿದ್ದರು. ತುಸು ದಾರಿ ಮುನ್ನಡೆದರು. ನಡುದಾರಿಯಲ್ಲಿ ಒಂದು ಉಂಗುರಬಿದ್ದಿತ್ತು. ಅದು ಸ್ವಾಮಿಗಳವರ ಕಣ್ಣಿಗೆ ಬಿತ್ತು. ಅದನ್ನು ತಮ್ಮೊಡನೆ ಬರುತ್ತಿದ್ದ ಶ್ರೀಗಳವರಿಗೆ ತೋರಿಸಿದರು. ಅವರು ಆಗಳೆ ಅದನ್ನು ತೆಗೆದುಕೊಳ್ಳಲು ಬಾಗಿ ಕೈನೀಡಿದರು. ಅದನ್ನು ನೋಡಿ ಸ್ವಾಮಿಗಳವರು ಬೇಡಿ, ತೆಗೆದುಕೊಳ್ಳಬೇಡಿ. ಯಾರದೋ ಸೊತ್ತಿಗೆ ಆಶೆಯೇಕೆ ? ಕಾಯ ಕಷ್ಟವಿಲ್ಲದೆ ದಾರಿಯಲ್ಲಿ ಬಿದ್ದ ಪರರ ಸೊತ್ತನ್ನು ತೆಗೆದುಕೊಳ್ಳುವುದು ನ್ಯಾಯವಲ್ಲ. ಅದೊಂದು ಕಳ್ಳತನವಾಗಿ ಪರಿಣಮಿಸುತ್ತದೆ. ಕಳೆದುಕೊಂಡವನು ಮರಳಿ ಹುಡುಕಿಕೊಂಡು ಬಂದರೆ ಅವನಿಗೆ ಸಿಕ್ಕದಂತಾಗಿ ಅವನ ಒಡವೆಯು ಕಳ್ಳತನಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಹೇಳಿ ಮುಂದುವರಿದು ಹೋಗುವರು. ಇದು ಅಲ್ಲವೆ ನಿಜವಾದ ನಿರಾಸೆ. 'ಒದಗಿ ಬಂದರೆ ಒಲ್ಲೆನೆಂಬ ಚಾಗಿಯಾರೊ ?' ಎಂದು ಕೇಳಿದ ಬಸವಣ್ಣನಿಗೆ ಕುಮಾರಯೋಗಿಗಳೆ ಉತ್ತಮ ನಿದರ್ಶನರಾಗಿದ್ದಾರೆ.

ಸ್ವಾಮಿಗಳವರಲ್ಲಿ ವಿರಕ್ತಾಶ್ರಮ ಸಂಸ್ಕಾರಕ್ಕೆ ತಕ್ಕ ಅರ್ಹತೆಯಿತ್ತು; ಆದರ್ಶತೆಯಿತ್ತು. ಅವರು ಮೊದಲೆ ಆತ್ಮ ಸಾಸ್ಫುರಣದಿಂದ ತಾವೆ ವಿರಕ್ತರಾಗಿದ್ದರು. ಅವರು ಮಠಾಧಿಕಾರಕ್ಕಾಗಿಯೆ ಸಂಸಾರಕ್ಕೆ ನೀರು ಬಿಟ್ಟು ಬಾಯ್ನೀರು ಬಿಡುತ್ತ ಕುಳಿತಿದ್ದವರಲ್ಲ. ಮಠವನ್ನು ಆಶಿಸಿ ಮಠವನ್ನು ಪಡೆದವರಲ್ಲ. ಘಟಪೋಷಣೆಗೆಂದು ಮಠಕ್ಕೆ ತಗಲು ಬಿದ್ದವರಲ್ಲ. ಅದ

ರಿಂದಲೆ ತಮ್ಮ ಅರ್ಹತೆಯಿಂದ ಪಡೆದ ಮಠವನ್ನು ಸಹ ಅವರು ಆಶ್ರಯಿಸಿ ಕುಳ್ಳಿರಲಿಲ್ಲ. ಮಠದಿಂದ ಅವರು ಬದುಕಲಿಲ್ಲ. ಅವರಿಂದ ಮಠ ಬದುಕಿತು, ಬೆಳಕು ಕಂಡಿತು. ಇದೆ ಅವರಲ್ಲಿ ಇದ್ದ ಅರ್ಹತೆ, ಆದರ್ಶತೆ!

ಜ್ಞಾನ ವೈರಾಗ್ಯೋಪರತಿಗಳೆಂಬಿವನೆ ಸಂ-
ಧಾನಿಸುತ್ತಿರೆ ಭೋಗ ಮೋಕ್ಷವಾಂಛಿತರು || ೩ ||

.... ......... . ..... .... . ..... ... ...

ಇವರೊಳರುವಿಲ್ಲದುಳಿದೆರಡು ಕೂಡಿದ ಮುಕ್ತ
ಸವನಿಸದುತ್ತರಲೋಕ ಗತಿಯೆಹದು |
ಪವಣದರಿವಿರ್ದು ವಿಕ್ತೆರಡಿಲ್ಲದಿರೆ ಮೋಕ್ಷ
ಸವನಿಪುದಾರಬ್ಧ ದುಃಖವನು ಬಿಡದು || ೪ ||

ವಿರತಿಗೆಲ್ಲವನು ತೃಣವೆಂಬುದುಪರತಿಗೆ
ಪರವಶನಂತಿಹುದಮಳ ಜ್ಞಾನಕ್ಕೆ |
ಗುರುಶಂಭುಲಿಂಗವೆ ತಾನೆಂಬ ದೃಢಬುದ್ಧಿ
ಬರಿರವಭಿಮಾನ ದಂದವೋಳಹುದವಧಿ || ೫ ||

ಈ ನಿಜಗುಣರ ನುಡಿಯೆ ಸ್ವಾಮಿಗಳವರ ನಡೆಯಾಗಿತ್ತು. ಈ ಉಕ್ತಿಯೆ ಸ್ವಾಮಿಗಳವರೆಂಬ ವ್ಯಕ್ತಿಯಾಗಿ ನಿಂತಿತ್ತು. ಈ ಪದ್ಯದಲ್ಲಿ ಹೇಳಿದ ಮೂರು ಗುಣಗಳು ಅವರಲ್ಲಿ ಅಖಂಡವಾಗಿ ನೆಲೆನಿಂತಿದ್ದವು, ಕಳ ಗೊಳಿಸಿದ್ದವು.

ನೈಜವಾದ ಸಾಜವಾದ ವಿರತಿಯಿಂದ ಸ್ವಾಮಿಗಳವರು ನಿಜವಾಗಿಯು ವಿರತರಾಗಿದ್ದರು. ಲೋಕ ಕಲ್ಯಾಣಕ್ಕೆ ತಮ್ಮ ವಿರತಿಯನ್ನು ಬಳಸಿದರು, ಬೆಳಸಿದರು. ವಿಶಿಷ್ಟ ಆದರ್ಶಕ್ಕೆ ತಮ್ಮ ವಿರತಿಯನ್ನು ಮುಡಿಪಿಟ್ಟರು. ಅವರು ವಿರತಿಯ ನಿಜಗತಿಯನ್ನು ಗುರಿಯನ್ನು ತಿಳಿದು – ತಳಿದು ವೀರ ವಿರತರಾದರು. ನಿಷ್ಕಲಂಕ ವಿರತರಾದರು ಪರಿಪೂರ್ಣ ವಿರತರಾದರು.

ಜಗವೆಲ್ಲ ನಗುತಿರಲಿ ಜಗದಳವು ನನಗಿರಲಿ
ಜಗವತ್ತು ನಾನುಳಿಯು ಬಹುದೇ ?

— -ಕೋರಿಕೆ

ಈ ಕೋರಿಕೆಯೆ ಸ್ವಾಮಿಗಳವರ ಕೋರಿಕೆಯಾಗಿತ್ತು. ಅವರ ವಿರತಿಗೆ ಇದು ಪಲ್ಲವಿಯಾಗಿತ್ತು. ಆ ವೀರ ವಿರತನ ಜೀವನವಾಗಿತ್ತು.



# ಸಮತಾಭಾವ

ಭಾರತ ವರ್ಷವು ಮತ ಮತಾಂತರಗಳ ಗೂಡು. ಮಾನವರಲ್ಲಿಯೆ ಅನೇಕ ಮತಗಳಿವೆ. ಅಂತೆಯೆ ಕನ್ನಡ ನಾಡಿನಲ್ಲಿಯೂ ಕಡೆಯಿಲ್ಲದಷ್ಟಿವೆ. ಈ ಎಲ್ಲ ಮತಗಳ ವಿಷಯದಲ್ಲಿ ಸ್ವಾಮಿಗಳವರಿಗೆ ಯಾವ ವಿಧವಾದ ವೈರ ಭಾವವಿರಲಿಲ್ಲ. ಸೂತ್ರಪ್ರಾಯವಾದ ಸಾಮ್ಯಭಾವವು ಅವರಲ್ಲಿ ಮೊಗ್ಗಿನಲ್ಲಿನ ಕಂಪಿನಂತೆ ಗರ್ಭೀಕೃತವಾಗಿತ್ತು.

ಪರಮತ ಸಹಿಷ್ಣುತೆಯಲ್ಲಿ ಪೂಜ್ಯ ಸ್ವಾಮಿಗಳವರು ರಾಮಕೃಷ್ಣ ಪರಮಹಂಸರಂತೆ. ಹೆಚ್ಚಾಗಿ ಮಾತಾಡಿ ಮಾಡಿ ವ್ಯಕ್ತಪಡಿಸದಿದ್ದರು ಮೌನ ಭಾವದಲ್ಲಿ ಮೈತ್ರಿಸ್ವಭಾವ ಹೊಮ್ಮಿ ತೋರುತ್ತಿತ್ತು. ಮತ ಭಿನ್ನವಾದರು ಹೃದಯವೊಂದು, ಹೃದ್ಧ್ಯೇಯವೊಂದು. ಅದಕ್ಕಾಗಿ ಮೇಲು ಕೀಳಿನ ಕಚ್ಚಾಟ ಬೇಡ. ನಾವೊಬ್ಬರನ್ನು ಆಡುವುದು ಬೇಡ. ನಮಗೆ ಯಾರಾದರಾಗಲಿ ಕೀಳೆಂದರೆ ಸಹಿಸಲಾರೆವು. ನಮಗು ನಿಮ್ಮಂತೆ ಆತ್ಮವಿದೆ, ಅಧ್ಯಾತ್ಮವಿದೆ ಎಂಬುದನ್ನು ತೋರಿಸಬಲ್ಲೆವು - ಎಂಬ ಸದಭಿಮಾನದ ತೇಜವಿತ್ತು. ತಾವಾಗಿ ಇತರ ಮತಗಳ ವಿಷಯದಲ್ಲಿ ಎಂದು ಯಾರಲ್ಲಿಯೂ ಹೀಯಾಳಿಸಿ ಮಾತಾಡಿದವರಲ್ಲ, ಮಾತಾಡಲಿಲ್ಲ. ಶಿವಾಚಾರ ತತ್ವವನ್ನು ತುಳಿದವರನ್ನು ಕಂಡರೆ ಅವರು ಸುಮ್ಮನಿರುತ್ತಿರಲಿಲ್ಲ. ಪರಮತ ಅಪಚಾರಕ್ಕೆ ಕೈಹಾಕಿದವರಲ್ಲ. ಸ್ವಮತ ಅವಜಯಕ್ಕೆ ಕೈಕಟ್ಟಿಕೊಂಡು ಕೂತವರಲ್ಲ. ಅವರ ವಿಷಯದಲ್ಲಿ ಅವಮಾನವೆ ಅಪಮೃತ್ಯು; ಅಭಿಮಾನವೆ ಅಭಿಜ್ಞಾನವಾಗಿದ್ದವು.

ಪರಸ್ಪರ ಸೌಹಾರ್ದತೆ ಬೇಕು. ಸಮಾನತೆ ಬೇಕು. ದಾರಿಯಾವುದಾದರಿರಲಿ ಎಲ್ಲರು ಹೊರಟಿರುವುದು ಮಾತ್ರ ಒಂದೆಡೆಗೆ, ಒಂದಾನಂದಕ್ಕೆ. ಅದಕ್ಕಾಗಿ ಅಲ್ಲದ ಸಲ್ಲದ ಕಲಹವೇಕೆ? ಕುಹಕವೇಕೆ? ಎಂದು ಉಪದೇಶಿಸುತ್ತಿದ್ದರು.

ಇತ್ತೀಚಿಗೆ ಸ್ವಾತಂತ್ರ್ಯಪ್ರಿಯರು ಸ್ವೈರಪ್ರಿಯರು ಪಂಥಗಳನ್ನೆಲ್ಲ ಮುರಿದಿಕ್ಕಿ ಏಕಪಂಥವಾಗಹೊರಟಿರುವುದನ್ನು ಕೇಳಿ ಕಂಡು ಸ್ವಾಮಿ

ಗಳವರು ಮನಸ್ಸೊಂದಿದ್ದರು. ಏಕಪಂಥವಾಗುವುದು ನಮಗೂ ಇಷ್ಟವೆ! ಆದರೆ ಆ ಪಂಥ ಬೇರೆ. ಇವರು ಮಾಡಹೊರಟಿರುವ ಹೊರಗಿನ ಅನ್ನಪಾನಗಳ ಪಂಥವಲ್ಲ. ಇದು ಎಂದಿಗೂ ಏಕವಾಗುವಂತಹದಲ್ಲ. ಆಗುವುದಿಲ್ಲ. ಅವರವರ ಅನ್ನ ಅವರವರದು. ಅವರವರ ಪುಣ್ಯ ಅವರವರದು. ಒಂದೇ ಹೊಟ್ಟೆಯಲ್ಲಿ ಹುಟ್ಟಿ ಒಂದೇ ಮನೆಯಲ್ಲಿ ಬೆಳೆದವರೆ ಬೇರೆ ಬೇರೆ ಅನ್ನವನ್ನು ಊಟಮಾಡುತ್ತಾರೆ. ಇನ್ನು ಇತರರ ಮಾತೇನು? ಕೂಡಿ ತಿನ್ನುವುದು ಕುಡಿಯುವುದು ಅನಾರೋಗ್ಯಕ್ಕೆ ಹಾದಿ, ಆತ್ಮವಂಚನೆಗೆ ಹೆದ್ದಾರಿ. ಸಿಕ್ಕಾಗ ಸಿಕ್ಕಲ್ಲಿ ತಿನ್ನುವುದು ಪಶುಸಮಾನವಾದ ಪ್ರವೃತ್ತಿ. ಅದರಿಂದ ಸಮತಾಭಾವ ಸಿದ್ಧಿಸುವುದಿಲ್ಲ. ಒಂದಾಗುವ ಪಂಥ ಬೇರೆ. ಅದು ಅಂತರಂಗಿಕವಾದುದು. 'ದೇವನೊಬ್ಬ ನಾಮ ಹಲವು' ಎಂಬುದೇ ಬೇಕಾದ ಏಕಪಂಥ. ಆತ್ಮನೊಬ್ಬ ಅಂಗಗಳು ಭಿನ್ನ ಎಂದು ಭಾವಿಸಿ ಪ್ರವೃತ್ತಿಯಿಂದ ವರ್ತಿಸಬೇಕೇ ವಿನಹ ಬಾಹ್ಯಾಚಾರಗಳನ್ನು ಕೂಡಿ ಬಳಸುವದರಲ್ಲಿ ಫಲಿತಾಂಶವಿಲ್ಲ. ಎಲ್ಲರು ಕೂಡಿ ಉಂಬುವ ತಿಂಬುವ ಬಾಹ್ಯ ಪಂಥದ ಐಕ್ಯವನ್ನು ಬಲವಂತದಿಂದ ಮಾಡಿದರು ಮುಂದೆ ಅದು ಶುಚಿ ಅಶುಚಿ ಭೇದದಿಂದಲಾದರು ಬೇರಾಗಿ ನಿಲ್ಲಬಲ್ಲುದು. ಕೇವಲ ಅನ್ನಪಾನಾದಿಗಳ ಐಕ್ಯಸಾಧನೆಯಿಂದ ಮತಧರ್ಮಗಳು ಅಳಿಯುವುದರ ಜೊತೆಗೆ ಮಾನವಧರ್ಮವು ಅಳಿಯುತ್ತದೆ.

ಶುಚಿ ಅಶುಚಿ ಭೇದದಿಂದ ಬಿನ್ನಬಾವ ಹುಟ್ಟುವುದೆಂಬುದಕ್ಕೆ ಒಂದು ನಿದರ್ಶನ. ಈಗಾಗಲೆ ಕೆಳಗಿನ ಪಂಥದವರು ಮೇಲಿನ ಸಂಘದವರೆಂಬುವವರು ಇರಿಸಿದ ಹೋಟಲುಗಳಲ್ಲಿ ಅಶುಚಿಯಿದ್ದಲ್ಲಿ ಅವರು ಅಲ್ಲಿಗೆ ಹೋಗುವುದೇ ಇಲ್ಲ. ಇದಕ್ಕೇನು ಬಿಕ್ಕಟ್ಟು? ಇದಕ್ಕೇನು ಬಲವಂತಿಕೆ?

ಇದು ಸಮದರ್ಶಿತ್ವವಲ್ಲ. ಇದು ಪರಮತ ಸಹಿಷ್ಣುತೆಯಲ್ಲ. ಪರಹಿತ ದೃಷ್ಟಿಯಲ್ಲ. ಅನ್ನಪಾನಸ್ನಾನಾದಿಗಳಲ್ಲಿ ಅವರವರ ಸ್ವಾತಂತ್ರ್ಯ ಶೀಲಗಳಿರುವುದರಲ್ಲಿ ಹೆಚ್ಚು ಲೇಸಿದೆ. ಇದುವೆ ಮಾನವೀಯ ಆಚಾರ, ಆದಿ ಧರ್ಮ. ಇದು ಸ್ವಾಮಿಗಳವರ ದೃಷ್ಟಿ.

ಸ್ವಾಮಿಗಳವರಿಗೆ ಪರಮತಗಳಲ್ಲಿ ವೈರಭಾವವಿಲ್ಲದಿರುವಂತೆ ವ್ಯಕ್ತಿಗಳಲ್ಲಿಯೂ ಇರಲಿಲ್ಲ. ಮಾನವರೆಲ್ಲರು ಮಾನವತ್ವಕ್ಕೆ ಬರಬೇಕೆಂಬ ಮಹತ್ವಾಕಾಂಕ್ಷೆ ಸ್ವಾಮಿಗಳವರಲ್ಲಿತ್ತು.

ಶಿವಯೋಗ ಮಂದಿರದಲ್ಲಿರುವ ದನಕಾಯುವವರು ಸಹ ಧಾರ್ಮಿಕ ಭಾವನೆಯುಳ್ಳವರಾಗಬೇಕು. ಸ್ನೇತಿಕಾಚರಣೆಯುಳ್ಳವರಾಗಬೇಕು. ಹಾಗಾಗಿಸಿ ಅವರಿಗು ಭಸ್ಮ ರುದ್ರಾಕ್ಷಿಗಳ ಧರಿಸಲು ಅವಕಾಶ ಕಲ್ಪಿಸಬೇಕು ಎಂದು ಅಪ್ಪಣೆಕೊಡಿಸುತ್ತಿದ್ದರು. ಮಾನವರೆಲ್ಲರು ಆತ್ಮಶಕ್ತಿಯಲ್ಲಿ ಸಮಾನರಾಗಿ ಸಮಸುಖಿಗಳಾಗಿ ಇರಬೇಕೆಂಬ ಅನುಕಂಪವಿತ್ತು. ಪಶುಬಾಳ ಬದುಕುವರನ್ನು ಕಂಡು ಅನುತಾಪವಿತ್ತು.



# ದಯಾನಿಧಿ

ಕುಲಮೇವುದು ವರ್ಣಮೇವುದು ।
ಕಲಿಯೇವುದು ಕರುಣೆಯಿಲ್ಲದಾತಂಗಿಳೆಯೊಳ್ ॥
ಕಲನಾದ ಮೇವ್ವುದೇಡಂ ।
ಗೆ ಲಸದ್ದೀಪಿಕೆಯುದೇವುದೋ ಕುರುಡಂಗಂ ॥

--ನೀತಿಮಂಜರಿ.

ಸ್ವಾಮಿಗಳವರು ದಯಾಸಾಗರರು. ದೀನರು ದುಃಖಿಗಳನ್ನು ಕಂಡರೆ ಅವರ ಅಂತಃಕರಣ ದ್ರವಿಸುತ್ತಿತ್ತು. ಅವರ ಅಮೃತ ಹಸ್ತ ಅನುಕೂಲ ವಿದ್ದಷ್ಟು ಅಭಯಕೊಡುತ್ತಿತ್ತು. ಅವರನ್ನು ಅರಿಸಿ ಬಂದ ಯಾವ ಒಬ್ಬ ಸಣ್ಣ ವ್ಯಕ್ತಿಯೂ ಸಹ ನಿರಾಶಕನಾಗಿ ಹಿಂದಿರುಗುತ್ತಿದ್ದಿಲ್ಲ

ರೋಗದಿಂದ ಬಳಲುವವರನ್ನು ಕಂಡರಂತು ಅವರ ಕೋಮಲ ಕರುಳು ಕೊರೆಯುತ್ತಿತ್ತು. ಆಕ್ಷಣದಲ್ಲಿಯೆ ಆ ರೋಗಕ್ಕೆ ತಕ್ಕ ಔಷಧಿಯನ್ನು ಕೊಡುತ್ತಿದ್ದರು. ಕೊಡಿಸುತ್ತಿದ್ದರು. ಔಷಧಿಯಿಲ್ಲದಿದ್ದರೆ ಆಗಳೆ ಮಾಡಿಸಿಕೊಡಿಸುತ್ತಿದ್ದರು. ರೋಗ ಉಲ್ಬಣಕ್ಕೇರಿದ್ದರೆ ಉಪಶಾಂತಿಯಾಗುವ ವರೆಗು ತಾವು ಸ್ನಾನ ಶಿವಪೂಜೆಗಳಿಗೆ ಹೋಗುತ್ತಿರಲಿಲ್ಲ. ರೋಗಿಗಳ ಬಳಿಗೆ ಹೋಗಿ ತಾವೇ ಉಪಚರಿಸುತ್ತಿದ್ದರು. ಸರ್ವಸಾಧಾರಣ ರೋಗಿಗಳನ್ನು ಮಾತ್ರವಲ್ಲ ಯಾರೂ ಮುಟ್ಟದ ಮಹಾ ರೋಗಿಗಳನ್ನು ಸಹ ತಮ್ಮ ಹಸ್ತದಿಂದ ಮುಟ್ಟಿ ನೋಡುತ್ತಿದ್ದರು. ಉಪಚರಿಸುತ್ತಿದ್ದರು. ಉತ್ಸಾಹ ಹೇಳುತ್ತಿದ್ದರು.

ಕೇವಲ ದೀನ ದುಃಖಿತರನ್ನೆ ಅಲ್ಲ, ರೋಗಿ ರಾಗಿಗಳನ್ನೆ ಅಲ್ಲ ಅವಿದ್ಯಾವಂತರನ್ನೂ ಕಂಡು ದಯಾ ಹೃದಯಿಗಳಾಗುತ್ತಿದ್ದರು. ಅವರನ್ನು ವಿದ್ಯಾವಂತರನ್ನಾಗಿ ಮಾಡಲು ದೀರ್ಘಾಲೋಚನೆಯನ್ನು ಮಾಡುತ್ತಿದ್ದರು. ವಿದ್ಯಾರುಚಿಯನ್ನು ಅವರಿಗೆ ತಮ್ಮದೇ ಆದ ಪ್ರಯತ್ನದಿಂದ ತೋರಿಸುತ್ತಿದ್ದರು. ವಿದ್ಯಾಸಮ್ಮುಖಿರನ್ನಾಗಿ ಮಾಡುತ್ತಿದ್ದರು. ಸಾಧ್ಯವಿದ್ದಷ್ಟು ಸಹಾಯ ನೀಡುತ್ತಿದ್ದರು.

ಹೆಚ್ಚಿನ ವಿದ್ಯಾ ಕಲಾಭ್ಯಾಸಿಗಳಲ್ಲಿ ಮತ್ತೂ ಅವರ ಹೃದಯ ಕರಗಿ ಉಕ್ಕುತ್ತಿತ್ತು. ಅವರ ಮುನ್ನಡೆಗೆ ಆವಶ್ಯಕವಾದ ಸಹಾಯ ಸೌಕರ್ಯಗಳನ್ನು ನೀಡಿ ಮುಂಗೈಮೇಲಿರಿಸಿಕೊಂಡು ಅವರನ್ನು ಮುನ್ನಡೆಸುತ್ತಿದ್ದರು. ಅವರ ವಿಷಯದಲ್ಲಿ ಮೀರಿದ ಅಭಿಮಾನಾದರಗಳನ್ನು ತೋರುತ್ತಿದ್ದರು. ಅನ್ಯರಿಗೆ ಆದರ್ಶವಾಗಿ ಬರುಹುತ್ತಿದ್ದರು. ಅವರಂತೆ ನಿವೇಕೆ ಮುಂದುವರಿಯಬಾರದು. ನಿಮಗೆ ದೇವರು ಆ ಶಕ್ತಿಯನ್ನು ಯುಕ್ತಿಯನ್ನು ಕೊಟ್ಟಿಲ್ಲವೇನು ಎಂದು ಕರುಣಾರ್ದ್ರ ದೃಷ್ಟಿಯಿಂದ ಕೇಳುತ್ತಿದ್ದರು.

ಮನುಷ್ಯಮಾತ್ರರಲ್ಲಯೆ ಅಲ್ಲ ಮೂಕಪ್ರಾಣಿಗಳಲ್ಲಿಯೂ ಸ್ವಾಮಿಗಳವರಿಗೆ ಅಪಾರ ದಯೆಯಿತ್ತು. ಮಾನವ ಜೀವನಾಧಾರವಾದುದು ಗೋವು. ಅದರ ವಧೆಯು ಆಗ ಎಲ್ಲೆಲ್ಲಿಯೂ ಹಬ್ಬಿತ್ತು, ಹೆಚ್ಚಿತ್ತು. ಮಾನವ ರಕ್ಷಣೆಗೆ ಉಪಯೋಗವಾದ ಉಣ್ಣೆಯನ್ನೀಯುವ ಕುರಿಗಳನ್ನು ದೇವರ ಹೆಸರಿನಲ್ಲಿ ಕತ್ತರಿಸುವ ಕಟುಕತನಕ್ಕೆ ಕೊನೆ ಮೊದಲರಲಿಲ್ಲ. ಇದನ್ನೆಲ್ಲ ಕೇಳಿ ಸ್ವಾಮಿಗಳವರು ನೊಂದು ಜೀವದಯಾ ಸಂಘಕ್ಕೆ ಹೆಚ್ಚಿನ ಸಹಾಯ ಸಂಪತ್ತಿಗಳನ್ನು ಒದಗಿಸುತ್ತಿದ್ದರು. ಅವರಿಗೆ ಬೋಧೆಯ ಕ್ರಮವನ್ನು ಹೇಳಿಕೊಟ್ಟು ನಡಿಸುತ್ತಿದ್ದರು.

ಜಾತ್ರೆಗಳಲ್ಲಿ ಜರಗುವ ಜೀವವಧೆಯನ್ನು ನಿಲ್ಲಿಸಲು ವಿಶ್ವಪ್ರಯತ್ನ ಮಾಡಿದರು ಸ್ವಾಮಿಗಳವರು. ಅಲ್ಲಲ್ಲಿ ಜರಗುವ ಜಾತ್ರೆಗಳಿಗೆ ಜೀವದಯಾ ಸಂಘದವರನ್ನು ಕರೆಯಿಸಿ ಅವರಿಂದಲು ಅಹಿಂಸಾ ಪ್ರಚಾರ ಮಾಡಿಸುತ್ತಿದ್ದರು.

'ಶ್ರೀಗಳವರ ಅಗಲಿಕೆಯಿಂದ ಮೂಕ ಪ್ರಾಣಿಗಳು ತಾಯಿಯನ್ನು ಕಳೆದುಕೊಂಡ ಕರುವಿನಂತೆ ವ್ಯಸನ ಪಡುತ್ತಿರುವವು' ಎಂದು ದಾವಣಗೆರೆ ಪ್ರಾಣಿದಯಾ ಜ್ಞಾನಪ್ರಸಾರಕ ಸಂಘದ ಸಹಾಯಕ ಕಾರ್ಯದರ್ಶಿಗಳಾದ ಆನೆಕೊಂಡದ ಶ್ರೀ ಮುಪ್ಪಣ್ಣನವರು ಮುಕ್ತಕಂಠದಿಂದ ಹೊಗಳಿರುವದೆ ಸಾಕು. ಸ್ವಾಮಿಗಳವರ ಪ್ರಾಣಿದಯಾಮಮತೆಯ ಮಹತ್ವಕ್ಕೆ ಮತ್ತೊಂದು ಮಾತು ಅನವಶ್ಯಕ.

ಇಷ್ಟೆ ಅಲ್ಲದೆ ಸ್ವಾಮಿಗಳವರಿಗೆ ಗಿಡಬಳ್ಳಿಗಳ ಮೇಲೆಯೂ ಅತ್ಯಂತ ಅಂತಃಕರಣವಿತ್ತು. ಅದರಲ್ಲಿಯೂ ಹೂವಿನ ಗಿಡಗಳನ್ನು ಕಂಡರೆ ಅವರ

ಹೃದಯ ಅರಳುತ್ತಿತ್ತು. ಬೆಟ್ಟದಾವರೆಯ ಹೂವುಗಳಿದ್ದರೆ ಅವರ ಪೂಜೆಯ ವೈಭವವೆ ವೈಭವ.

ಒಂದು ದಿನ ಮುಚ್ಚಂಜೆಯ ಮುಂದೆ ಮೇಲ್ಮಠದ ಮುಂಬದಿಯ ಹೂದೋಟದ ಒಂದು ಗಿಡದ ಬುಡದಲ್ಲಿ ಕುಳಿತು ಓದುತ್ತಿದ್ದೆನು. ಸ್ವಾಮಿಗಳವರು ಬಹಿರ್ದೇಶಕ್ಕೆ ದಯಮಾಡಿಸಿ ಹಸ್ತ ತೊಳೆದು ಹೊಳೆಯಿಂದ ಹೂದೋಟಕ್ಕೆ ದಯಮಾಡಿಸಿದರು. ಕಂಡು ಎದ್ದು ನಿಂತೆನು. ನನ್ನ ಬಳಿಯಲ್ಲಿ ಬಾಡಿ ನಿಂತ ಗಿಡವನ್ನು ನೋಡಿ ಮನಮರುಗಿ ಇದೆ ಏನು ನೀನು ಓದುವುದು? ಓದಿನಿಂದ ನಿನ್ನ ಬುದ್ಧಿಯೊಂದು ಚಿಗುರಿದರೆ ಸಾಕೊ? ಈ ಗಿಡ ಬಾಡಿ ಬತ್ತಿದ್ದುದು ನಿನಗೆ ಕಾಣಿಸಲಿಲ್ಲವೊ, ಕರುಣಬರಲಿಲ್ಲವೊ? ಯಾರು ಗಿಡಬಳ್ಳಿಗಳಿಗೆ ನೀರು ಹೊಯ್ದು ಚಿಗುರಿಸುವರೊ ಅವರ ಜೀವನವು ಚನ್ನಾಗಿ ಚಿಗುರಬಲ್ಲುದು. ಹೂವಾಗಬಲ್ಲುದು ಎಂದು ಅಪ್ಪಣೆಕೊಡಿಸಿದರು.

ಆ ಅಮೃತವಾಣಿ ನನ್ನ ಮನಸ್ಸಿಗೆ ಅಂಟಿತು. ಆ ಕೂಡಲೆ ಕೊಡವೊಂದನ್ನು ಕೈಗೆ ತೆಗೆದುಕೊಂಡು ಆ ಗಿಡಕ್ಕೆ ನೀರೆರೆದೆನು. ಅವರ ಆ ಉಪದೇಶದ ಪರಿಣಾಮವಾಗಿ ಹೂವಿನ ಗಿಡಗಳಲ್ಲಿ ಅತಿಶಯವಾದ ಪ್ರೇಮ ಹುಟ್ಟಿತು. ನನ್ನ ಶಿವಪೂಜಾ ಮನೆಯ ಮುಂಬದಿಯಲ್ಲಿಯೆ ಒಂದು ಹೂವಿನ ಬನವನ್ನೆ ಬೆಳೆಸಿದೆನು.

ಈ ರೀತಿಯಾಗಿ ಸ್ವಾಮಿಗಳವರಲ್ಲಿ ಎಲ್ಲ ವಿಧದಲ್ಲಿ ದಯಾಮಯ ಹೃದಯವಿತ್ತು. ಏಕೆಂದರೆ ಎಲ್ಲ ವಸ್ತುಗಳಲ್ಲಿಯೂ ಪರವಸ್ತು ಇದೆಯೆಂಬುದನ್ನು ಅವರು ಅರಿತಿದ್ದರು. ಅದರಿಂದ ಅವುಗಳಲ್ಲಿ ದಯೆಯನಿರಿಸಿ ಆ ಆ ಮುಖದಿಂದ ಅಲ್ಲಲ್ಲಿ ಪರವಸ್ತುವನ್ನು ಸಂಗ್ರಹಿಸುತ್ತಿದ್ದರು. ಪ್ರಾಣಿಗಳಲ್ಲೆಲ್ಲ ಪರಮಾತ್ಮನನ್ನು ಕಾಣುವ ಮಾರ್ಗ ಯಾವುದಾದರಿದ್ದರೆ ಅದು ದಯೆಯೊಂದೆ ಎಂಬುದು ಸ್ವಾಮಿಗಳವರ ಭವ್ಯಭಾವನೆ. ಅದರಿಂದ ಅವರು ದಯಾನಿಧಿಯಾಗಿದ್ದರು; ದಯಾರ್ದ್ರಹೃದಯರಾಗಿದ್ದರು.

---

# ಅಹಿಂಸಾಚರಣೆ

ಪೆರರಳಲಂ ತಮ್ಮಳಲೆಂ ।
ಪರಿಪುರಿಯೊಳ್ ಬೆಣ್ಣೆಯಂತೆ ಕರಗುವರರಿವರ್ ॥
ಕರೆವುವು ಕಣ್ಗಳ್ ನೀರಂ ।
ಪೆರತೊಂದೆಡೆಯಲ್ಲಿ ಪೊಯ್ಮೊಳೀಕ್ಷಿಸಿ ರುಜೆಯಂ ॥

—ನೀತಿಮಂಜರಿ.

ದಯಾಮಯರಾದ ಸ್ವಾಮಿಗಳವರಲ್ಲಿ ಹಿಂಸೆಯ ಮಾತೇಕೆ ? ಹಿಂಸಾವಾದದ ಹೊಡೆದಾಟವೇಕೆ ? ಅಮೃತದಲ್ಲಿ ಅರುಚಿಯುಂಟೆ ? ಬೆಳದಿಂಗಳಲ್ಲಿ ಬಿಸಿಲುಂಟೆ ?

ಅಹಿಂಸಾಚರಣೆಯನ್ನು ತಮ್ಮ ತ್ರಿಕರಣಗಳಲ್ಲಿ ತುಂಬಿ ತೃಪ್ತಿಪಡೆದ ಕಾರಣಿಕರವರು. ಜೀವೋದ್ಧಾರಕ್ಕಾಗಿ ಅವತರಿಸಿದ ಕುಮಾರರವರು. ಅಂಥವರು ಜೀವ ಹಿಂಸೆಗೆ ಮನಸ್ಸನ್ನು ಜಾರಬಿಡುವುದೆಂದರೇನು ?

ಜೀವದ ಬೆಲೆಯನ್ನು ಕಲೆಯನ್ನು ತಿಳಿದವರು ಅದೆಂದಿಗೂ ಹಿಂಸೆಗೆ ಮನ ಮಾರುಗೊಳ್ಳರು. ಪಶುಸಾಮಾನ್ಯವಾದ ಹಿಂಸೆಯಿಂದ ಮಾನವನ ಮಾನವತೆ ಪಾತಾಳಕ್ಕಿಳಿಯಬಲ್ಲುದು. ನಾಗರಿಕತೆ ಅನಾಗರಿಕತೆಯಾಗಿ ಅಶಾಂತಿ ಕಾರಣವಾಗಿ ನಿಲ್ಲದಿರದು.

ಸ್ವಾಮಿಗಳವರ ಕಾಯಕ ಹಿಂಸೆಯನ್ನು ಕಂಡವರಿಲ್ಲ. ವಾಚಕ ಹಿಂಸೆಯನ್ನು ಅನುಭವಿಸಿದವರಿಲ್ಲ. ಹೆಚ್ಚಿನ ಗುಣ ಪ್ರತಿಪಾಲನೆಯಲ್ಲಿ ಕೋಪಬಂದರೆ 'ಮಂಕ' ಎಂಬುವೆ ಅವರ ಹೆಚ್ಚಿನ ಬೈಗಳ. ಅವರ ಅವಗುಣಕ್ಕೆ ಮುನಿಸುತ್ತಿದ್ದರಲ್ಲದೆ ಪ್ರಾಣಕ್ಕೆ ಮುನಿಸುತ್ತಿದ್ದಿಲ್ಲ. ದ್ವೇಷಕ್ಕೆ ಮುನಿಸುತ್ತಿದ್ದಿಲ್ಲ. ಅವರಿಗೆ ತೀರ ವಿರೋಧಿಗಳಾದವರನ್ನು ಸಹ ಅವರು ತಮ್ಮ ತ್ರಿಕರಣಗಳಿಂದ ಹಿಂಸಿಸುತ್ತಿರಲಿಲ್ಲ. ಪ್ರತಿಯಾಗಿ ಅವರಿಗೆ ಹಿತವನ್ನೇ ಕೋರುತ್ತಿದ್ದರು; ಕೈಗೂಡಿಸುತ್ತಿದ್ದರು.

ಇನ್ನೊಬ್ಬರು ಮಾಡಿದ ಹಿಂಸೆಯನ್ನೆ ಅನುಮೋದಿಸಿದವರು ತಾವು ಮಾಡುವುದಿನ್ನೆಲ್ಲಿ? ಅವರ ಶಿವಯೋಗ ಮಂದಿರ ಸಂಸ್ಥೆಯಲ್ಲಿರುವ ಶಿಷ್ಯರಿಗೆಲ್ಲ ಸಾಮಾನ್ಯವಾಗಿ ಕಚ್ಚಿ ಕಷ್ಟಗೊಳಿಸುವ ಚೇಳು ಹಾವು ತಿಗಣಿ ಸೊಳ್ಳೆಗಳನ್ನು ಸಹ ಕೊಲ್ಲಬಾರದೆಂದು ಕಟ್ಟಪ್ಪಣೆ ಮಾಡಿದ್ದರು. ಅವನ್ನು ಕಂಡರೆ ತೆಗೆದುಕೊಂಡೊಯ್ದು ಆಚೆ ಬಿಟ್ಟುಬರಬೇಕೆಂದು ವಿಧಿಸಿದ್ದರು. ಕಾಡಹಂದಿ ತಿರ್ಚ ಮೊದಲಾದ ಕಾಡುಮೃಗಗಳನ್ನು ಮೀನು ಮೊಸಳೆ ಮೊದಲಾದ ಜಲಚರ ಪ್ರಾಣಿಗಳನ್ನು ಸಂಸ್ಥೆಯ ಆಚೆ ಈಚೆ ಸುಮಾರು ಒಂದೆರಡು ಮೈಲಿಯೊಳಗೆ ಬೇಟೆಗಾರರಾಗಲಿ ಜಾಲಗಾರರಾಗಲಿ ಬಂದು ಹಿಂಸಿಸಬಾರದೆಂದು ಕಟ್ಟಳೆ ಮಾಡಿದ್ದಲ್ಲದೆ ಅದರಂತೆ ರಾಜಕೀಯ ಶಾಸನವನ್ನು ಮಾಡಿಸಿದ್ದರು.

ತೊರೆಯ ತೀರದಲ್ಲಿಯೆ ಶಿವಯೋಗಮಂದಿರ ಆಶ್ರಮ. ಬೆಳಗು ಬೈಗುಗಳಲ್ಲಿ ವಟುಗಳು ಸಾಧಕರು ನೀರಿನಲ್ಲಿ ಈಜಬೇಕು. ಮಳೆಗಾಲದಲ್ಲಿ ಹೊಳೆ ಬರುವಾಗ ಪ್ರವಾಹದ–ಸೆಳತದ ಅಳುಕಿಲ್ಲದೆ ಈಜಬೇಕು. ಆಗ ಕ್ರೂರ ಮೊಸಳೆಗಳು ಪ್ರವಾಹದ ಎದುರಾಗಿ ಲೀಲಾಜಾಲವಾಗಿ ಈಜುತ್ತಿದ್ದವು. ನಮಗೆ ಹತ್ತಿರದಲ್ಲಿಯೆ ಈಜುತ್ತಿದ್ದವು. ಒಮ್ಮೆಯಾದರು ಅವುಗಳಿಂದ ಹಿಂಸೆ ಘಟಿಸಲಿಲ್ಲ. ಇಂದಿಗು ಇಲ್ಲ. ಇದಕ್ಕೆ ಸ್ವಾಮಿಗಳವರ ಅಹಿಂಸಾಚರಣೆಯ ಪ್ರಭಾವವೆ ಕಾರಣ.

ಯಾವ ಕಾರಣದಿಂದಲಾದರು ಸರಿಯೆ ಯಾರು ಯಾರನ್ನು ಹಿಂಸಿಸಬಾರದು. ಆಕಸ್ಮಿಕವಾಗಿ ಯಾರಾದರು ಹಿಂಸಿಸಿದರೆ ಸ್ವಾಮಿಗಳವರು ತುಂಬಾ ಮರುಗುತ್ತಿದ್ದರು. ಅಂಥವರನ್ನು ಕರೆಯಿಸಿ ಬುದ್ಧಿವಾದ ಹೇಳದೆ ಅವರು ಮತ್ತೊಂದು ಕೆಲಸವನ್ನೆ ಮಾಡುತ್ತಿರಲಿಲ್ಲ. ಈ ವಿಷಯದಲ್ಲಿ ನನ್ನದೆ ಒಂದು ನಿದರ್ಶನ :

ಒಂದು ದಿನ ಹತ್ತು ಗಂಟೆಯ ಹೊತ್ತು. ಪಾಠಶಾಲೆಯಿಂದ ಸ್ನಾನಕ್ಕಾಗಿ ಮೇಗಣ ಮಠಕ್ಕೆ ಹೊರಟಿದ್ದೆವು. ದಾರಿಯಲ್ಲಿ ಹುಡುಗ ಸ್ವಭಾವಕ್ಕನುಗುಣವಾಗಿ ಇಬ್ಬರಲ್ಲಿ ಅದೇನೊ ಜಗಳ ಹುಟ್ಟಿತು. ಎದುರಾಳಿ ಅವಾಚ್ಯವಾಗಿ ಬೈದನು. ಸಹಿಸಲಾಗಲಿಲ್ಲ. ಚನ್ನಾಗಿ ಕೆನ್ನೆಯ ಮೇಲೆ ಒಮ್ಮೆ ಹೊಡೆದು ಓಡಲಾಯಿತು. ಹೊಡೆಯಿಸಿಕೊಂಡವನು ದೊಡ್ಡದನಿಯಿಂದ ಅತ್ತನು. ಸ್ವಾಮಿಗಳವರು ಆ ಸಮಯದಲ್ಲಿ ಶೌಚಕ್ಕಾಗಿ ಬೆಟ್ಟದಲ್ಲಿದ್ದರು.

ಅದು ಹೇಗೋ ಅಳುವುದನ್ನು ಕೇಳಿಸಿಕೊಂಡಿದಾರೆ. ಅವರ ಮನಸ್ಸು ತಾಳದಾಗಿದೆ. ಹಾಗೆಯೆ ಮೇಲಣ ಮಠಕ್ಕೆ ದಯಮಾಡಿಸಿ ಅಳುತ್ತಿದ್ದ ಹುಡುಗನನ್ನು ಕರೆಯಿಸಿ ಸಮಾಚಾರ ಕೇಳಿದಾರೆ. ಆ ಕ್ಷಣದಲ್ಲಿಯೆ ನನ್ನನ್ನು ಕರೆಯಿಸಿದರು. ಹೊಳೆಯಲ್ಲಿ ಜಳಕಕ್ಕೆ ಇಳಿದ ನಾನು ಅಪ್ಪಣೆಯಾದೊಡನೆ ತೊಯ್ದು ಬಟ್ಟೆಯಿಂದಲೆ ಹೋದೆನು. ಈತನನ್ನು ಏತಕ್ಕೆ ಹೊಡೆದೆ ಎಂದು ಕೇಳಿದರು. ಭಯದಿಂದ ಕಂಪಿಸುತ್ತ ಹೊಡೆದ ಕಾರಣವನ್ನು ಗದ್ಗದಿತ ಕಂಠದಿಂದ ಉತ್ತರಿಸಿದೆ. ಅದಕ್ಕೆ ಸ್ವಾಮಿಗಳವರು ಮಂಕ, ಬೈದರೆ ಮೇಲಿ ನವರಿಗೆ ಹೇಳಬೇಕೊ ಹೊಡೆಯಬೇಕೊ; ಇನ್ನೊಮ್ಮೆ ಹೀಗೆ ಮಾಡಬಾರದು. ನಡೆ, ಹೋಗು ಎಂದು ಗದರಿದರು. ಬೈದ ಹುಡುಗನಿಗು ಬುದ್ಧಿ ಹೇಳಿದರು. ಆ ಮೇಲೆ ತಮ್ಮ ಸ್ನಾನ ಶಿವಪೂಜೆಗೆ ಕೆಳಗಿನ ಮಠಕ್ಕೆ ದಯಮಾಡಿದರು. ಆಗ ಅವರ ಮನಸ್ಸು ಸಮಾಧಾನವಾಯಿತು. ಅಷ್ಟು ಅವರು ಪರಹಿಂಸೆಯನ್ನು ಸಹಿಸುತ್ತಿರಲಿಲ್ಲ. ಪರಹಿಂಸೆ ಕಣ್ಣಿಗಾಗಲಿ ಕಿವಿಗಾಗಲಿ ಬಿದ್ದರೆ ವಿಚಾರಿಸದೆ ಅವರು ತಮ್ಮ ಪೂಜೆಗೆ ಮನಸ್ಸುಮಾಡುತ್ತಿರಲಿಲ್ಲ. ತಮ್ಮ ಪೂಜೆಯನ್ನಾದರು ನಿಲ್ಲಿಸಿ ಪರರ ಪೀಡೆಯನ್ನು ಪರಿಹರಿಸುತ್ತಿದ್ದರು, ಪರಿಷ್ಕಾರ ಮಾಡುತ್ತಿದ್ದರು.

ತೊರೆಯ ನೀರ ಮೇಲೆ ತೇಲಿ ಹೋಗುತ್ತಿದ್ದ ನೊಣ ಇರುವೆ ಮೊದಲಾದ ಸಣ್ಣ ಹುಳಗಳನ್ನು ಸಹ ನೀರಿಂದೆತ್ತಿ ನೆಲದ ಮೇಲೆ ಬಿಟ್ಟು ಜೀವದಾನ ಮಾಡಬೇಕೆಂದು ಬೋಧಿಸಿದ್ದರು. ದಾರಿಯಿಂದ ಹೋಗುವಾಗಲು ಆದಷ್ಟು ಜಾಗ್ರತೆಯಿಂದ ಹೋಗಬೇಕು, ದಾರಿಯಲ್ಲಿ ಸಣ್ಣ ಹುಳಗಳಿದ್ದರೆ ತುಳಿಯದಂತೆ ನಡೆಯಬೇಕು ಎಂದು ಆಜ್ಞೆಯಿತ್ತಿದ್ದರು.



# ಶೀಲಾಚರಣೆ

ಖೇಪ ಪರಂಪರೆ ಪಿರಿದುಂ ।
ನೋಡಿದೊಡಂ ಸಂತರಾತ್ಮ ಶೀಲಮನುಳಿಯರ್ ॥
ತೇಪತಿ ಕೃಶಮಾದೊಡ ಮಾ ।
ನೋಪಂ ಗುಂಪುಗುಮೆ ಪೇಳಿ ಸಿರಿಕಂಡಮುಣಂ ॥

— —ನೀತಿಮಂಜರಿ.

ಶೀಲಾಚರಣೆಯ ಸರಿಯಾದ ಅರ್ಥವನ್ನು ಅರಿತವರು ಅಪರೂಪ. ಶೀಲವೆಂದರೆ ನೀರಿನಿಂದ ಮೈತೊಳೆವುದೆ, ನೀರಿನಿಂದಾದ ಪದಾರ್ಥಗಳನ್ನು ಮುಟ್ಟದಿರುವುದೆ ಎಂದು ಭಾವಿಸಿದ ಆಚಾರವಂತರೆ ಬಹಳ. ಮನದ ಮೈಲಿಗೆಯನ್ನು ತೊಳೆಯುವುದೆ ನಿಜವಾದ ಶೀಲಾಚರಣೆ. ಶೀಲವೆಂದರೆ ಸ್ವಭಾವ. ತನ್ನಲ್ಲಿರುವ ಸ್ವಭಾವವನ್ನು ಸುಸ್ವಭಾವವನ್ನಾಗಿ ಮಾಡಿಕೊಳ್ಳುವುದೆ ಶೀಲಾಚರಣೆಯ ಗುಟ್ಟು.

ಹೀಗೆ ಹೇಳಿದ ಮಾತ್ರಕ್ಕೆ ಮೈತೊಳೆಯಬಾರದೆಂದಲ್ಲ. ಶೌಚ ಬಾಹ್ಯಾಭ್ಯಂತರವೆಂದು ಎರಡು ಬಗೆಯಾಗಿದೆ. ಕರಚರಣಾದಿ ಶರೀರವನ್ನು ಜಲದಿಂದ ತೊಳೆವುದು ಬಾಹ್ಯಶೀಲ. ಮನದ ಕಾಳಿಕೆಯನ್ನು ಕಳೆವುದು ಅಂತಃಶೀಲ. ಮನದ ಮಾಲಿನ್ಯವನ್ನು ಕಳೆಯದೆ ಮೈಯನ್ನು ಜಲದಲ್ಲಿ ಅದೆಷ್ಟು ಸಲ ಮುಳುಗಿಸಿದರು ಪ್ರಯೋಜನವಿಲ್ಲ; ಪರವಿಲ್ಲ. ಬರೀ ಜಲಸ್ನಾನದಿಂದ ಮೋಕ್ಷವಾಗುವಂತಿದ್ದರೆ ಮೀನು ಮೊಸಳೆಗಳಿಗೇಕಾಗಬಾರದು ?

ಗಾಜಿನ ಕೊಳವೆ ಒಂದು ಮೈ ಶುಭ್ರವಾದರೆ ಪ್ರಕಾಶ ಬಾರದು. ಹೊರಮೈ ಒಳಮೈ ಎರಡು ಪರಿಶುಭ್ರವಾಗಬೇಕು. ಅದರಂತೆ ಶೀಲವಂತರ ಮೈಮನಗಳೆರಡು ಮಡಿಯಾಗಬೇಕು; ಮರವೆ ಹರಿಯಬೇಕು. ಅಹಮಿಕೆ ಅಳಿಯಬೇಕು. ಆಗ ಅದು ಪರಿಪೂರ್ಣ ಶೀಲಾಚರಣೆಯಾಗುತ್ತದೆ.

ಸ್ವಾಮಿಗಳವರ ಶೀಲಾಚರಣೆಯಲ್ಲಿ ಈ ಅನುಭವವಿತ್ತು. ಅವರು ಉಭಯಾಂಗಗಳನ್ನು ತೊಳೆದಿದ್ದರು. ಸಂಪ್ರದಾಯ ಶೀಲಕ್ಕೆ ಅವರು ತಲೆಬಾಗಿರಲಿಲ್ಲ. ಅರುವಿನ ಶೀಲದಲ್ಲಿ ಅನುರಕ್ತರಾಗಿದ್ದರು. ಮೈಯ ಕೊಳೆಯನ್ನು ನೀರಿನಿಂದ ತೊಳೆದು ಶುಚಿಪಡಿಸುವಂತೆ ಸಾತ್ವಿಕವಾದ ಆಹಾರವನ್ನೆ ಸ್ವೀಕರಿಸಿ ಸಾತ್ವಿಕ ಗುಣಶೀಲರಾಗಿದ್ದರು. ಅನುಭವದ ಅಮೃತದಿಂದ ಜೀವನ ಜಡತೆಯನ್ನು ಕಳೆದು ನಶ್ವರತೆಯನ್ನು ಹೋಗಲಾಡಿಸಿದ್ದರು. ಅವರ ಬಾಹ್ಯಶೀಲವು ಎಷ್ಟು ಕಟ್ಟುನಿಟ್ಟಾಗಿದ್ದಿತೋ ಅದಕ್ಕೂ ಹೆಚ್ಚು ಅಂತಃಶೀಲವು ಅಚ್ಚುಕಟ್ಟಾಗಿತ್ತು. ಅದರಲ್ಲಿ ಚಾಚೂ ತಪ್ಪುತ್ತಿರಲಿಲ್ಲ. ಯಾವಾಗಲು ಆತ್ಮಾನುಸಂಧಾನಶೀಲರಾಗಿರುತ್ತಿದ್ದರು. ಅನುಭವದ ಆನಂದದಲ್ಲಿ ನಿಬ್ಬೆರಗಾಗಿ ಇರುತ್ತಿದ್ದರು. ಉಳಿದ ವೇಳೆಯಲ್ಲಿ ಸಾಮಾಜಿಕ ಸಮುನ್ನತಿಯ ಕಾರ್ಯಗಳಲ್ಲಿ ತಲ್ಲೀನರಾಗಿರುತ್ತಿದ್ದರು.

ಬರೀ ಮೈ ಮಾತ್ರ ತೊಳೆದು ಮಡಿ ಮಡಿ ಎಂದು ಸಾಯುವುದಕ್ಕಿಂತ ಮಡಿಯ ಮರ್ಮವನರಿದಾಚರಿಸಿ ಮಹಿತಾತ್ಮರಾಗಿ ಬಾಳುವುದೇ ಸ್ವಾಮಿಗಳವರ ಸಂಪೂರ್ಣ ಉದ್ದಿಶ್ಯವಾಗಿತ್ತು. ಶೀಲ ಶೂಲವಾಗಿ ಪರಿಣಮಿಸಬಾರದು. ತನಗಾಗಲಿ ಪರರಿಗಾಗಲಿ ಯಾರಿಗೂ ಹಾಗಾಗಬಾರದು. ಮೇಲೆನಿಸುವದಾಗಬೇಕು. ಮನಶ್ಶಾಂತಿಕಾರಕವಾಗಬೇಕು. ಆದಾಗ ಬೇಕಾದರೆ ಬಾಹ್ಯಾಭ್ಯಂತರ ಶೀಲಗಳೆರಡು ಬೇಕೇ ಬೇಕು.

"ಆಚಾರವೆ ಸ್ವರ್ಗ, ಅನಾಚಾರವೆ ನರಕ"



# ಪ್ರಗತಿ ಶೀಲತೆ

ಸ್ವಾಮಿಗಳವರು ವಿರತಿ ಸಂಪನ್ನರಾದರೂ ಪ್ರಗತಿಶೀಲರು. ಶಾಂತಿ ಸಮುಸ್ಥಿತರಾದರೂ ಕ್ರಾಂತಿಕಾರಣರು. ಆಚಾರವಂತರಾದರೂ ಅನುಭವಯುತರು. ಸಂಪ್ರದಾಯವರ್ತಿಗಳಾದರೂ ನೂತನಾಕಾಂಕ್ಷಿಗಳು, ನವನವೋನ್ಮೇಷಿಗಳು.

ಸ್ವಾಮಿಗಳವರು ಪ್ರತಿಯೊಂದರಲ್ಲಿಯೂ ಪ್ರಗತಿಯನ್ನು ಆಶಿಸುತ್ತಿದ್ದರು. ಪ್ರಗತಿಯ ಪರಮಾವಧಿಗೆ ಮುಟ್ಟುತ್ತಿದ್ದರು. ಅಷ್ಟಾಗದೆ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ. ಆ ಮಾರ್ಗ ದುರ್ಗಮವಾದರು ಹಿಂಜರಿಯುತ್ತಿದ್ದಿಲ್ಲ. ಅವರು ಮುಂದಿಟ್ಟ ಹೆಜ್ಜೆಯನ್ನು ಹಿಂದಿಡುವ ಸ್ವಭಾವದವರಲ್ಲ. ಮುಂದಡಿಯಿಟ್ಟು ಮುಗ್ಗರಿಸುವವರಲ್ಲ. ಮುಂದಡಿಯಿಡುವಾಗಲೆ ಮುಂದಾಲೋಚನೆ ಮಾಡುವುದು ಅವರ ಸುಸ್ವಭಾವಗಳಲ್ಲಿ ಒಂದು. ಒಬ್ಬಿಬ್ಬರಲ್ಲದೆ ಹತ್ತಾರು ಜನರೊಡನೆ ಹತ್ತಿದ ಹೃದಯದಿಂದ ಆಲೋಚಿಸುತ್ತಿದ್ದರು. ಆರಂಭಿಸುತ್ತಿದ್ದರು. ಅಖಂಡ ಧೈರ್ಯದಿಂದ ಅಂತ್ಯದ ವರೆವಿಗು ಕಂಕಣ ಕಟ್ಟಿ ಕೆಲಸ ಮಾಡುತ್ತಿದ್ದರು. ಆ ಕಾರ್ಯದಲ್ಲಿ ಪ್ರಗತಿಯನ್ನು ತೋರಿಸಿತೀರುತ್ತಿದ್ದರು.

ಸಣ್ಣ ಪುಟ್ಟ ಪ್ರಗತಿಗಳಿಗೆ ಲಕ್ಕವಿಲ್ಲ. ಅವರು ಆಸನಗಳಲ್ಲಿ ಹೊಸ ಬಗೆಯನ್ನು ಕಂಡು ಹಿಡಿದರು. ಹಠಯೋಗ ಶಾಸ್ತ್ರದಲ್ಲಿ ಹೇಳಿದ ವಿಧಾನಕ್ಕಿಂತಲು ತಮ್ಮದೇ ಆದ ಒಂದು ವಿಧಾನವನ್ನು ಕೆಲವು ಆಸನಗಳಲ್ಲಿ ಮಾರ್ಪಡಿಸಿದರು.

ಆಚಾರದಲ್ಲಿ ಅವರದೇ ಒಂದು ಮಾರ್ಗ. ಆ ನಿಯಮ ನಿಬಂಧನೆಗಳನ್ನು ಇನ್ನೆಲ್ಲಿಯೂ ಕಾಣೆವು. ಧಾರ್ಮಿಕ ವಿಧಾನಗಳಲ್ಲಿ ಬೇಕಾದಷ್ಟು ಹೊಸ ಬಗೆಗಳನ್ನು ತಂದರು. ಅವನ್ನೆಲ್ಲ ಇಲ್ಲಿ ಬಿತ್ತರಿಸಲು ಸಾಧ್ಯವಿಲ್ಲ.

ಪ್ರತ್ಯಕ್ಷ ಅಪ್ರತ್ಯಕ್ಷ ಅನುಭವದಲ್ಲಿ ಅವರು ಅನನ್ಯ ಸಾಧಾರಣರು. ಆಳವಾದ ಅಸಾಧಾರಣವಾದ ಅನುಭವದಿಂದ ಅವರಿಗೆ ದರ್ಶನ ಸಾಕ್ಷಾತ್ಕಾರ ತನ್ನಷ್ಟಕ್ಕೆ ತಾನೇ ಆಗಿತ್ತು. ಕೇವಲ ದಾರ್ಶನಿಕರು ಅವರಲ್ಲಿ ಕುರುಡರಾಗುತ್ತಿದ್ದರು. ಮರುಳರಂತಾಗುತ್ತಿದ್ದರು. ಬರೀ ಓದಿದ ಒಣ ತರ್ಕದವರ

ಬುದ್ಧಿಗೆ ಅವರ ಅನುಭವ ಅರ್ಥವಾಗದು. ತಮ್ಮ ಆತ್ಮ ಪ್ರಗತಿಯಾಗದು. ಸ್ವಾಮಿಗಳವರ ಆತ್ಮಪ್ರಗತಿ ಅಸಾಧಾರಣವಾದುದು.

ಸ್ವಾಮಿಗಳವರು ಮಾತಾಡುವದರಲ್ಲಿಯೂ ಪುರಾಣ ಕೀರ್ತನ ಹೇಳುವುದರಲ್ಲಿಯೂ ಪ್ರಗತಿ ಕಿಡಿಗಳನ್ನು ಕಾಣಬಯಸುತ್ತಿದ್ದರು. ಪ್ರತಿಯೊಂದರಲ್ಲಿಯು ಅವರು ಪ್ರಗತಿ ಮನೋಭಾವವುಳ್ಳವರಾಗಿದ್ದರು. ಸಾಮಾಜಿಕ ಸಾಂಸ್ಕೃತಿಕ ಔದ್ಯೋಗಿಕ ಔಪಾಸಿಕ ಎಲ್ಲ ಕಾರ್ಯಕ್ಷೇತ್ರಗಳಲ್ಲಿಯು ಅವರು ಪ್ರಗತಿಶೀಲರಾಗಿ ಬಾಳಿದರು.



# ಆಹಾರ, ಆರೋಗ್ಯ

ಸ್ವಾಮಿಗಳವರು ಆಹಾರ ಆರೋಗ್ಯಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದರು. ಆಹಾರವೆ ಆರೋಗ್ಯಕ್ಕೆ ಮೂಲಕಾರಣವೆಂದು ಕಂಡು ಅವರಂತೆ ವರ್ತಿಸುತ್ತಿದ್ದರು. ಅವರಿಗೆ ಆಹಾರವೆ ಪರಮೌಷಧಿಯಾಗಿತ್ತು. ಬೇರೆ ಔಷಧಿಗಳನ್ನು ಅವರು ತೆಗೆದುಕೊಳ್ಳುತ್ತಿರಲಿಲ್ಲ.

ಆಹಾರ ಶುದ್ಧಿಯಿಂದ ಆರೋಗ್ಯವನ್ನು ಆಯುಷ್ಯವನ್ನು ಹೆಚ್ಚಿಸಿ ಕೊಳ್ಳುವ ವಿಧಾನವನ್ನು ಸ್ವಾಮಿಗಳವರು ತಮ್ಮ ಆಚರಣೆಯಿಂದ ತೋರಿದರು. ಅಷ್ಟೆ ಅಲ್ಲ ಆತ್ಮಶಕ್ತಿಯನ್ನು ಹೆಚ್ಚಿಸಿ ತೋರಿದರು. ಮಿತಿ ಯಾದ ಸಾತ್ವಿಕವಾದ ಆಹಾರವೆ ಅಮೃತ. ಮಿತಿಯಾಗಿ ಉಣ್ಣುವವನಿಗೆ ರೋಗವಿಲ್ಲ. ಸಾತ್ವಿಕವಾದುದನ್ನು ಉಣ್ಣುವವನಿಗೆ ರಾಗವಿಲ್ಲ. ಮಿತವಾಗಿ ಸಾತ್ವಿಕವಾಗಿ ಉಣ್ಣುವವನು ನಿರೋಗಿಯಾಗಿ ವಿರಾಗಿಯಾಗಿ ಬಾಳಬಲ್ಲನು, ಬೆಳಗಬಲ್ಲನು.

ಸಾತ್ವಿಕವು ಶುದ್ಧವು ಆಗಿದ್ದು ಶಕ್ತಿದಾಯಕವಾದ ಆಹಾರ ಹಾಲೊಂದೆ. ಅದನ್ನು ಹೆಚ್ಚಾಗಿ ಭುಂಜಿಸುವವನ ಆರೋಗ್ಯ ಆಯುಷ್ಯ ಹೆಚ್ಚುತ್ತದೆ. ಇದನ್ನು ಕಂಡು ಸ್ವಾಮಿಗಳವರು ಹಸುವಿನ ಹಾಲನ್ನೆ ಹೆಚ್ಚಾಗಿ ಸ್ವೀಕರಿಸು ತ್ತಿದ್ದರು.

ಹಾಲಿನಲ್ಲಿ ಎಲೆ ಕಾಯಿಗಳಲ್ಲಿ ಹಣ್ಣು ಹಂಪಲುಗಳಲ್ಲಿ ಪೋಷಕ ದ್ರವ್ಯವಿದೆಯೆಂದು ಇಂದಿನ ವೈಜ್ಞಾನಿಕರು ಕಂಡುಹಿಡಿದಿದಾರೆ. ಆ ಪೋಷಕ ದ್ರವ್ಯಕ್ಕೆ 'ಕಾಲ್ಸಿಯಮ್ ಪೆಟಾಷಿಯಮ' ಎ–ಎಂದು ಹೇಳುತ್ತಾರೆ. ಇದ ರಿಂದಾಗಿ ಹಾಲಿಗೆ ಆಹಾರದಲ್ಲಿ ಹೆಚ್ಚಿನ ಸ್ಥಾನ ಈಗಲು ಇದೆ. ಆದರೆ ಆ ಪೋಷಕ ದ್ರವ್ಯವನ್ನು ಹಾಳು ಮಾಡುವಂತಹ ಬೇರೆ ಕಾಫಿ ಟೀ ಮೊದ ಲಾದವುಗಳಲ್ಲಿ ಹಾಲನ್ನು ಬೆರಸಿ ಸೇವಿಸುವದರಿಂದ ಫಲವಿಲ್ಲ. ಹಾಲಿನ ಶಕ್ತಿ ಹ್ರಾಸವಾಗುತ್ತದೆ. ಹಾಲಿನಲ್ಲಿ ನಕ್ಕರೆಯನ್ನು ಸಹ ಸೇರಿಸದೆ ತೆಗೆದು

ಕೊಂಡಲ್ಲಿ ಚೆನ್ನಾಗಿರುತ್ತದೆ. ಹಾಲನ್ನು ಕಾಯಿಸದೆ ಕುಡಿದರೆ ಮತ್ತೂ ಚೆನ್ನಾಗಿರುತ್ತದೆ. ಪರಿಪೂರ್ಣ ಶಕ್ತಿ ಒದಗಿ ಪೂರ್ಣಾಯುಗಳಾಗುತ್ತಾರೆ.

ಸ್ವಾಮಿಗಳವರು ಹಾಲಿನಲ್ಲಿ ಸಕ್ಕರೆ ಮೊದಲ್ಗೊಂಡು ಏನನ್ನು ಬೆರಸದೆ ಸ್ವೀಕರಿಸುತ್ತಿದ್ದರು. ಹಸುವಿನ ಹಾಲನ್ನೆ ಉಪಯೋಗಿಸುತ್ತಿದ್ದರು. ಅದೇ ಅವರ ಪ್ರಥಮ ಆಹಾರ. ಎರಡನೆಯದು ಜೇನು. ಮೂರನೆಯದಾಗಿ ಅಕ್ಕಿ ಹೆಸರು ಗೋಧಿ ಲವಣ ಕಿರಕನಾಲಿ. ಇವುಗಳ ಹೊರತು ಬೇರೆ ಯಾವುದನ್ನು ಅವರು ತೆಗೆದುಕೊಳ್ಳುತ್ತಿರಲಿಲ್ಲ. ಅವರು ಆಹಾರದಲ್ಲಿ ಹೆಚ್ಚಿನ ಸಾತ್ವಿಕತೆಗೆ ಹೆಚ್ಚಿನ ಶುದ್ಧತೆಗೆ ಗಮನಿಸಿದ್ದರು. ಗೀತೆಯಲ್ಲಿ ಹೇಳಿದ ರಾಜಸ ತಾಮಸಾ ಹಾರಗಳನ್ನು ಅವರು ಮುಟ್ಟುತ್ತಿರಲಿಲ್ಲ.

ಸ್ವಾಮಿಗಳವರು ಆಹಾರ ಶುದ್ಧಿಯಿಂದ ಅಂತ್ಯದ ವರೆವಿಗು ಇಂದಿನ ತರುಣರಿಗಿಲ್ಲದ ಚಟುವಟಿಕೆಯಿಂದ ತೇಜಸ್ಸಿನಿಂದ ಇದ್ದರೆಂಬುದನ್ನು ಮುಖ್ಯ ವಾಗಿ ಗಮನಿಸಬೇಕು. ೬೩ ವರುಷದ ಅವರ ಜೀವನದಲ್ಲಿಯು ಆ ಚಟು ವಟಿಕೆ ಇರಬೇಕಾದರೆ ಆಹಾರ ಶುದ್ಧಿಯಿಂದಲ್ಲದೆ ಬೇರೆ ಸಾಧ್ಯವಿಲ್ಲ.

ಕೊನೆಯಲ್ಲಿ ಸ್ವಾಮಿಗಳವರಿಗೆ ಸ್ವಲ್ಪ ಅನಾರೋಗ್ಯವೊದಗಿದ್ದುದು ಅವರ ಪರಿಶ್ರಮದ ಫಲವಾಗಿಯೆ ಹೊರತು ಆಹಾರದಿಂದಲ್ಲ. ಆ ಅವರ ವಯಸ್ಸಿನಲ್ಲಿಯು ಶಕ್ತಿಮೀರಿದ ಶ್ರಮ ತೆಗೆದುಕೊಳ್ಳುತ್ತಿದ್ದರು. ಇಲ್ಲದಿದ್ದರೆ ಅವರ ಅಜ್ಜಂದಿರಂತೆ ಅವರು ೧೦೫ ವರುಷ ಬಾಳಬಹುದಿತ್ತು. ಆ ಭಾಗ್ಯ ಸಮಾಜಕ್ಕೆ ಇಲ್ಲದೆ ಹೋಯಿತು.



# ಲಿಂಗೈಕ್ಯ

೧೯೩೦ ಆದಿಯಲ್ಲಿ ಶಿವಯೋಗ ಮಂದಿರದಿಂದ ಮುದೆನೂರಿಗೆ ಸ್ವಾಮಿಗಳವರು ತೆರಳಿದರು. ವಿಭಾಗವಾಗಲಿದ್ದ ಆ ಗ್ರಾಮದ ಪ್ರಮುಖ ಮನೆತನದವರಿಗೆ ಸಮಾಧಾನ ಸಹಕಾರಗಳನ್ನು ಬೋಧಿಸುವುದು, ಪ್ರಮಥ ಪುಂಗವನಾದ ಬಸವಣ್ಣನ ವಿಷಯದಲ್ಲಿ ಅಭ್ಯಾಸಮಾಡಿ ಪ್ರದರ್ಶಿಸಲು ಸನ್ನದ್ಧರಾಗಿದ್ದ ನಾಟಕ ಸಂಘದವರ ಕಲೋತ್ತೇಜನಗೊಳಿಸುವುದು ಮುಂತಾದ ಅಲ್ಲಿನ ಕಾರ್ಯ ಗೌರವಗಳಲ್ಲಿ ತಲ್ಲೀನರಾಗಿದ್ದರು. ಇದ್ದಕ್ಕಿದ್ದಂತೆ ಸ್ವಾಮಿಗಳವರ ಶರೀರದಲ್ಲಿ ಅಸ್ವಸ್ಥತೆ ಆವಿರ್ಭವಿಸಿತು, ಅತಿಶಯಕ್ಕಿಟ್ಟಿತು. ನಿವಾರಣೆಗಾಗಿ ಬಳಿಯಲ್ಲಿದ್ದ ಶಿಷ್ಯರು ಭಕ್ತರು ಬೇಕಾದಷ್ಟು ಸಾಹಸಪಟ್ಟರು. ಏನು ಪಟ್ಟರೇನು ? ಎಲ್ಲವು ಮನೆ ವೈದ್ಯವಾಗಬೇಕು. ಬೇರೆ ಔಷಧಿಗಳನ್ನು ಮುಟ್ಟುತ್ತಿರಲಿಲ್ಲ. ಆಚಾರ ನಿಷ್ಠರು. ಆಚಾರಕ್ಕೆ ಅನನುಕೂಲವಾದ ಗೃಹವೈದ್ಯವು ಅವರಿಗೆ ಬೇಡ. ನೀರಿನ ಸಂಪರ್ಕದಿಂದ ತಯಾರಾಗುವ ಶುಂಠಿ ಮೆಣಸು ಮೊದಲಾದವುಗಳನ್ನು ಸಹ ಅವರು ಉಪಯೋಗಿಸುತ್ತಿರಲಿಲ್ಲ. ಆಚಾರದ ಕಟ್ಟುನಿಟ್ಟಿನಿಂದ ಹೆಚ್ಚಿನ ಚಿಕಿತ್ಸೆಗೆ ಅವಕಾಶವೊದಗಲಿಲ್ಲ. ದಿನದಿನಕ್ಕೆ ಕಾಹಿಲ ಹೆಚ್ಚಿತು. ದಿಗಿಲಿಗೆ ಕಾರಣವಾಯಿತು. ಇನ್ನು ಇಲ್ಲಿದ್ದರೆ ಲೇಸಲ್ಲವೆಂದು ಭಾವಿಸಿ ಹಾವೇರಿಗೆ ಪ್ರಯಾಣವಾಗಿ ಬಂದರು. ಸ್ವಾಮಿಗಳವರಿಗೆ ದೀರ್ಘ ಕಾಹಿಲೆಯೆಂಬ ಸುದ್ದಿ ಎಲ್ಲೆಲ್ಲಿಯು ಹಬ್ಬಿತು. ಅನೇಕ ಕಡೆಗಳಿಂದ ಅನಂತ ಶಿಷ್ಯರು ಸ್ವಾಮಿಗಳವರಲ್ಲಿಗೆ ಧಾವಿಸಿದರು. ಶಿವಯೋಗಮಂದಿರದ ಅಧಿಕಾರಿ ವರ್ಗದವರು ಅಲ್ಲಿ ಸೇರಿದರು. ಯಾರ ಮುಖದಲ್ಲಿಯು ಕಳೆಯಿಲ್ಲ. ದಿನದಿನಕ್ಕೆ ಜ್ವರ ಏರುತ್ತಿದೆ. ಬಲಕುಂದುತ್ತಿದೆ. ಅಂತಹದರಲ್ಲಿ ಸೇವಕರನ್ನು ಹತ್ತಿರಕ್ಕೆ ಕರೆದು ಆಚಾರದಲ್ಲಿ ತಪ್ಪಿದರೆ ನಿಮ್ಮ ದೋಷ; ಧ್ಯಾನದಿಂದ ತಪ್ಪಿದರೆ ಅದು ನಮ್ಮ ದೋಷ. ಇದು ನಿಮ್ಮ ನಮ್ಮ ಹೊಣೆಗಾರಿಕೆ – ಎಂದು ಅಪ್ಪಣೆಯಿತ್ತರು. ಆ ವಿಷಯದಲ್ಲಿ ನಿಶ್ಚಿಂತರಾದರು. ಎಡಬಿಡದೆ ಧ್ಯಾನಾಸಕ್ತರಾಗಿದ್ದರು. ಆ ಸಮಯದಲ್ಲಿ ಪ್ರತಿಷ್ಠಿತರೊಬ್ಬರು ದರ್ಶನಕ್ಕೆ

ಬಂದು ಏನು ಯೋಚನೆ ಮಾಡಬಾರದು ಎಂದರು. ಅದಕ್ಕೆ ಸ್ವಾಮಿಗಳವರು ನಮಗಿರುವುದು ಒಂದೇ ಒಂದು ಚಿಂತೆ. ಅದು ಸಮಾಜವೇಳ್ಗೆಯ ಚಿಂತೆ; ಸಮಾಜದೈಕ್ಯತೆಯ ಚಿಂತೆ. ಈ ಕಾರ್ಯವನ್ನು ನೀವು ನಿರ್ವಹಿಸುವೆವೆಂದರೆ ಅದೇ ನಮಗೆ ನಿಶ್ಚಿಂತೆ. ಈ ಕಾಯಕದ ಚಿಂತೆ ಕಣದಷ್ಟೂ ನಮಗಿಲ್ಲ. ಕಾಯ ಮೋಹದ ಮಾತೇಕೆ? ಸಾಮಾಜಿಕ ಸೇವೆಗಾಗಿ ಏನನ್ನುವಿರಿ? ಅವರಿಂದ ಅದಕ್ಕೆ ಹೊಣೆಗಾರಿಕೆಯ ಉತ್ತರ ಬರಲಿಲ್ಲ. ಅದಕ್ಕಾಗಿ ಸ್ವಾಮಿಗಳವರು ನಿಡುಸುಯ್ದರು. ಸಮಾಜಸೇವೆಗಾಗಿ ನಾವೇ ಈ ಲೋಕಕ್ಕೆ ಮತ್ತೊಮ್ಮೆ ಹುಟ್ಟಿ ಬರುತ್ತೇವೆ ಎಂದು ಅಪ್ಪಣೆಯಿತ್ತರು.

ಸ್ವಾಮಿಗಳವರ ಕಾಹಿಲೆ ಉಲ್ಬಣಸ್ಥಿತಿಗೆ ಬಂದಿತು. ವೈದ್ಯರು ಬಂದು ನೋಡಿ ಮಾತಿಗೆ ಅವಕಾಶ ಕೊಡಬೇಡಿರೆಂದರು. ಸ್ವಾಮಿಗಳವರು ಕೇಳಲಿಲ್ಲ. ತಮ್ಮ ದರ್ಶನಕ್ಕೆ ಬಂದ ಬಂದವರನ್ನು ನಿಮ್ಮ ಮುಂದಿನ ಜೀವನದ ಗುರಿಯೇನೆಂದು ಕೇಳುತ್ತಿದ್ದರು. ಸಮರ್ಥರಾದವರಿಗೆ ಸಮಾಜದ ಸಂಸ್ಥೆಯ ಭಾರಹೊರಲು ಹೇಳುತ್ತಿದ್ದರು. ಧ್ಯಾನ ಅಖಂಡವಾಗಿ ಸಾಗಿತ್ತು. ಜ್ಞಾನಕ್ಕೆ ಚ್ಯುತಿಯಿರಲಿಲ್ಲ. ಧರ್ಮಸ್ತಂಭದ ಮೇಲೆ ಹೃದಯದ ಹಣತಿಯ ನಿಲಿಸಿ ಧ್ಯಾನ ತೈಲವನೆರೆದು ಕ್ರಿಯಾ ಬತ್ತಿಪಿಡಿದು ಅವರ ಜ್ಞಾನಜ್ಯೋತಿ ಉಜ್ವಲವಾಗಿ ಉರಿಯುತ್ತಲೇ ಇತ್ತು. ಈ ಪ್ರದೀಪ ಒಂದಿನದ್ದಲ್ಲ, ಒಂದು ವರುಷದ್ದಲ್ಲ ನಾಲ್ವತ್ತು ವರುಷದ ನಂದಾದೀಪ. ಕಾಂತಿಯುತವಾಗಿತ್ತು. ಅವರ ಪ್ರಾಣವೀಣೆ ಸಮಾಜೋನ್ನತಿಯ ರಾಗವನ್ನು ಹಾಡುತ್ತಿತ್ತು. ಶಿವಯೋಗ ಮಂದಿರ ಏಳ್ಗೆಯ ಬಯಕೆಯ ಅವರ ಹಸ್ತ, ಸಮೀಪಕ್ಕೆ ಬರುತ್ತಿದ್ದ ಸಮರ್ಥ ವ್ಯಕ್ತಿ ತಂತಿಗಳನ್ನು ಮೀಟುತ್ತಿತ್ತು.

ಇಷ್ಟರಲ್ಲಿ ರೋಗವು ಮೇರೆ ಮೀರಿತು. ಎಲ್ಲರಿಗು ಭಯ ಕಂಪನಗಳು ದಿಸಿದವು. ಆ ಕ್ಷಣದಲ್ಲಿಯೆ ಹೊಸಕಾರು ತರಿಸಿ ಸ್ವಾಮಿಗಳವರನ್ನು ಅವರ ಕೋರಿಕೆಯಂತೆ ಶಿವಯೋಗ ಮಂದಿರಕ್ಕೆ ಬಿಜಯಂಗೈಸಿದರು. ದಾರಿಯುದ್ದಕ್ಕು ಪಕ್ಕದಲ್ಲಿರುವವರಿಗೆ ಧೈರ್ಯವಿರಲಿಲ್ಲ. ಎವೆಯಿಕ್ಕದ ಕಣ್ಣುಗಳಿಂದ ಸ್ವಾಮಿಗಳವರನ್ನು ನೋಡಿಕೊಳ್ಳುತ್ತಿದ್ದರು.

ದೇವರ ದಯೆಯಿಂದ ಶಿವಯೋಗ ಮಂದಿರಕ್ಕೆ ಬರುವವರೆವಿಗು ಯಾವ ಅಪಾಯವಾಗಲಿಲ್ಲ. ಸ್ವಾಮಿಗಳವರು ತಮ್ಮ ಆತ್ಮವನ್ನು ಶಿವಯೋಗ

ಮಂದಿರದಲ್ಲಿ ಬಿಡಬೇಕೆಂದು ಸಂಕಲ್ಪಿಸಿದ್ದರು. ಆದರೆ ಅಲ್ಲಿಗೆ ಹೋಗುವ ವರೆವಿಗು ಉಳಿಯುವಂತಿರಲಿಲ್ಲ. ಆತ್ಮ ಪಕ್ಷಿ ಹಾರನಿಂತಿತ್ತು. ದೇಹ ವೃಕ್ಷದ ತುದಿಗೇರಿ ರೆಕ್ಕೆಗಳನ್ನು ಮೇಲಕ್ಕೆತ್ತಿತ್ತು. ಆದರು ಹಾರಲಿಲ್ಲ. ಸ್ವಾಮಿಗಳವರು ತಮ್ಮ ಕಾರಣಿಕ ಶಕ್ತಿಯನ್ನು ಈ ಸಮಯದಲ್ಲಿಯು ತೋರ್ಪಡಿಸಿದರು. ಹಾರುವ ಪಕ್ಕಿಯ ಕಾಲನ್ನು ಅದುಮಿ ಹಿಡಿದರು. ಶಿವಯೋಗ ಮಂದಿರ ಸೇರಿದರು. ಸಂಕಲ್ಪಸಿದ್ಧಿಗೊಳಗಾದರು.

ಅಂದು ಮಾಘ ಬ॥ ಸಪ್ತಮಿ ೧೯೩೦ ನೆಯ ಇಸವಿ ಗುರುವಾರ ಸಂಜೆಯ ಹೊತ್ತು. ಸ್ನಾನ ಮಾಡಿಸಿದರು. ಶಿವಪೂಜೆಗೈದರು. ಶಿವ ಶಿವ ಎಂದರು. ಸಂಜೆಯ ಏಳು ಗಂಟೆಯ ಸಮಯಕ್ಕೆ ಲಿಂಗದಲ್ಲಿ ಬೆರೆದರು. ಕಣ್ಣುಗಳು ತೆರದಂತೆಯೆ ಇದ್ದವು. ಶಿವಲಿಂಗದಲ್ಲಿ ಲಿಪ್ತೈಕ್ಯರಾದರು. ಕಣ್ಣುಗಳಲ್ಲಿ ಆತ್ಮ ಹೊರಟು ಹೋಗುವುದು ಕಂಡವರ ಸೊತ್ತಲ್ಲ. ಕಾಲ ಕರ್ಮ ಮಾಯೆಗಳ ಗೆದ್ದವರ ಸೊತ್ತು. ಶಿವಧ್ಯಾನ ಪರಾಯಣರ ಸೊತ್ತು. ಕ್ರಿಯಾ ಶಕ್ತಿಯಿಂದ ಕಾರಣಿಕರಾದವರ ಸೊತ್ತು.

ಶಿಷ್ಯವೃಂದವು ಕಣ್ಣೀರಿಟ್ಟಿತು. ಸಣ್ಣ ಪುಟ್ಟ ವಟುಗಳು ತಂದೆಯನ್ನು ಕಳೆದುಕೊಂಡಂತೆ ಅತ್ತರು. ಸ್ವಾಮಿಗಳವರು ಅನೇಕರಿಗೆ ತಂದೆ ತಾಯಿ ಗುರು ದೇವರು ಆಗಿದ್ದರು. ಅಂದು ಅವರೆಲ್ಲ ಅನಾಥರಾದರು. ಪ್ರಾಣವೊಂದು ದೇಹವೆರಡಾಗಿದ್ದ ಹಾವೇರಿ ಶ್ರೀಗಳವರು ಸಣ್ಣ ಮಕ್ಕಳಂತೆ ಅತ್ತರು. ಕಣ್ಣೀರು ಕೋಡಿಯಾಗಿ ಹರಿಯಿತು. ಆ ವೇದನೆಯಲ್ಲಿ – ದೇವ, ಅವರ ಬದಲು ನನ್ನನ್ನು ಒಯ್ಯಬಾರದಿತ್ತೆ? ಎಂದು ವ್ಯಥೆಯು ಈ ವಾಕ್ಯರೂಪವಾಗಿ ಅವರ ಮುಖದಿಂದ ಹೊರಬಿದ್ದಿತು. ಅದರಿಂದ ಅನೇಕರ ಹೃದಯ ಭೇದಿಸಿತು. ಅನೇಕರು ಸಂತೈಸಲು ಪ್ರಯತ್ನಿಸಿದರು. ಫಲಿತಾಂಶ ಬರಲಿಲ್ಲ. ಕೊನೆಗು ತಮ್ಮ ಶೋಕದ ಭಾರ ಇಳಿಯುವವರೆವಿಗು ಶೋಕಿಸಿದರು. ಎಲ್ಲರನ್ನು ಶೋಕ ಸಾಗರದಲ್ಲಿ ಮುಳುಗಿಸಿದರು.

ಇತ್ತ ಕೆಲವು ಮಂದಿ ಶಿಷ್ಯರು ಸ್ವಾಮಿಗಳವರ ಪವಿತ್ರ ದೇಹಕ್ಕೆ ಮಡಿ ಬಟ್ಟೆಗಳನ್ನು ತೊಡಿಸಿದರು. ಕಾವಿಯ ಬಟ್ಟೆಯೊಂದನ್ನು ಮೇಲೆ ಹೊದಿಸಿದರು. ಭಸ್ಮ ರುದ್ರಾಕ್ಷಿಗಳ ಧರಿಸಿದರು. ಹೂವು ಹಾರಗಳಿಂದ ಅಲಂಕರಿಸಿದರು. ದೀವಿಗೆಗಳು ಬೆಳಗಿದವು. ಎದುರಿನಲ್ಲಿ ವಟುಗಳು

ಸಾಧಕರು ಶಿಷ್ಯರು ನಾಲು ಸಾಲಾಗಿ ಕುಳಿತುಕೊಂಡರು. ಸ್ವಾಮಿಗಳವರಿಗೆ ಪ್ರಿಯವಾದ ಕೈವಲ್ಯ ಪದಗಳನ್ನು ಹಾಡಿದರು. ಪುರಾಣ ಪಠಿಸಿದರು. ಭಜನೆ ಮಾಡಿದರು. ಧ್ಯಾನ ಮಾಡಿದರು. ಆ ದಿನದ ರಾತ್ರಿಯೆಲ್ಲ ಹೀಗೆಯೆ ಕಳೆಯಿತು. ಮರುದಿನ ಅಲ್ಲಲ್ಲಿಗೆ ತಂತಿಯಿಂದ ವಾರ್ತೆಯನ್ನು ಕಳುಹಿದರು. ಆ ದಿನವೆಲ್ಲ. ಬರುವವರಿಗಾಗಿ ನಿರೀಕ್ಷಿಸಿದರು. ಏಳೆಂಟು ಸಾವಿರ ಜನ ಸೇರಿತು. ಜನ ಸಂದಣಿ ಹೆಚ್ಚಿತು. ಪ್ರಯಾಣ ಸೌಕರ್ಯವಿಲ್ಲದ ಆ ಆಶ್ರಮಕ್ಕೆ ಅಲ್ಪಾವಧಿಯಲ್ಲಿ ಅಷ್ಟೊಂದು ಜನ ಸೇರಿದ್ದೆ ಹೆಚ್ಚು. ಸ್ವಾಮಿಗಳವರು ಜನತಾ ಪ್ರೇಮಿಗಳೆಂಬುದಕ್ಕೆ ಇದು ಒಂದು ನಿದರ್ಶನ.

ಸಾಯಂಕಾಲ ಸಮಯ. ವಾದ್ಯಗಳು ಮೊಳಗಿದವು. ಅತ್ತ ಶಾಸ್ತ್ರೋಕ್ತ ವಾಗಿ ಸಮಾಧಿ ತಯಾರಾಗಿತ್ತು. ಅಲ್ಲಿಗೆ ವಾದ್ಯಘೋಷಗಳೊಡನೆ ಭಜನೆ ಕೀರ್ತನೆಗಳೊಡನೆ ಕೈವಲ್ಯ ವಾಕ್ಯಗಳೊಡನೆ ಸ್ವಾಮಿಗಳವರ ಪುಣ್ಯ ಶರೀರವನ್ನು ತಂದರು ಇಳುಹಿದರು. ಸರ್ವರು ಭಕ್ತಿಯಿಂದ ಭಜಿಸಿದರು, ನಮಸ್ಕರಿಸಿದರು. ಮರಳಿ ಪೂಜೆಯಾಯಿತು. ಮಹಾ ಮಂಗಳವಾಯಿತು. ಸಮಾಧಿ ಕ್ರಿಯೆಗಳೆಲ್ಲ ಸಾಂಗವಾದವು. ಸಮಾಧಿಯಲ್ಲಿ ಸ್ವಾಮಿಯ ಪ್ರಣವ ದೇಹವನ್ನು ಕೂರಿಸಿದರು. ಅವರೇ ಮಡಿಯಿಂದ ತಯಾರಿಸಿಟ್ಟಿದ್ದ ಮಡಿ ಭಸ್ಮಗಳನ್ನು ತರಿಸಿ ಸಮಾಧಿಯನ್ನು ತುಂಬಿದರು. ಸ್ವಾಮಿಗಳು ಭಸ್ಮಾಂಗ ರಾದರು. ಭಸ್ಮಶೋಭಿತರಾದರು. ಭಸ್ಮದಲ್ಲಿ ಮುಖ ಮುಚ್ಚಿಹೋಗುವ ಕಾಲಕ್ಕೆ ಮುಖಕಾಂತಿ ಅಚ್ಚಳಿಯದಂತಿತ್ತು. ಶಾಂತಿ ಚಿನ್ಹೆ ನೆಲೆಸಿಂತಿತ್ತು. ಎಲ್ಲರು ಮತ್ತೆ ಮತ್ತೆ ಕಣ್ತುಂಬ ಕಂಡರು. ಕಣ್ಣೀರಿಟ್ಟರು. ಅಷ್ಟರಲ್ಲಿ ಸ್ವಾಮಿ ಗಳವರ ಮುಖ ಭಸಿತದಿಂದ ಮುಚ್ಚಿತು. ಸಮಾಧಿ ತುಂಬಿತು. ಪವಿತ್ರ ಶರೀರವನ್ನು ಭೂ ಮಾತೆ ಬಿಡಲಾರದೆ ಅಗಲಲಾರದೆ ಮರಳಿ ತನ್ನ ಮಡಲಲ್ಲಿ ಇರಿಸಿಕೊಂಡಳು. ಅವಳೆ ಧನ್ಯೆ. ಅವಳದೆ ಪುಣ್ಯ. ಎಲ್ಲರ ಕಣ್ಣುಗಳಿಗೆ ಸ್ವಾಮಿಗಳವರ ಮೈ ಮರೆಯಾಯಿತು. ಮನದಲ್ಲಿ ಆ ಮೂರ್ತಿ ನೆಲೆನಿಂತಿತು. ಎಲ್ಲರು ಮನಸ್ಸಿಲ್ಲದ ಮನಸ್ಸಿನಿಂದ ಮಠಕ್ಕೆ ತೆರಳಿದರು. ಹೋಗುತ್ತ ಜಯ ಘೋಷಮಾಡಿದರು, ಶುಭಘೋಷ ಮಾಡಿದರು. ಆ ನಿನಾದ ಕಾಡುಗಳಲ್ಲಿ ಸೇರಿ ಪ್ರತಿಧ್ವನಿಸಿತು. ದಿಗಂತ ಸೇರಿತು. ಅಚೇತನ ಗಿರಿ ಗಹ್ವರಗಳು ಸಹ

ಸ್ವಾಮಿಗೆ ಶುಭ ಕೋರಿದವು; ಜಯ ಹರಸಿದವು: ಜಯಶ್ರೀ ಕುಮಾರ ಸ್ವಾಮಿ – ಜಯಶ್ರೀ ಸದಾಶಿವಸ್ವಾಮಿ, ಜಯಶ್ರೀ ನವಮಾಜ ಪ್ರೇಮಿ.

ಸ್ವಾಮಿಗಳವರ ಲಿಂಗೈಕ್ಯವು ಲೀಲಾಮಯವಾದುದು; ಲೋಕಾಕರ್ಷಕ ನಾದುದು. ಸ್ವಾಮಿಗಳವರು ಲೋಕದ ಆಲೋಕನವನ್ನು ಆಗಳೂ ಬಿಡಲಿಲ್ಲ. ಲೋಕವನ್ನು ತಮ್ಮ ಕಲಾಪೂರ್ಣ ಕಣ್ಣಲ್ಲಿ – ಮಲರಹಿತ ಮನದಲ್ಲಿ ಅಚ್ಚೊತ್ತಿಕೊಂಡು ಆತ್ಮಲೀನವಾದರು. ಅಂತಹ ಜನಜೀವಿಯ ಆ ಕಲಾ ಪೂರ್ಣ ಲಿಂಗೈಕ್ಯದ ಕುರುಹುಗಳ ಸ್ಮಾರಕ ಅಗತ್ಯವಲ್ಲವೆ? ಅಗತ್ಯವೆಂದು ಒಪ್ಪುವಲ್ಲಿ ಅವರ ಗದ್ದುಗೆಯ ಎದುರಿನಲ್ಲಿ ಅವರ ಕೊನೆಯ ಕುರುಹುಗಳ ಸ್ಮಾರಕ ಚಿತ್ರಗಳಂದೊಡಗೂಡಿದ ಕುಮಾರನ ಕಾರಣಿಕ ಸ್ತಂಭವೊಂದು ಕಂಗೊಳಿಸುವಂತಾಗಬೇಕು.

ಸ್ವಾಮಿಗಳವರದು ಬುದ್ಧನಂತೆ ಅಸಾಧಾರಣವಾದ ನಿರ್ಯಾಣವು, ಅಸದೃಶವಾದ ಲಿಂಗೈಕ್ಯವು. ಅದರಿಂದ ಅವರು ಕಾರಣಿಕರು. ಬುದ್ಧನ ನಿರ್ಯಾಣ ಚಿತ್ರಣ ಸ್ತೂಪವನ್ನು ಆತನ ಶಿಷ್ಯರು ನಿರ್ಮಿಸಿ ಭಾರತದಲ್ಲೆಲ್ಲ ಕೀರ್ತಿಯನ್ನು ಬೀರಿದರು. ಬುದ್ಧನ ನಿರ್ಯಾಣ ಸ್ತೂಪವು ಬುದ್ಧನ ನಿರ್ಯಾಣ ಕುರುಹುಗಳನ್ನು ಹೊತ್ತು ಅಚಲವಾಗಿ ಚಿರಕಾಲ ನಿಂತು ಅನೇಕರಿಗೆ ಅಚ್ಚರಿಯನ್ನು ಆನಂದವನ್ನು ಸಾರುತಿದೆ.



# ಅನ್ವರ್ಥನಾಮ - ಪರಮಾರ್ಥಧಾಮ

ಅನೇಕರು ಜೀವನದಲ್ಲಿ ಪಡೆದ ಅನ್ವರ್ಥನಾಮವನ್ನೇ ಸಾರ್ಥಕ ಪಡಿಸದೆ ಇರುವರು. ಇನ್ನು ಅಂಕಿತ – ರೂಢಿ ನಾಮಗಳ ಮಾತೇನು ? ಕುಮಾರಯೋಗಿಗಳು ಮಾತ್ರ ಹಾಗಲ್ಲ. ಅವರು ತಮ್ಮ ತ್ರಿವಿಧ ನಾಮ ಗಳನ್ನು ಅನ್ವರ್ಥಗೊಳಿಸಿದ್ದರು. ಸಾರ್ಥಕಗೊಳಿಸಿದ್ದರು.

ಕಾರಣಿಕ ಕುಮಾರಯೋಗಿಗೆ ಹುಟ್ಟು ಹೆಸರು, ಇಟ್ಟ ಹೆಸರು, ತೊಟ್ಟ ಹೆಸರು ಮೂರು ಇದ್ದವು. ಹಾಲಯ್ಯ ಎಂಬುದು ಹುಟ್ಟು ಹೆಸರು. ಸದಾಶಿವ ಎಂಬುದು ಇಟ್ಟ ಹೆಸರು. ಕುಮಾರ ಎಂಬುದು ತೊಟ್ಟ ಹೆಸರು. ಇವುಗಳಿಗೆ ಕ್ರಮವಿಡಿದು ವ್ಯಾಕರಣಕಾರರು ರೂಢಿನಾಮ ಅಂಕಿತ ನಾಮ ಅನ್ವರ್ಥನಾಮ ಎಂದು ಸಕ್ಕದ ನುಡಿಯಲ್ಲಿ ಹೇಳುವರು. ಇವು ಗಳಲ್ಲಿ ಹುಟ್ಟುನಾಮ ತೊಟ್ಟನಾಮಗಳು ಅನೇಕರಿಗೆ ಇರುವುದಿಲ್ಲ. ಸಾರ್ವ ಜನಿಕವಾದ ಅಂಕಿತ ನಾಮದೊಡನೆ ಅವೆರಡನ್ನು ಪಡೆದವರು ವಿರಳ. ಪಡೆದರು ಸಾರ್ಥಕಪಡಿಸುವವರು ತೀರ ವಿರಳ.

ಕುಮಾರಯೋಗಿಗಳವರ ವಿಷಯದಲ್ಲಿ ಕ್ರಮದಿಂದ ಒಂದೊಂದಾಗಿ ವಿವರಿಸಬೇಕಿಲ್ಲ. ಆಗ ಸ್ವಾಮಿಗಳವರ ಕಾರಣಿಕತನ ಕಂಡು ಬರುತ್ತದೆ; ಕಂಗೊಳಿಸಿ ನಿಲ್ಲುತ್ತದೆ.

ಕೆಲವರು ಹುಟ್ಟು ಹೆಸರಿಗೆ ಹೆಚ್ಚಿನ ಮಹತ್ವ ಕೊಡುವುದಿಲ್ಲ. ತಿಳಿದು ನೋಡಿದಲ್ಲಿ ಅದೇ ಹೆಚ್ಚು ಮಹತ್ವದ್ದು. ಏಕೆಂದರೆ ಅದು ವ್ಯಕ್ತಿಯ ನಿಸರ್ಗ ಜನ್ಯ ಸ್ವಭಾವದಿಂದ ಬಂದಿರುತ್ತದೆ. ಅದು ಕೊನೆಗು ಆತನ ಪ್ರಕೃತಿ ಸ್ವಭಾವವನ್ನೇ ತೋರಿಸುತ್ತದೆ. ಅಂತೆಯೆ ಜ್ಯೋತಿಷ್ಕರು ಜಾತಕರು ಹುಟ್ಟು ಹೆಸರನ್ನೇ ಅಪೇಕ್ಷಿಸುತ್ತಾರೆ. ಅದರಿಂದ ವ್ಯಕ್ತಿಯ ಆಜನ್ಮ ಆಗುಹೋಗ ಗಳನ್ನು ಬಹುಮಟ್ಟಿಗೆ ನೈಜವಾಗಿ ಚಿತ್ರಿಸುತ್ತಾರೆ. ಹುಟ್ಟು ಹೆಸರಿಲ್ಲದೆ ಇಟ್ಟ ಹೆಸರಿನಿಂದ ಬರೆದ ಜಾತಕಗಳು ಸಮರ್ಪಕವಾಗಿ ಬರುವುದಿಲ್ಲ. ಅವುಗಳ ದಾರಿಯೆ ಬೇರೆ. ವ್ಯಕ್ತಿಯ ಜೀವನ ಕ್ರಮವೆ ಬೇರೆಯಾಗಿ ಪರಸ್ಪರ ಸಂಬಂಧ

ವಿಲ್ಲವೆಂತಿರುವ ಉದಾಹರಣೆಗಳು ನೂರಕ್ಕೆ ನೂರೆಂದು ಹೇಳಿದರೆ ನಿಜಕ್ಕೆ ಹೊರಗಾಗುವುದಿಲ್ಲ, ಇರಲಿ.

ಸ್ವಾಮಿಗಳವರ ಹುಟ್ಟು ಹೆಸರು ಹಾಲಯ್ಯ. ಹುಟ್ಟಿದೊಡನೆ ಹಾಲು ಕುಡಿಯದ ಕಾರಣದಿಂದ ಹಾಲಯ್ಯನೆಂದರು. ಈ ಹೆಸರಿಟ್ಟು ಭಸಿತ ಧರಿಸಿದ ಮೇಲೆ ಮಗು ಹಾಲು ಕುಡಿಯಿತು. ಆಗಲೆ ಹೆಸರು ಸಾರ್ಥಕವಾಯಿತು. ಆ ಮೇಲೆಯು ಆಗಿದೆ.

ಹಾಲಯ್ಯನೆಂಬ ಹಾಲು ಮೊದಲು (ಬಾಲ್ಯದಲ್ಲಿ) ಕಷ್ಟ ಕಾರ್ಪಣ್ಯಗಳ ಕೆಂಡದಿಂದ ಚನ್ನಾಗಿ ಕಾಯಿತು. ಅನಂತರ ಅಷ್ಟ ಸ್ವಷ್ಟ ವಿದ್ಯೆಯ ವಾತಾವರಣದಿಂದ ಬಿಸಿ ಆರಿತಾದರು ಪೂರ್ಣ ತಣ್ಣಗಾಗಲಿಲ್ಲ. ಉಗುರು ಬೆಚ್ಚಗೆ ಇರುವಾಗಲೆ ಹೆಣ್ಣೆಂಬ ಹುಳಿಯು ಒಂದು ಹನಿ ಹಾಲಿನಲ್ಲಿ ಬಿದ್ದಿತು. (ವಿರತಿಯ ಪ್ರಕರಣದಲ್ಲಿ ನೋಡಿ.) ಹುಬ್ಬಳ್ಳಿಯ ಆಧಾರ ಪಾತ್ರೆಯಲ್ಲಿ ಅದು ಹೆಪ್ಪುಗೊಂಡಿತು. ಎಳಂದೂರು ಶ್ರೀ ಬಸವಲಿಂಗ ಸ್ವಾಮಿಗಳವರ ಯೋಗದಂಡವು ಮಂಥನ ದಂಡವಾಗಿ ಹೆಪ್ಪಾದ ಆ ಮೊಸರನ್ನು ಕಡೆಯಿತು. ವೇದಾಂತದ ಕಟು ಹುಳಿಯು ಮಜ್ಜಿಗೆ ಬೇರಾಯಿತು. ಶಿವಯೋಗದ ಬೆಣ್ಣೆ ತಯಾರಾಯಿತು. ಬೆಣ್ಣೆ ಕರಗಲು ಬೆಂಕಿ ಬೇಡವೆ? ಆದರೆ ಮೊದಲು ಹಾಲು ಕಾಯಿಸಿದ ಕಷ್ಟ ಕಾರ್ಪಣ್ಯದ ಕೀಳು ಜ್ವಾಲೆ ಬೇಕಾಗಿರಲಿಲ್ಲ. ಇಲ್ಲಿ ಬೇಕಾದುದು ತಪೋಜ್ವಾಲೆ. ಅದಕ್ಕಾಗಿ ಶಂಭುಲಿಂಗನ ಬೆಟ್ಟಕ್ಕೆ ಹೋಗಿ ಅಲ್ಲಿ ತಪೋಜ್ವಾಲೆಯನ್ನು ಸಂಗ್ರಹಿಸಿ ಬೆಣ್ಣೆ ಕರಗಿ ಕಂಪು ತುಪ್ಪಾಯಿತು. ಆಗ ಸಮಾಜ ಪುರುಷನು ಬೇಕಾದಷ್ಟು ಧನಧಾನ್ಯ ಹೊಲ ಮನೆ ದನಗಳೆಂಬ ಪಂಚಪಕ್ವಾನ್ನಗಳಿಂದ ಭರಿತನಾಗಿ ಸಜ್ಜಿತನಾಗಿ ಕುಳಿತಿದ್ದನು. ಆ ಪಂಚಪಕ್ವಾನ್ನ ಭೋಜನಕ್ಕೆ (ತ್ಯಾಗಕ್ಕೆ) ಮುಖ್ಯವಾದ ತುಪ್ಪವಿರಲಿಲ್ಲ. ಯಾವ ಪಕ್ವಾನ್ನಗಳಿದ್ದರೇನು? 'ಘೃತಂ ವಿನಾ ಭೋಜನಮಪ್ರಶಸ್ತಂ' ಅಲ್ಲವೆ? ತುಪ್ಪದ ಹಾಲಯ್ಯನು ಸಮಾಜದಲ್ಲಿ ಬೆರೆದು ತ್ಯಾಗ ಭೋಗ ಮಾಡಿಸಿ ಸಮಾಜಕ್ಕೆ ಸುಯೋಗವೊದಗಿಸಿದನು. ಆಹ, ಏನು ಸಾರ್ಥಕವಾದ ಹೆಸರಿದು? ಎಷ್ಟು ಸಮಂಜಸವಾದ ನಾಮವಿದು? ಹೀಗೆ ಹುಟ್ಟು ಹೆಸರನ್ನು ಸಂಪೂರ್ಣ ಸಾರ್ಥಕಗೊಳಿಸಿದ ಕಾರಣಿಕ ಹಾಲಯ್ಯ.

ಇಟ್ಟ ಹೆಸರು ಸದಾಶಿವ. ಇದನ್ನು ಇಟ್ಟವರು ಬಸವನೀಲಾಂಬೆಯರು.

ಅಂದ ಬಳಿಕ ಇದೂ ಸಾರ್ಥಕವಾಗದೆ ಉಳಿದೀತೆ? ಸಾಮಾನ್ಯ ಗೃಹಸ್ಥ ತಮ್ಮ ಮಕ್ಕಳಿಗೆ ಮನಸ್ಸಿಗೆ ಬಂದ ಹೆಸರುಗಳನ್ನು ಪ್ರೇಮಕ್ಕಾಗಿ ಅಂದಕ್ಕಾ ಇಟ್ಟುಬಿಡುತ್ತಾರೆ. ಅವರ ಉದ್ದೇಶ - ಯೋಜನೆಗಳು ಸರಿಯಾದ ಇರುವುದಿಲ್ಲ. ಅದರಿಂದಾಗಿ ಮೃತ್ಯುಂಜಯ ಎಂದಿಟ್ಟು ಮೂರು ದಿನದಲ್ಲಿಂ ಮಣ್ಣಿಗೆ ಕಳಿಸುತ್ತಾರೆ ಸುಶೀಲೆ - ವಿಮಲೆ ಎಂದಿಟ್ಟು ದುರಾಚಾರಗ ಗೀಡಾಗಿರುತ್ತಾರೆ, ಈಡಾಗುತ್ತಾರೆ. ಸ್ವಾಮಿಗಳವರ ತಾಯಿ ತಂದೆಗ ಹಾಗಾಗಿಸಲಿಲ್ಲ. ಸ್ವಾಮಿಗಳು ಹಾಗಾಗಲಿಲ್ಲ.

ಪ್ರಪಂಚದ ಪಂಚಕೃತ್ಯ ಕರ್ತರಾದ ಪಂಚಮೂರ್ತಿಗಳಲ್ಲಿ ಸದಾಶಿವ ಸ್ಥಾನ ಉನ್ನತವಾದುದು, ಉದಾತ್ತವಾದುದು. ಶಾಂತ್ಯತೀತಕಲೆಯಿಂ ಮನೋನ್ಮನೀ ಶಕ್ತಿಯಿಂದ ಆಕಾಶತತ್ವದಲ್ಲಿ ದಿವ್ಯತೇಜೋವಂತನಾ ಅನುಗ್ರಾಹಕನಾಗಿ ರಾರಾಜಿಸುತ್ತಾನೆ. ಇದರಿಂದ ಜಗದನುಗ್ರಹ ಕಾರಕ ಸದಾಶಿವನೆಂಬುದು ಸುಸ್ಪಷ್ಟವಾಗುತ್ತದೆ.

ಇಂತಹ ಅಮೋಘವಾದ ಅಸದೃಶವಾದ ಹೆಸರನ್ನು ತೊಟ್ಟ ಕಾರಣಿ ಸದಾಶಿವನು ಸಹ ಇದೇ ಹೆದ್ದಾರಿಯಲ್ಲಿ ಹೆಜ್ಜೆಯಿಕ್ಕಿ ಪ್ರಪಂಚವನ್ ಉದ್ಧರಿಸುವ ತನ್ನ ನಡೆನುಡಿಗಳಿಂದ ದೇಹ ಮಾತ್ರದಲ್ಲಿ ಆತ್ಮವು ಅಡಗಿ ಬೆಳಗುವಂತೆ ಸಮಾಜದ ಎಲ್ಲೆಕಟ್ಟಿನಲ್ಲಿದ್ದು ನೋಜ್ವಲವಾಗಿ ಬೆಳಗಿದ್ದಾ ಕಾರಣಿಕ ಸದಾಶಿವನಲ್ಲಿಯೂ ಆ ಶಾಂತ್ಯತೀತವಾದ ಕಲೆಯಿತ್ತ ಮನೋನ್ಮನೀ ಶಕ್ತಿಯಿತ್ತು. ಕರ್ಮಭೂಮಿಯಲ್ಲಿ - ಕಾರ್ಯಕ್ಷೇತ್ರದಲ್ಲಿ ಇದ ಇಲ್ಲದಂತಿದ್ದು ಯಾವ ಲೇಪವಿಲ್ಲದೆ - ಲೋಪವಿಲ್ಲದೆ ಕಾರಣಿಕ ಕುಮಾರ ಆಕಾಶ ತತ್ವವನ್ನು ಅಳವಡಿಸಿಕೊಂಡಿದ್ದನೆಂಬುದನ್ನು ಅವರನ್ನು ಕಂಡವ ಅದೆಂದಿಗೂ ಒಪ್ಪದಿರರು. ಅವರಿಂದ ಅನುಗ್ರಹೀತವಾಗದ ವಿಷಯವಿ ಅನುಗ್ರಹೀತವಾಗದ ವ್ಯಕ್ತಿಯಿಲ್ಲ. ಹುಟ್ಟಿದ ಮನೆ, ಮೆಟ್ಟಿದ ನಾಡ ಮುಟ್ಟಿದ ವಸ್ತು, ದಿಟ್ಟಿಸಿದ ವ್ಯಕ್ತಿ ಎಲ್ಲವು ಅವನ ಅನುಗ್ರಹಕ್ಕೆ ಪಾ ವಾದವು, ಪವಿತ್ರವಾದವು.

ಆ ಸದಾಶಿವನು ಬ್ರಹ್ಮ ವಿಷ್ಣು ರುದ್ರ ಈಶ್ವರರಿಗೆ ಆದಿಯಾಗಿ ಸಾ ಯಾಗಿ ಇರುವಂತೆ ಈ ಕಾರಣಿಕ ಸದಾಶಿವನು ಭಕ್ತಿ, ಗುರು ಲಿಂಗ ಜಂಗ ಶ್ರೇಣಿಗೆ ಆದಿಯಾಗಿ ಆದರ್ಶವಾಗಿ ಇದ್ದನು. ಬ್ರಹ್ಮ ವಿಷ್ಣು ರುದ್ರ ಈಶ

ರಲ್ಲಿರುವ ಆ ಆ ಕಲೆ ಶಕ್ತಿ ತತ್ವ ಕೃತ್ಯಗಳು ಕ್ರಮವಾಗಿ ಭಕ್ತಿ ಗುರು ಲಿಂಗ ಜಂಗಮರಲ್ಲಿವೆಯೆಂದು ಭಾವಿಸಬೇಕು. ಹಾಗೆ ಉಳ್ಳವರೆ ನಿಜವಾದ ಭಕ್ತ ಗುರು ಲಿಂಗ ಜಂಗಮರು. ಅಂತಹ ಸ್ಥಿತಿಯು ಹಾಳಾಗಿತ್ತು. ಅವನ್ನೆಲ್ಲ ಸದಾಶಿವ ಯೋಗಿಯು ಅವರವರಲ್ಲಿ ಅನುಗ್ರಹಿಸಿ ಅವರವರನ್ನು ಉದ್ಧರಿಸಿದನು; ಉದಾರನೆಂದೆನಿಸಿದನು. ಇದಕ್ಕಿಂತಲು ಸದಾಶಿವನಾಮಕ್ಕೆ ಸಾರ್ಥಕ್ಯವಿದೆಯೆ, ಸಾರೂಪ್ಯವಿದೆಯೆ? ಈ ಬಗೆಯಾಗಿ ಇಟ್ಟ ಹೆಸರನ್ನು ಗಟ್ಟಿಗೊಳಿಸಿದ ಸದಾಶಿವಸ್ವಾಮಿ ಕಾರಣಿಕನಲ್ಲವೆ ?

ಹಾನಗಲ್ಲ ಮಠದ ಪಟ್ಟಾಧಿಕಾರವಾದ ಮೇಲೆ ತೊಟ್ಟ ಹೆಸರು ಕುಮಾರ. ತಮ್ಮ ಗುರುಗಳೊಬ್ಬರಿಗೆ ಸದಾಶಿವನು ಕುಮಾರನಾಗಲಿಲ್ಲ. ತನ್ನ ವಿಶಾಲ ಕಾರ್‍ಯಕ್ಷೇತ್ರದಿಂದ ಸಮಾಜಕ್ಕೆಲ್ಲ ಕುಮಾರನಾದ. ಕನ್ನಡ ನಾಡಿಗೆಲ್ಲ ಕುಮಾರನಾದ. ಸಮಾಜ ಅವನ ಮನೆಯಾಯಿತು. ನಾಡು ಮಠವಾಯಿತು. ಅವುಗಳ ಧರ್ಮ ಸಾಹಿತ್ಯ ಸಂಸ್ಕೃತಿಗಳ ಏಳಿಗೆಯೆ ಕುಮಾರಯೋಗಿಯ ಅರ್ಥಾರ್ಜನವಾಯಿತು.

ಅವರ ಕೌಮಾರತನ ಇಷ್ಟಕ್ಕೆ ಮುಗಿಯಲಿಲ್ಲ. ಆರು ಮುಖವಾಗಿ ಕೆಲಸ ಮಾಡಿ ಕುಮಾರಯೋಗಿಯು ಷಣ್ಮುಖಸ್ವಾಮಿಯಾದನು. ಕಾರ್‍ಯರಂಗದಲ್ಲಿಳಿದು ಕೆಲಸ ಮಾಡುವಾಗ ನಿಜವಾಗಿಯು ಸ್ವಾಮಿಗಳವರಿಗೆ ಒಂದು ಮುಖ ಸಾಲುತ್ತಿರಲಿಲ್ಲ. ಆ ಷಣ್ಮುಖಸ್ವಾಮಿಯು ಬಾಲ್ಯದಲ್ಲಿಯೆ ಮಂತ್ರಾರ್ಥ ಶಿಕ್ಷಣದಲ್ಲಿ ಬ್ರಹ್ಮನನ್ನು ತಂದೆಯನ್ನು ಸಹ ಮೀರಿ ನಿಂತಂತೆ ಆ ಬುದ್ಧಿಮತ್ತೆಯು ಈ ಕುಮಾರಸ್ವಾಮಿಯಲ್ಲಿಯು ಇತ್ತು. ಇವರ ಅಪಾರ ಅನುಭವದ ಮುಂದೆ ಬ್ರಹ್ಮನ ಅನುಭವವೂ ಬಾಳಿಕೆಬಾರದು. ಇದರಿಂದಾಗಿ ಕುಮಾರಯೋಗಿಯು ಶಿವನ ಕುಮಾರನಾದನು.

ಯಾವಾಗಲು ಕುಮಾರರಾದವರು ಇಹಕೆ ತಂದ ತನ್ನ ತಂದೆಯ ಅನುಸರಣೆಯನ್ನು ಮಾಡುವಂತೆ ಕುಮಾರಯೋಗಿಯು ಯಾವಾಗಲು ಪರಕೆ ತಂದ ತಂದೆಯಾದ ಶಿವನಾಮ ಸ್ಮರಣೆಯನ್ನು ಶಿವಾಚಾರದ ಆಚರಣೆಯನ್ನು ಶಿವಾಗಮ ವಚನಾನುಸರಣೆಯನ್ನು ಬಿಡದೆ ಅನುಷ್ಠಿಸಿ ಬಾಳಿದನು. ಇದರಿಂದಾಗಿ ಕುಮಾರಯೋಗಿಯು ಅನ್ವರ್ಥನಾಮನಾದನು, ಪರಮಾರ್ಥಧಾಮನಾದನು.

# ಕೊನೆಮಾತು

ಬಾಳು ಬದುಕಿನ ಗುರಿಯಿಲ್ಲದೆ ತಿರಿದುಂಡು ತಿರುಗುವುದೆ ತುಂಬಿಬಂದರೆ ಮಣ್ಣುಪಾಲಾಗುವುದೆ ಜೀವನವೆಂದು ಭ್ರಮಿಸಿ ಜೀವನ್ಮೃತರಾಗಿ ಬಳಲುವ ಮಾನವ ಜನಾಂಗವನ್ನು ಎಚ್ಚರಿಸಿ ಉದ್ಧರಿಸಲು ಅವತರಿಸಿದ ಅನೇಕ ಮಹಾನುಭಾವರಲ್ಲಿ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ಅಗ್ರಗಣ್ಯರು ; ಅಸದೃಶರು. ಅವರು ತಮ್ಮ ಜೀವನದ ಕಷ್ಟ ಕಾರ್ಪಣ್ಯಗಳ ದೆಸೆಯನ್ನು ವಿದ್ಯೆಯ ಪ್ರಭಾವದಿಂದ ವಿಚ್ಛೇದಿಸಿ ಮುಂದುವರಿದ ಕಾರಣ ಅದೆ ದಾರಿಯಲ್ಲಿದ್ದ ಜನಾಂಗದ ಕಷ್ಟಸುಖಗಳು ಅವರ ಕಣ್ಣು ಮುಂದೆ ಕಾಣಿಸಿದವು. ಅವಿದ್ಯೆಯಿಂದ ಒಬ್ಬ ವ್ಯಕ್ತಿಗೆ ಇಷ್ಟೊಂದು ತೊಂದರೆ ಯೊದಗಿದಾಗ ಇಡೀ ಸಮಾಜವೆ ಅಜ್ಞಾನಾಂಧಕಾರದಲ್ಲಿ ದಾರಿಕಾಣದೆ ತೊಳಲುವ ವಿಕಾರ ಸ್ವರೂಪ ಅವರ ಕಣ್ಣು ಮುಂದೆ ಕಟ್ಟಿದಂತಾಗಿ ಅವಿದ್ಯಾ ಪರಿಹಾರಕ್ಕಾಗಿ ಧರ್ಮಜಾಗೃತಿಗಾಗಿ ಸಂಗೀತ ಸಾಹಿತ್ಯಾದಿ ಕಲೆಗಳ ಜೀರ್ಣೋದ್ಧಾರಕ್ಕಾಗಿ ತಮ್ಮ ತನು ಮನ ಧನಗಳನ್ನು ಮೀಸಲಿಕ್ಕಿದರು ; ಅರ್ಥಪ್ರಾಣಾಭಿಮಾನಗಳನ್ನು ಸೂರೆಗೊಂಡರು.

ಅಂತಹ ಕಾರಣಿಕನು ಕಣ್ಮರೆಯಾಗಿ ಇಪ್ಪತ್ತು ವರುಷಗಳಾದರು ಆವರ ವಿಷಯದಲ್ಲಿ ತೃಪ್ತಿಕರವಾದ ರಚನೆಯಿಲ್ಲ; ಪ್ರಚಾರವಿಲ್ಲ. ಇಲ್ಲದಿದ್ದರು ಆ ಕಾರಣಿಕ ಪುರುಷನ ಹೊಂಗಿರಣಗಳ ಹೊಂಬೆಳಗು ಹರಡದೆ ಬಿಡು ವಂತಿಲ್ಲ. ಅದು ಅವುಗಳ ನಿಸರ್ಗಗುಣ. ಮೇಘಗಳ ಮುಸುಕು ಎಷ್ಟು ಹೊತ್ತಿನದು ? ಅವರ ಕ್ರಿಯಾಶಕ್ತಿ ಧರ್ಮರಕ್ತಿ ಮಾನವೋದ್ಧಾರಾಸಕ್ತಿಯ ಬಿರುಗಾಳಿಯು ಆ ಮೇಘಗಳನ್ನು ಚದುರಿಸಿ ಓಡಿಸಲು ತುಂಬಾ ಸಮರ್ಥ ವಾಯಿತು. ಅದರಿಂದಾಗಿ ಸಮಾಜದಲ್ಲಿ ವಿದ್ಯುದ್ವೇಗದಿಂದ ಪ್ರಭೆಯು ಪ್ರಕಾ ಶಿಸಿತು. ಸರ್ವಸತ್ಕ್ರಿಯೆಗಳನ್ನು ತೋರಿಸಿತು. ಅಂಧಕಾರದಲ್ಲಿದ್ದ ಸಮಾಜ ಬೆಳಗನು ಕಂಡಿತು. ಗೊತ್ತು ಗುರಿಗಳನು ಅರಿಯಿತು. ಜಗಚ್ಚಕ್ಷುವಿನ

ಉದಯದಿಂದ ಜಗತ್ತು ಚೇತನಗೊಳ್ಳುವಂತೆ ಕಾರಣಿಕ ಕುಮಾರನ ಉದಯ ದಿಂದ ಸಮಾಜ ಸಚೇತನಗೊಂಡಿತು, ಸತೇಜಗೊಂಡಿತು.

ವಿದ್ಯಾರ್ಜನೆಗೆ ತಾವು ಪಟ್ಟ ಕಷ್ಟವನ್ನು ಕಾರ್ಪಣ್ಯವನ್ನು ಇನ್ನಾರು ಪಡಬಾರದೆಂಬ ಸಂಕಲ್ಪದಿಂದ ಸಕಲ ವಿಧದಲ್ಲಿ ಸಾಹಸಪಟ್ಟು ಅಲ್ಲಲ್ಲಿ ಪಾಠಶಾಲೆಗಳನ್ನು ಪ್ರಸ್ಥಾಪಿಸಿ ಪ್ರಾರಂಭಿಸಿದರು. ವಿದ್ಯಾಭ್ಯಾಸಿಗಳಿಗೆ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು. ಆರ್ಥಿಕ ಸಹಾಯವನ್ನು ಅಮೃತಹಸ್ತ ದಿಂದ ಅನೇಕರಿಗೆ ಅನುಗ್ರಹಿಸಿದರು.

ಕನ್ನಡ ವಾಙ್ಮಯದಲ್ಲಿ ರನ್ನಗಳಂತಿರುವ ವಚನರಾಶಿಯನ್ನು ತಾಳೆ ಗರಿಗಳಿಂದ ಈಚೆಗೆ ತೆಗೆದವರೆ ಇರಲಿಲ್ಲ. ಆಗ ಸ್ವಾಮಿಗಳವರು ಸುತ್ತಿ ಸುಳಿದು ಇದ್ದಲ್ಲಿಂದ ಬಿದ್ದಲ್ಲಿಂದ ಸಂಗ್ರಹಿಸಿದರು. ಓದಿ ಓದಿಸಿದರು. ತಿದ್ದಿ ಬರೆಯಿಸಿದರು. ಪ್ರಕಟ ಪಡಿಸಲು ಪ್ರಾರಂಭಿಸಿದರು. ಶ್ರೀಮಾನ್ ಹಳಕಟ್ಟಿಯವರು ಅದೇ ಕೆಲಸವನ್ನು ಮುಂದುವರಿಸಿ ಅದರ ಪರಿಪೂರ್ಣ ಫಲವನ್ನು ಪಡೆದರು.

ಸಮಾಜದಲ್ಲಿ ನಂದಿಹೋದ ಜ್ಯೋತಿಷ್ಯದ ಜ್ಯೋತಿಯನ್ನು ಸ್ವಾಮಿ ಗಳವರು ಅಂಟಿಸಿದರು. ಅಲ್ಪ ಕಾಲದಲ್ಲಿಯೆ ಅದು ಮಹಾಜ್ಯೋತಿಯಾಗಿ ಬೆಳಗಿತು. ಇದರಿಂದಾಗಿ ದಿಕ್ಕು ದೆಸೆಗಳ ಕಾಲ ಶೂಲಗಳ ಗತಿ ದುರ್ಗತಿಗಳ ಶುಭಾಶುಭಗಳ ಮಳೆ ಗಾಳಿಗಳ ಸಂಗತಿಯನ್ನು ತಿಳಿದು ಸಾಮಾಜಿಕರು ಮುನ್ನಡೆವಂತಾಯಿತು. ಇದಕಾಗಿ ಮತ್ತೊಬ್ಬರ ಮನೆಗೆ ಹೋಗದಂತಾ ಯಿತು. ಸಮಾಜದಲ್ಲಿ ಸ್ವಾಮಿಗಳವರಿಂದ ಜ್ಯೋತಿಷಿಗಳ ಸಂಖ್ಯೆ ಹೆಚ್ಚಿತು. ಸಮಾಜಹಿತೈಷಿಗಳಾಗಿ ಬಾಳಿದರು ; ಬಾಳುತ್ತಿರುವರು. ಯಾವುದೆ ವಿಷಯ ವಾಗಲಿ ಅದರಲ್ಲಿ ಪಾರತಂತ್ರ್ಯವಿರಬಾರದು. ಸರ್ವಸ್ವಾತಂತ್ರ್ಯವಿರಬೇಕು ಎಂಬ ತತ್ವದವರು ಸ್ವಾಮಿಗಳವರು. ಇದರಿಂದ ಈ ಕಾರ್ಯವನ್ನು ಕಲಾ ಪೂರ್ಣವಾಗಿ ಸಮಾಜದಲ್ಲಿ ಬೆಳಸಿದರು.

ಹಳ್ಳಿಹಳ್ಳಿಗೆ ಸುತ್ತಿ ಧರ್ಮ ನೀತಿ ಆಚಾರ ವಿಚಾರ ಬೋಧಿಸಿದರು. ವ್ಯಾಜ್ಯಗಳಿಂದ ವ್ಯರ್ಥವಾಗಿ ಅರ್ಥವನ್ನು ಹಾಳು ಮಾಡಿಕೊಳ್ಳುವುದಲ್ಲದೆ ತಮ್ಮ ಜೀವನದ ಸಾರ್ಥಕ್ಯವನ್ನು ಕಾಣದವರಿಗೆ ತಿಳಿಹೇಳಿ ಕೋರ್ಟಿಗೆ ಹೋಗುವ ವ್ಯಾಜ್ಯಗಳನ್ನೆಲ್ಲ ತಾವೆ ಪರಿಹರಿಸಿ ಜನದ ಆರ್ಥಿಕದ ಮಟ್ಟವನ್ನು ಸುಧಾರಿಸಿದರು. ವ್ಯರ್ಥವಾಗಿ ವೆಚ್ಚವಾಗುವುದನ್ನು ನಿಲ್ಲಿಸಿದರು. ಸಾರ್ಥಕ

ಕಾರ್ಯಗಳಿಗೆ ವಿನಿಯೋಗಿಸಲು ಉಪದೇಶಿಸಿದರು. ಧಾನ ಧರ್ಮ ಕಲೆ ಕೈಗಾರಿಕೆ ಸಾಹಿತ್ಯ ಸಂಗೀತ ವೈದ್ಯ ಮೊದಲಾದ ಶ್ರೇಷ್ಠ ಸಂಸ್ಕೃತಿಯತ್ತ ಸಮಾಜದ ಗಮನವನ್ನು ಚನ್ನಾಗಿ ಸೆಳೆದರು. ತಾವು ಅವುಗಳ ಪುನರುದ್ಧಾರ ಕಾರ್ಯವನ್ನು ಮಾಡಿದರು ; ಕೃತಕೃತ್ಯರಾದರು.

ಸಮಾಜದ ಬೌದ್ಧಿಕ ದಾಸ್ಯತೆ, ಆರ್ಥಿಕ ದಾಸ್ಯತೆ, ಧಾರ್ಮಿಕ ದಾಸ್ಯತೆ ಗಳನ್ನು ನಿರ್ಮೂಲ ಗೊಳಿಸಿದ ಕೀರ್ತಿ ಕುಮಾರ ಯೋಗಿಗಳವರದು. ಈ ದಾಸ್ಯತ್ರಯಗಳಿಂದ ಸಮಾಜ ಪ್ರಗತಿ ಪ್ರಭಾವಶಾಲಿಯಾಗಿರಲಿಲ್ಲ. ದಾಸ್ಯದ ದಳ್ಳುರಿಯಲ್ಲಿ ಸಮಾಜ ಬೆಂದು ಹೋಗಿತ್ತು ; ಬೂದಿಯಾಗಿತ್ತು. ಪರಸಮಾಜ ಗಳಲ್ಲಿ ಪರಿಹಾಸಕ್ಕೆ ಪ್ರಾರಂಭವಾಗಿತ್ತು. ಇವನ್ನೆಲ್ಲ ತಪ್ಪಿಸಿ ಸಮಾಜವನ್ನು ಸರ್ವಸ್ವತಂತ್ರವನ್ನಾಗಿ ಉಜ್ವಲ ತೇಜೋವಂತಾಗಿ ಸ್ವಾಮಿಗಳವರು ಮಾಡಿ ಸ್ತುತ್ಯರ್ಹರಾದರು.

ರಣರಂಗದಲ್ಲಿ ಕಾದುವ ರಾಜನು ತನ್ನ ಯೋಧರನ್ನು ಕಳೆದು ಕೊಂಡರು ತನ್ನ ರಾಜತೇಜವನ್ನು ಕಳೆದುಕೊಳ್ಳದಂತೆ ಸ್ವಾಮಿಗಳವರು ಸಾಮಾಜಿಕ ಸಮುನ್ನತಿಯ ಹೋರಾಟದಲ್ಲಿ – ಶಿವಯೋಗಮಂದಿರ ಸಂಸ್ಥೆಯ ಸ್ಥಾಪನೆಯ ಭೂಮಿಕೆಯಲ್ಲಿ ಅನೇಕ ಸಹಾಯಕರನ್ನು ಸಹಕಾರಿ ಗಳನ್ನು ಕಳೆದುಕೊಂಡರು ಎದೆಗುಂದದೆ ಎಣಿಕೆಗೆ ಸಿಲುಕದ ಎದೆಗಾರಿಕೆ ಯಿಂದ ಮುನ್ನುಗ್ಗಿದರು. ಕೈಕೊಂಡ ಕಾರ್ಯಗಳನ್ನು ಕೊನೆಗಾಣಿಸಿ ಕಾರಣಿಕರಾದರು.

ಕೆಡಕು ನಡೆಗಳಿಂದ ಇಡೀ ಪ್ರಪಂಚವೆ ಕೇಡಿಗೀಡಾಗಿ ಹೋಗುವಾಗ ಒಂದು ನಾಡಿನ ಒಂದು ಸಮಾಜದ ಮಾತೇನು ? ಈ ಪರಿಸ್ಥಿತಿಗೆ ಸಿಕ್ಕುಬಿದ್ದ ಒಂದು ಕನ್ನಡನಾಡನ್ನೆ ಆವರಿಸಿದ್ದ ವೀರಶೈವ ಸಮಾಜವನ್ನು ಆ ಕೇಡಿನಿಂದ ಕಡೆಗೆಳೆದು ಸರ್ವೋದಯದ ಸುಸ್ಥಿತಿಗೆ ತರಬೇಕಾದರೆ ಕಾರಣಿಕನಾದ ಕುಮಾರಯೋಗಿಗಲ್ಲದೆ ಸರ್ವಸಾಮಾನ್ಯರಿಂದ ಶಕ್ಯವೆ ? ಆ ಮಹಾಕಾರ್ಯವು ಮನಮೆಚ್ಚುವ, ಜನಮೆಚ್ಚುವ ಮಟ್ಟಕ್ಕೆ ಬರಬೇಕಾದರೆ ಒಂದು ದಿನದ ಒಂದು ವರುಷದ ಸಾಧನ ಸಾಕಾದೀತೆ ? ಸ್ವಾಮಿಗಳವರು ಅವಿಶ್ರಾಂತವಾಗಿ ಅಖಂಡವಾಗಿ ತಮ್ಮ ಅರವತ್ತು ಮೂರು ವರುಷಗಳಲ್ಲಿ ನಾಲವತ್ತೆರಡು ವರುಷ ಸಾಹಸಗೈದರು ; ಸಾಲದೆಂದರು.

ಒಣಗಿ ನಿಂತ ಮರುಭೂಮಿಯನ್ನು ತೋಯಿಸಿ ಮೃದುಗೊಳಿಸ ಹೊರಟ ಮಳೆಯ ವೇಳೆಯಲ್ಲಿ ಅದೇನು ಗುಡುಗಾಟ, ಅದೆಂತಹ ಸಿಡಿಲು ಹೊಡೆದಾಟ. ಅದರಂತೆ ದುರಾಚಾರ ದುರ್ವಿಚಾರ ಬೇಗೆಯಿಂದ ಬೆಂದು ಬೆಂಡಾದ ಜನಾಂಗದ ಹೃದಯಭೂಮಿಯನ್ನು ಸದಾಚಾರ ಸದ್ವಿಚಾರ ವರ್ಷಣದಿಂದ ಮಿದುವುಗೊಳಿಸಹೊರಟಾಗ ಉಂಟಾದ ದೂಷಕರ ಗುಡುಗುಗಳ ವಿಘ್ನಕಾರಿಗಳ ಸಿಡಿಲು ಹೊಡತಗಳ ಅಬ್ಬರವೇನು ಅಲ್ಪ ವಾಗಿರಲಿಲ್ಲ. ಅವನ್ನೆಲ್ಲ ನಿಗ್ರಹಿಸಿ ನಿಂತು ಶಾಂತಿಯಿಂದ ಸತ್ಯದ ಸುರಿಮಳೆಯನ್ನು ಸುರಿಸಿದ ಸ್ವಾಮಿಗಳವರ ಸ್ಥೈರ್ಯ ಧೈರ್ಯಗಳನ್ನು ಊಹಿಸಲಳವಲ್ಲ. ವರ್ಣಿಸಲು ವಾಣಿಯಿಲ್ಲ. ಕಾರಣಿಕ ಕಲಿತನಕ್ಕಲ್ಲದೆ ಆ ಕಾರ್ಯ ಸಾಧ್ಯವಲ್ಲ.

ವೀರಶೈವ ಸಮಾಜವು ಕನ್ನಡನಾಡನ್ನು ನೀತಿ ನಡತೆಗಳಿಂದ ಸಮತೆ ಸಮಭಾವಗಳಿಂದ ಒಂದಾಗಿ ಮಾಡಹೊರಟು ತನ್ನಲ್ಲಿಯೆ ಆ ತಾತ್ವಿಕ ಗುಣ ಗಳನ್ನು ಉಳಿಸಿಕೊಂಡಿರಲಿಲ್ಲ, ಗಳಿಸಿಕೊಂಡಿರಲಿಲ್ಲ. ಈ ಕೊರತೆಯನ್ನು ಕಳೆಯಲು ವೀರಶೈವಮಹಾಸಭೆ, ಧರ್ಮೋತ್ತೇಜಕ ಸಭೆ, ಶಿವಯೋಗ ಮಂದಿರ ಸಂಸ್ಥೆಗಳಂತಹ ಪ್ರಯೋಗ ಕ್ಷೇತ್ರಗಳನ್ನು ಸ್ಥಾಪಿಸದೆ ವಿಧಿಯಿರಲಿಲ್ಲ. ಅವುಗಳನ್ನು ಕಟ್ಟಿ ಕನ್ನಡ ಜನತೆಯ ನಡತೆಯಲ್ಲಿ ಕಳೆಕಟ್ಟಿಸಿದ ಕಾರಣಿಕನು ಕುಮಾರಯೋಗಿ! ರಕ್ತ ಪಾತವಿಲ್ಲದೆ ಸಾಮಾಜಿಕ ಕ್ರಾಂತಿಯನ್ನು ನೆರ ವೇರಿಸಿದ ಪವಾಡ ಪುರುಷರು ಹಾನಗಲ್ಲ ಸ್ವಾಮಿಗಳವರು. ರಕ್ತಿಪತನ ದಿಂದೆತ್ತಿ ಬಹು ಜನರನ್ನು ವಿರಕ್ತಿ ಮುಕ್ತಿಗೇರಿಸಿದ ಮಹಿಮಾಶಾಲಿಗಳು ಕುಮಾರಯೋಗಿಗಳು. ಸ್ವಾರ್ಥ ಪಾಪಕೂಪದಲ್ಲಿ ಬಿದ್ದವರನ್ನು ಮೇಲಕ್ಕೆತ್ತಿ ಪರಾರ್ಥ ಪುಣ್ಯಪ್ರಾಪ್ತಿಗೆ ಕೀರ್ತಿಗೆ ಕಾರಣರನ್ನಾಗಿ ಮಾಡಿದ ಪವಿತ್ರಾತ್ಮರು ಕುಮಾರ ಶಿವಯೋಗಿಗಳು. ಕ್ರಿಯಾಶೂನ್ಯರಿಗೆ ಕಾರ್ಯರತಿಯನ್ನು ಅಜ್ಞಮತಿ ಗಳಿಗೆ ಅನುಭವದ ಗತಿಯನ್ನು ಉಂಟುಮಾಡಿದ ಉದಾತ್ತ ಚರಿತ್ರರು ಕುಮಾರ ಸ್ವಾಮಿಗಳು.

ಕುಮಾರ ಸ್ವಾಮಿಗಳವರನ್ನು ಶಿವಯೋಗ ಶೀಲರು 'ಶಿವಯೋಗಿ' ಎಂದು ಕರೆಯಲಿ; ಮನಸ್ವಿಗಳು ಮಹಿಮರೆಂದು ಕರೆಯಲಿ, ತಪೋವಂತರು ತಪಸ್ವಿಗಳು ಎಂದು ಹೇಳಲಿ. ನಾವು ಮಾತ್ರ ಆ ಕುಮಾರಯೋಗಿಯನ್ನು

ಕಾರಣಿಕನೆಂದೆ ಭಾವಿಸಿದ್ದೇವೆ. ಮನುಷ್ಯ ಮಾತ್ರರಂತೆ ಮರ್ತ್ಯಕ್ಕೆ ಬಂದು ಸಾಧನೆಯೆ ಸ್ವರ್ಗವೆಂದು ಭಾವಿಸಿ ಕೊನೆ ಉಸಿರಿರುವವರೆವಿಗು ಕಾರ್ಯಕರ್ತ ರಾಗಿಯೆ ಸಾಧನಶೀಲರಾಗಿಯೆ ಸಮಾಜ, ಧರ್ಮ, ಸಾಹಿತ್ಯ ಸಂಸ್ಕೃತಿಗಳನ್ನು ಎತ್ತಿಹಿಡಿದ ಮಹಾವ್ಯಕ್ತಿ ಕಾರಣಿಕನಲ್ಲವೆ ಮತ್ತೇನು ? ಪಾಪಿಗಳನ್ನು ಪವಿತ್ರರನ್ನಾಗಿ ಕಲಾಹೀನರನ್ನು ಕಲಾವಂತರನ್ನಾಗಿ ವಿದ್ಯಾವಿಹೀನರನ್ನು ವಿದ್ಯಾವಂತರನ್ನಾಗಿ ರಾಗಿಗಳನ್ನು ವಿರಾಗಿಗಳನ್ನಾಗಿ ರೋಗಿಗಳನ್ನು ನಿರೋಗಿಗಳನ್ನಾಗಿ ಮಾಡಿದ ಕುಮಾರಯೋಗಿಗೆ ಕಾರಣಿಕನೆಂಬುದರಷ್ಟು ಉಚಿತವಾದುದು ಬೇರೊಂದಿಲ್ಲ ಎಂಬುದೆ ನಮ್ಮ ತಾರ್ಪಾಣ. ಪ್ರತಿಯೊಂದು ಕಾರ್ಯದಲ್ಲಿಯು ಬಂದೊದಗುವ ಎಣೆಯಿಲ್ಲದ ಎಡರು ತೊಡರುಗಳಿಗೆ ಕುಗ್ಗದೆ ಕುಸಿಯದೆ ಕೈಕಟ್ಟಿಕೊಂಡು ಕುಳಿತು ಕೊಳ್ಳದೆ ಇಮ್ಮಡಿ ಮುಮ್ಮಡಿ ನೂರ್ಮಡಿ ಉತ್ಸಾಹದಿಂದ ಚಂಡಿನಂತೆ ಪುಟ ನೆಗೆದು ತಡೆತೊಂದರೆಗಳನೆಲ್ಲ ತರಹರಿಸಿ ಕಾರ್ಯಗಳನ್ನು ಯಶಸ್ವಿಯಾಗಿ ಕೊನೆ ಗಾಣಿಸುವ ಕಲಿಯಾಳು ಕಾರಣಿಕ ಪದವಾಚ್ಯನಲ್ಲವೆ ? ಆತ್ಮ ಚಿಂತನೆ ಯಿಂದ ಸಮಾಜ ಸುಧಾರಣೆಯಿಂದ ಧರ್ಮೋತ್ತರಣದಿಂದ ಸಂತತ ಸತ್ಕಾರ್ಯ ಸಾಧನೆಗಳಿಂದ ಪುಟಕ್ಕಿಟ್ಟ ಚಿನ್ನದಂತೆ ನಿಷ್ಕಳಂಕನಾಗಿ ಬಾಳಿದ ಬೆಳಗಿದ ಆ ಯೋಗಿ ಕಾರಣಿಕನೆ ಅಹುದು. ತಾಸ್ಯೆತಂದ ಮಣಿಹಕ್ಕಾಗಿಯೆ ತ್ರಿಕರಣಗಳನ್ನು ಮುಡಿಪಿಟ್ಟ ಸ್ವಾರ್ಥಸುಖಗಳಿಗೆ ಜಲಾಂಜಲಿ ಬಿಟ್ಟ ಆ ಯತಿಕುಲತಿಲಕನು ಕಾರಣಿಕನೆ ದಿಟ. ಸಂಕುಚಿತ ಧ್ಯೇಯ ಧೋರಣ ಗಳನ್ನು ಇಟ್ಟುಕೊಳ್ಳದೆ ಮಾನವ ಲೋಕವೆ ಎಚ್ಚತ್ತು ಏಳ್ಗೆಗೊಳ್ಳಬೇಕೆಂದು ಕೊನೆಯ ದಿನದ ವರೆವಿಗು ಸಾಧಿಸಿದ್ದಲ್ಲದೆ ಕೊನೆಯುಗಳಿಗೆಯಲ್ಲಿಯು ಅದೇ ಹವ್ಯಾಸ ಹಂಬಲಗಳಿಂದ ವೈದಿಗೆದ ಮಹಿಮನು – ಅದೇ ಧ್ಯೇಯಕ್ಕಾಗಿ ಪ್ರಾಪ್ತ ಮುಕ್ತಿಯನ್ನು ಮೂಲೆಗೊತ್ತಿ ಮರಳಿ ಬರುವ ಮುನ್ನಾಸೆ ತೋರಿದ ಆ ಮಹಾದಾನಿ – ಮಹೋನ್ನತೋದಾರಿ ಮಹಾಕಾರಣಿಕನೆಂಬುದೆ ನಿಜಕ್ಕೂ ನಿಶ್ಚಯ. ಅಂದು ಎಂಟುನೂರು ವರುಷಗಳ ಹಿಂದೆ ಭಕ್ತಿಭಾಂಡಾರಿ ಬಸವಣ್ಣನು ತನ್ನ ಅಪಾರ ಶಕ್ತಿಯಿಂದ ತಿರ್‍ರನೆ ತಿರುಗಿಸಿದ ಜನಜಾಗ್ರತೆಯ ಚಕ್ರವೇಗ ನಿಲ್ಲುವ ಸಮಯದಲ್ಲಿ ಅದೇ ಶಕ್ತಿಯಿಂದ ಮರಳಿ ಅದೇ

ಚಾಲನೆಯನ್ನು ತಂದುಕೊಟ್ಟ ಕುಮಾರಯೋಗಿಯು ಕಾರಣಿಕನೆಂಬುದು ಸಾವಿರಪಾಲಿಗು ಸತ್ಯ.

ಒಟ್ಟಿನಲ್ಲಿ ಆ ಕಾರಣಿಕ ಕುಮಾರಯೋಗಿಯ ಬಾಳು ಸಣ್ಣಬಾಳಲ್ಲ. ಅದೊಂದು ಅನನ್ಯ ಸಾಧಾರಣವಾದ ಬಾಳು; ಅತಿ ದೊಡ್ಡ ಬಾಳು. ಆಜನ್ಮವು ತಪ, ತತ್ವ, ಸೇವೆ, ಸಾಹಿತ್ಯಸಂಗ್ರಹ, ಸಭೆ ಸಂಸ್ಥೆಗಳ ಸ್ಥಾಪನೆ, ಪಾರಪ್ರವಚನ, ಶಿವಾನುಭವ ಮುಂತಾದ ವ್ರತಾಚಾರಗಳಲ್ಲಿಯೆ ಹೆಣಗಿ ಹೋದ ಹಿರಿಯ ಬಾಳು; ಹೆಗ್ಗುರಿಯ ಬಾಳು. ಅವನ್ನು ಅಳೆಯಲು ಅಳತೆಗೋಲಿಲ್ಲ. ಬಣ್ಣಿಸಲು ಬುದ್ಧಿಭಾಷೆಗಳು ಸಾಲವು. ಆ ಆದರ್ಶ ಬಾಳನ್ನು ಯಾವ ಶಬ್ದಗಳಿಂದ ವರ್ಣಿಸಬೇಕೊ ಯಾವ ಕುಂಚಿಸಿಂದ ಹೇಗೆ ಚಿತ್ರಿಸಬೇಕೊ ತಿಳಿಯದು, ತೋಚದು. ಅವರ ದೈಹಿಕ ಮಾನಸಿಕ ಆಧ್ಯಾತ್ಮಿಕ ಪ್ರವೃತ್ತಿ ನಿವೃತ್ತಿಗಳ ಬೆನ್ನುಹತ್ತಿ ಬರೆವ ಬಲ್ಲಿದರ ಕಾಣೆವು. ನಮ್ಮ ಬಡತನ ಬರಹದ ಮಾತೇಕೆ?

ಸ್ವಾಮಿಗಳವರ ಸಾಹಸ ಕಾಲಕಳೆದಂತೆ ಹೆಚ್ಚಿ ಹೆಚ್ಚಾಗುತ್ತಿತ್ತು. ಧೋರಣೆ ದೂರ ಹರಿಯುತ್ತಿತ್ತು. ಸಮಾಜಪ್ರೇಮ ಸಾಂದ್ರವಾಗುತ್ತಿತ್ತು. ಸಾಹಿತ್ಯ ಸಂಗ್ರಹ ಸಾತಿಶಯವಾಗಿನಡೆದಿತ್ತು. ಆತ್ಮ ಚಿಂತನೆಯಲ್ಲಿ ಸಮಯ ಸಿಕ್ಕಿದಾಗಲೆಲ್ಲ ಅವಿರಳೈಕ್ಯರಾಗುತ್ತಿದ್ದರು. ಅವಕ್ಕೆ ಹೊತ್ತಿನ ಗೊತ್ತಿಲ್ಲ; ಕುತ್ತಿಲ್ಲ. ಕುಮಾರಯೋಗಿಗಳು ಪರಮ ಪುಣ್ಯಾತ್ಮರು, ಮೀರಿದ ಮಹಾತ್ಮರು; ಸಾಟಿಯಿಲ್ಲದ ಶಿವಯೋಗಿಗಳು.

ಅವರ ಕ್ರಿಯೆ ಅವರ ಜ್ಞಾನ ಅಪರಿಮಿತವಾದವು. ಕ್ರಿಯಾ ಜ್ಞಾನಗಳೆ ಅವರ ದೇಹಾತ್ಮಗಳು. ಅವುಗಳಲ್ಲಿ ಅವರಿಗೆ ಅವಿಕಲತೆಯಿತ್ತು, ಅವಿರಲತೆಯಿತ್ತು. ಅವುಗಳಿಂದ ಅವರ ಜ್ಯೋತಿ ಜ್ವಲಿಸಿತು, ಕೀರ್ತಿ ಕೊನರಿತು. ಕುಮಾರಯೋಗಿ ಕಾರಣಿಕ ಪುರುಷನಾದ; ಕಾಲಸಂಹರನಾದ; ಜನಜೀವನಕ್ಕೆ ಆದರ್ಶನಾದ.

ಅರಳಿದ ಮಲ್ಲಿಗೆಹೂವು ತನ್ನ ನರುಗಂಪನ್ನು ಹರಡದೆ ಅದೆಂದಿಗು ಮುಚ್ಚಿಡದು. ಮುಚ್ಚಿಟ್ಟರು ಕಂಪು ಇರದು. ತಿರೆಯಲ್ಲಿ ಅದು ಹುಟ್ಟಿರುವುದು ಜನರನ್ನು ಆನಂದಿಸಲು. ಅದರಂತೆ ಕಾರಣಿಕನಾದ ಕುಮಾರನು ತನ್ನ ಆತ್ಮ

ಶಕ್ತಿಯನ್ನು ತನ್ನಲ್ಲಿಯೆ ಬಚ್ಚಿಟ್ಟುಕೊಳ್ಳದೆ ಕಾರ್ಯಕ್ಷೇತ್ರಕ್ಕೆ ತಂದು ಲೋಕಕ್ಕೆ ಹರಡಿದನು. ಜ್ಞಾನಮುಖಕ್ಕೆ ತಂದು ಬೋಧಿಸಿದನು.

ಕುಮಾರಯೋಗಿಗಳವರ ಜೀವನವು ಗುಣಧರ್ಮಗಳಿಗೆ ಸತ್ಕರ್ಮಗಳಿಗೆ ಶಾಂತಿ ಸಮಾಧಾನಗಳಿಗೆ ಆಗರವಾಗಿ ಗೌರೀಶಂಕರಶಿಖರದಂತೆ ಉತ್ತುಂಗವಾಗಿ ನಿಂತಿದೆ, ಅಚಲವಾಗಿ ನಿಂತಿದೆ; ಗಂಭೀರವಾಗಿ ನಿಂತಿದೆ. ಹಾಗಾಗದೆ ವಿಧಿಯಿಲ್ಲ. ವ್ಯಕ್ತಿ ವಿಕಾಸಕಾಲದಲ್ಲಿ – ಸಮಾಜ ಸುಧಾರಣೆಯ ಸಂದರ್ಭದಲ್ಲಿ ಸ್ವಾಭಾವಿಕವಾಗಿ ಸಂಪ್ರಾಪ್ತವಾಗುವ ವಿಘ್ನಪರಂಪರೆಗಳನ್ನು ವಿಷಮವಾದ ವಿವಾದಗಳನ್ನು ಶಾಂತಿ ಸಹನೆಗಳಿಂದ ಪರಿಶುದ್ಧ ಪ್ರತಿಪಾದನೆಗಳಿಂದ ಪರಿಹರಿಸಿಕೊಳ್ಳುವ ಪ್ರಭಾವ ಬೆಳೆದು ಬಂದಿರಬೇಕು. ಆಗ ಆ ವ್ಯಕ್ತಿ ಆದರ್ಶವಾಗಿ ಜನದೆದುರು ಜಗದಗಲವಾಗಿ ನಿಲ್ಲಲು ಸಮರ್ಥನಾಗುವನು. ಕಾರಣಿಕ ಕುಮಾರ ಯೋಗಿಗಳು ಹಾಗಾಗಿ ನಿಂತರು. ತಮ್ಮ ಕಾರಣಿಕ ಕಿರಣಗಳನ್ನು ಸಂಜೆಯ ಸೂರ್ಯನಂತೆ ಅನೇಕ ವ್ಯಕ್ತಿ ದೀಪಗಳಲ್ಲಿ ದೀಪ್ತಿಸಿ ದಿವಂಗತರಾದರು. ಮತ್ತೆ ಮೂಡಿ ಬಿಂಬವನ್ನೆ ತೋರಲಾರರೆ? ತೋರುವರು; ಆದರೆ ಎಷ್ಟು ದಿನಗಳಿಗೋ, ಯಾವ ಕಾಲಕ್ಕೊ ?



# ಅನುಬಂಧ

## ಕನ್ನಡ ವಿವೇಕಾನಂದ

ಕುಮಾರ ಯೋಗಿಗಳವರಿಗೆ ಆಪ್ತಶಿಷ್ಯರನೇಕರಿದ್ದರು; ಇದ್ದಾರೆ. ಆದರೆ ಸ್ವಾಮಿ ವಿವೇಕಾನಂದರಿಗೆ ಆಪ್ತ ಸಚಿವರಾಗಿದ್ದ ಗುಡ್‌ವಿನ್‌ರಂತೆ ಕುಮಾರಯೋಗಿಗಳ ಭಾಷಣಗಳನ್ನೆಲ್ಲ ಸಂಗ್ರಹಿಸುವವರು ಒಬ್ಬರು ಇಲ್ಲ ದಿದ್ದುದೊಂದು ಶೋಚನೀಯ. ಇದರಿಂದಾಗಿ ಅವರ ಭಾಷಣಗಳ ಸಂಗ್ರಹ ಸಿಗದಂತಾದುದು ಚರಿತ್ರೆಗೊಂದು ಕೊರತೆ. ಭಾವೀ ಜನಾಂಗದ ಶ್ರವಣ ಸೌಭಾಗ್ಯಕ್ಕೊಂದು ದೊಡ್ಡ ಅಭಾವ.

ಸ್ವಾಮಿಗಳವರು ಹಳ್ಳಿಹಳ್ಳಿಗು ಭಾಷಣಗಳ ಸುರಿಮಳೆಯನ್ನು ಸುರಿಸಿದರು. ಆ ಸಮಯದಲ್ಲಿ ಬೆಳೆಯೇನೊ ಸುಳಿದೆಗೆದು ಬೆಳೆಯಿತು; ಹುಲುಸಾಗಿ ಫಲಿಸಿತು. ಆದರೆ ಹೆಚ್ಚಾಗಿ ಹರಿದುಹೋದ ಜಲವೆಷ್ಟೋ ಬಲ್ಲವರಾರು? ಆಣೆಕಟ್ಟು ಹಾಕಿ ನಿಲ್ಲಿಸಿದ್ದರೆ ವರ್ಷಾಭಾವದ ಈ ಕಾಲದಲ್ಲಿ ಎಷ್ಟು ಲೇಸಿತ್ತು. ಕಾರಣಿಕ ಪುರುಷರ ಭಾಷಣಗಳನ್ನು ಸಂಗ್ರಹಿಸಿ ಇಡುವುದೆ ನಿಜವಾದ ಆಣೆಕಟ್ಟು. ಆಮೇಲೆ ಅದು ಬತ್ತುವುದಿಲ್ಲ. ಭಾವೀ ಜನಾಂಗದ ಹೃದಯ ಭೂಮಿಕೆಗಳನ್ನು ಅದರಿಂದ ನೆನೆಯಿಸಿ ಬೆಳೆ ತೆಗೆಯಲು ಹೆಚ್ಚಿನ ಸೌಕರ್ಯವಾಗುತ್ತಿತ್ತು; ಹೆಚ್ಚಿನ ಸಾರ್ಥಕ್ಯವಾಗುತ್ತಿತ್ತು. ಆ ಭಾಗ್ಯ ಇಲ್ಲದೆಹೋಯಿತು.

ಅದೆ ವಿವೇಕಾನಂದರ ಭಾಷಣ, ಲೇಖನ, ಪತ್ರಲೇಖನಗಳ ಸಂಗ್ರಹ ದಿಂದ ಅವರ ಅಮೃತಶ್ರಾವಿ ಉಪದೇಶ ಇಂದಿಗು ಚಾರಿತ್ರಕವಾಗಿ ಚಿತ್ರಿತ ವಾಗಿ ಅವರ ದಿವ್ಯತತ್ವ, ಅವರ ಭವ್ಯ ಭಾರತೋದ್ಧಾರ ಕಾರ್ಯ, ಅವರ ಭಾರತಸಂಸ್ಕೃತಿಯ ಪ್ರಸಾರಾಭಿಮಾನಗಳು ಸುಸ್ಪಷ್ಟವಾಗಿ ಕಂಡು ಕಾಣುವವರ ಹೃದಯವನ್ನು ಕೆರಳಿಸುತ್ತವೆ. ವಿವೇಕಾನಂದರಿಗಿಂತಲು ಹೆಚ್ಚಾಗಿ ೩೦ ವರುಷ ಬದುಕಿ ನಾಡಸೇವೆಯನ್ನು ತಮ್ಮ ನಡೆನುಡಿಗಳಿಂದ ಮಾಡಿ ತೀರ

ಹತ್ತಿರದವರಾಗಿದ್ದ ಕುಮಾರಯೋಗಿಗಳವರ ಭಾಷಣ ಸಂಗ್ರಹಮಾಡಿಡುವ ಸತ್ಸೇವೆಯನ್ನು ಯಾರೂ ಮಾಡದೆ ಇದ್ದುದಕ್ಕಿಂತಲು ಬೇರೆ ಕೃತಘ್ನತೆಯುಂಟೆ, ಅಕೃತ್ಯತೆಯುಂಟೆ ?

ಸ್ವಾಮಿಗಳವರ ಹಸ್ತಪೋಷಿತ ಪತ್ರಿಕೆಗಳಿದ್ದವು. ಅವು ಆ ಕಾರ್ಯವನ್ನು ಕೈಕೊಳ್ಳಲಿಲ್ಲ. ಎಂತಹ ದೌರ್ಭಾಗ್ಯವಿದು ? ಕಂಡಹಾಗೆ ಕೈಗೆ ಬಂಧುದು ಬಾಯಿಗೆ ಬರದಂತಾಯಿತು. ಭಾವೀ ಜನಾಂಗಕ್ಕೆ ಅವರ ಭವ್ಯೋಪದೇಶದ ಕಿಡಿಗಳನ್ನಾದರು ಕಾಣುವ ಭಾಗ್ಯವಿಲ್ಲದಾಯಿತು. ಅವರ ಉಚ್ಚವಿಚಾರಗಳು – ಆಳ ಅನುಭವಗಳು ಗಾಳಿಯ ಅಲೆಗಳಲ್ಲಿ ಬೆರೆದು ಹೋದವು. ಭಾಷಣ ಸಂಗ್ರಹವಿದ್ದಿದ್ದರೆ ಸ್ವಾಮಿಗಳವರ ಚರಿತ್ರೆ ವಿವೇಕಾನಂದರ ಚರಿತ್ರೆಗಿಂತಲು ಯಾವ ವಿಧದಲ್ಲಿ ಕಮ್ಮಿಯಾಗಿರುತ್ತಿರಲಿಲ್ಲ. ಹಾಗಾದಲ್ಲಿ ವಿವೇಕಾನಂದರಂತೆ ಕುಮಾರಯೋಗಿಗಳೇನು ಯೂರೋಪು ಅಮೇರಿಕಾಗಳಿಗೆ ಹೋಗಿ ತಮ್ಮ ತತ್ವಪ್ರಸಾರಮಾಡಿ ಬಂದಿರುವರೆ ಎಂದು ಕೇಳಬಹುದು. ಅಹುದು ಮಾಡಲಿಲ್ಲ. ಹಾಗೆ ಮಾಡಬಾರದೆಂಬ ಭಾವನೆ ಅವರಲ್ಲಿರಲಿಲ್ಲ. ಮಾಡಬೇಕಾದ ಶಕ್ತಿಸಂಪತ್ತು ಅವರಲ್ಲಿ ಇರಲಿಲ್ಲವೆಂದಲ್ಲ. ನೆರೆಯವರು ನರಳುತ್ತಿರುವುದನ್ನು ಕಣ್ಣಾರೆ ಕಂಡು ಕಡೆಗಣಿಸಿ ಮುಂದರಿದು ಹೋಗುವ ದಾಷ್ಟ್ರ್ಯ ಅವರಲ್ಲಿರಲಿಲ್ಲ. ಹಂತ ಹಂತಾಗಿ ಹೋಗಬೇಕೆಂಬುದು ಸ್ವಾಮಿಗಳವರ ತತ್ವ. ನೆರೆನಾಡಾದ ನಂತರ ಹೊರನಾಡು ಎಂಬುದು ಅವರ ಗ್ರಹಿಕೆ. ಅಲ್ಲದೆ ಹೊರನಾಡುಗಳಲ್ಲಿಯು ಪ್ರಚಾರ ನಡೆಯಬೇಕೆಂಬ ತ್ರೀವ್ರಾಸಕ್ತಿ ಅವರಲ್ಲಿತ್ತು. ಅನೇಕಸಲ ಅವರ ದೃಷ್ಟಿಗು – ದೀರ್ಘಾಲೋಚನೆಗು ಅದು ವಿಷಯವಾಗದೆ ಉಳಿದಿಲ್ಲ. ಆದರೆ ಕಾರ್ಯರೂಪಕ್ಕೆ ಬರಲಿಲ್ಲ. ಇದಕ್ಕೆ ಇನ್ನೊಂದು ಕಾರಣವುಂಟು, ಕೊರತೆಯುಂಟು. ಅದು ಭಾಷಾಕೊರತೆ. ಸ್ವಾಮಿಗಳವರಿಗೆ ಕನ್ನಡದ ಹೊರತು ಮತ್ತೊಂದು ಭಾಷೆ ಬರುತ್ತಿರಲಿಲ್ಲ. ಕನ್ನಡವನ್ನೆ ಹೆಚ್ಚಾಗಿ ಕಲಿಯಲು ಅವಕಾಶ – ಅನುಕೂಲಗಳಿಲ್ಲದಾಗ ಬೇರೆ ಭಾಷಾಭ್ಯಾಸಕ್ಕೆ ಅವರಿಗೆ ಅವಕಾಶವೆಲ್ಲಿ ? ಅನುಕೂಲವೆಲ್ಲಿ ? ಇದೊಂದು ಕೊರತೆಯನ್ನು ಸ್ವಾಮಿಗಳವರಲ್ಲಿ ನಾವು ಒಪ್ಪಿಕೊಳ್ಳಲೇಬೇಕು. ಇದರಿಂದಾಗಿ ಅವರ ಪರಪ್ರಾಂತ – ಪರದೇಶ ಸಂಚಾರ – ಪ್ರಚಾರ ನಡೆಯಲು ಅವಕಾಶ

ವಾಗಲಿಲ್ಲ. ಪರರ ಮುಖದಿಂದ ಈ ಕಾರ್ಯಮಾಡಲು ಪ್ರಯತ್ನಿಸಿದರು ಫಲಿಸಲಿಲ್ಲ. ಇಷ್ಟು ಮಾತ್ರದಿಂದ ಕುಮಾರಯೋಗಿಗಳ ಕ್ರಿಯಾಶಕ್ತಿ ಕಡಿಮೆಯದೆಂದು ಹೇಳುವಂತಿಲ್ಲ. ಜ್ಞಾನಜ್ಯೋತಿ ಚಿಕ್ಕದೆಂದು ಭಾವಿಸು ವಂತಿಲ್ಲ. ಕುಮಾರಯೋಗಿಗಳು ನೂರುಪಾಲಿಗು ಕನ್ನಡದ ವಿವೇಕಾನಂದ ರೆಂದು ಹೇಳಿಸಿಕೊಳ್ಳಲು ಅರ್ಹರಾಗಿದ್ದಾರೆ.

ಸ್ವಾಮಿ ವಿವೇಕಾನಂದ – ಕುಮಾರಯೋಗಿ ಇವರಿಬ್ಬರ ಚರಿತೆಯು ಒಂದೇ ಮೂಸೆಯಲ್ಲಿ ತಯಾರಾದ ಪಡಿಯಚ್ಚಿನಂತಿದೆ. ಎಲ್ಲದರಲ್ಲಿಯು ಸರಿಸಮಾನವಾದ ಹೋಲಿಕೆಗಳೆ! ವ್ಯಕ್ತಿರೂಪಗಳು ವಿಭಿನ್ನವಾದರು ಆತ್ಮ ಒಂದೇ; ಪಂಥ ಒಂದೇ. ಇಬ್ಬರು ಧರ್ಮಸಂಸ್ಕೃತಿಗಳ ಉದ್ಧಾರದ ಅವ ತಾರಿಗಳೆ! ದೀನ ದರಿದ್ರ ದುಃಖಿಗಳ ಪ್ರತಿನಿಧಿಗಳೆ! ಇಬ್ಬರು ಮಾನವೋನ್ನತಿ ಗಾಗಿ ತಮ್ಮ ಜೀವಿತವನ್ನು ಸಮರ್ಪಿಸಿದವರು. ದಯಾಮಯ ವಿಷಯದಲ್ಲಿ ಇಬ್ಬರು ಬೆಣ್ಣೆಯಂತಹ ಹೃದಯರು. ಗುರಿಸಾಧನೆಯಲ್ಲಿ ಸತ್ಯಶಿಕ್ಷಣದಲ್ಲಿ ಶೀಲಸಂಪಾದನೆಯಲ್ಲಿ ವಜ್ರಕ್ಕಿತಲು ಕಠೋರರು. ತಮ್ಮಗಳ ವಿಷಯದಲ್ಲಿ ಯಾರಾದರು ಅನ್ಯಾಯವಾಗಿ ಅಕ್ರಮವಾಗಿ ನಡೆದುಕೊಂಡಲ್ಲಿ ಅದನ್ನು ಶಾಂತವಾಗಿ ಸಹಿಸುತ್ತಿದ್ದರು. ಅದೇ ಸಂಘಕ್ಕೊ ಸಮಾಜಕ್ಕೊ ಸಂಸ್ಕೃತಿಗೊ ದ್ರೋಹಾದಿಗಳು ಜರಗಿದರೆ ಅವನ್ನು ಅದೆಂದಿಗು ಸಹಿಸದವರು. ಇಬ್ಬರುಗಳ ಜೀವಿತಕೃಷಿ ಅಜ್ಞಾನ ಅಧರ್ಮ ದಾಸ್ಯ ದೈನ್ಯಗಳ ನಿರ್ಮೂಲನಕ್ಕಾಗಿಯೆ ಇದ್ದಿತು. ಇಬ್ಬರು ಸರ್ವಸಂಗಪರಿತ್ಯಾಗಿಗಳು; ಪರಹಿತಾಕಾಂಕ್ಷಿಗಳು. ಒಬ್ಬರ ಆತ್ಮ ವಿವೇಕದಿಂದ ಆನಂದಿಸಿದ್ದರೆ ಇನ್ನೊಬ್ಬರದು ಅನುಭವದಿಂದ ಆನಂದಿಸಿದೆ. ಇಂದಿಗೆ ಇಬ್ಬರು ನಿತ್ಯಾನಂದರು; ಎಂದಿಗು ನಿತ್ಯಾ ನಂದರು.

ನಿದರ್ಶನಕ್ಕಾಗಿ ನಾಲ್ಕಾರು ಹೋಲಿಕೆಗಳನ್ನಿಲ್ಲಿ ನೋಡೋಣ!

೧. ವಿವೇಕಾನಂದರು ಉಪನಿಷತ್ತು ಗೀತೆ ಗ್ರಂಥಗಳನ್ನು ಹೆಚ್ಚಾಗಿ ಒಪ್ಪಿ ಅಪ್ಪಿಕೊಳ್ಳುತ್ತಿದ್ದಂತೆ ಕುಮಾರಯೋಗಿಗಳು ಕನ್ನಡದ ಉಪನಿಷತ್ತು ಗಳೆನಿಸಿರುವ ಶ್ರೀ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳನ್ನು ಮೊಗ್ಗೆಯ ಮಾಯಿದೇವರ ಶಿವಾನುಭವ ಸೂತ್ರ, ಶತಕತ್ರಯ ಮೊದಲಾದ ಇವರಿಬ್ಬರ ಗ್ರಂಥಗಳನ್ನೆ ಹೆಚ್ಚು ಮೆಚ್ಚಿದ್ದರು. ನಿತ್ಯ ಅವುಗಳದೆ ಪಾಠ ಪ್ರವಚನ

ನಡಸುತ್ತಿದ್ದರು; ಶಿವಾನುಭವ ಮಾಡುತ್ತಿದ್ದರು, ಭಾಷಣಗಳ ಮೂಲಕ ಬೀರುತ್ತಿದ್ದರು.

೨. ವಿವೇಕಾನಂದರು ರಾಮಕೃಷ್ಣ ಪರಮಹಂಸರಂತಹ ಭಕ್ತಿಭಾವದ ಗುರುಗಳನ್ನು ಪಡೆದಿದ್ದಂತೆ ಕುಮಾರಯೋಗಿಗಳವರು ಯೋಗಿ ಪುಂಗವರಾದ ಎಳೆಂದೂರು ಬಸವಲಿಂಗಸ್ವಾಮಿಗಳಂತಹ ಗುರುಗಳನ್ನು ಪಡೆದಿದ್ದರು. ರಾಮ ಕೃಷ್ಣ ಪರಮಹಂಸರಲ್ಲಿ ನರೇಂದ್ರನಂತಹ ನಾಸ್ತಿಕಶಿಷ್ಯನ ಹೃದಯ ಪರಿವರ್ತನ ಶಕ್ತಿಯಿದ್ದಂತೆ ಎಳೆಂದೂರು ಬಸವಲಿಂಗಸ್ವಾಮಿಗಳವರಲ್ಲಿಯು ಇತ್ತು. ಅದ ರಿಂದ ಹುಬ್ಬಳ್ಳಿಯಲ್ಲಿ ಲಿಂಗಧಾರಣ ಮಾಡಬಾರದೆಂಬ ನಾಸ್ತಿಕವಾದದಲ್ಲಿ ದಿಕ್ಕುತೋಚದೆ ನಿಂತ ಸದಾಶಿವಸ್ವಾಮಿಯ ಮನಸ್ಸಿನ ಪರಿವರ್ತನೆಗೆ ಮೂಲ ಕಾರಣರಾದರು.

೩. ವಿವೇಕಾನಂದರು ಗುರುಗಳು ದೈವಾಧೀನರಾದನಂತರ ಹಿಮಾ ಲಯದಲ್ಲಿ ತಪಸ್ಸನ್ನಾಚರಿಸಿದಂತೆ ಕುಮಾರಯೋಗಿಗಳು ತಮ್ಮ ಗುರುಗಳು ಲಿಂಗೈಕ್ಯರಾಗಲು ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸುಮಾಡಿದರು.

೪. ವಿವೇಕಾನಂದರು ಗುರುಗಳ ಅಪ್ಪಣೆಯಂತೆ ಗಂಗಾತೀರದಲ್ಲಿ ರಾಮಕೃಷ್ಣಾಶ್ರಮ ನಿರ್ಮಿಸಿದಂತೆ ಕುಮಾರಯೋಗಿಗಳವರು ತಮ್ಮ ಗುರುಗಳ ಅನುಜ್ಞೆಯಂತೆ ಮಲಾಪಹಾರಿಣೀ ತೀರದಲ್ಲಿ ಶಿವಯೋಗಮಂದಿರ ಸ್ಥಾಪಿಸಿ ಗುರುಗಳ ತತ್ವ-ಯೋಗಗಳ ಪ್ರಚಾರಮಾಡಿದರು. ವಿವೇಕಾನಂದರು ಬೈರಾಗಿ ಮಂಡಳದ ಸೇವೆ ಸಲ್ಲಿಸಿದಂತೆ ಕುಮಾರಯೋಗಿಗಳು 'ವಿರಾಗಿ' ಮಂಡಲ ಸೇವೆ ಸಲ್ಲಿಸಿದರು. ವಿವೇಕಾನಂದರಿಗೆ ಗುರುಗಳ ಅಸ್ಥಿಸಂಗ್ರಹದಲ್ಲಿ- ಭಾವ ಚಿತ್ರದಲ್ಲಿ ಎಷ್ಟು ಆಸಕ್ತಿ ಭಕ್ತಿಗಳಿದ್ದವೊ ಕುಮಾರಯೋಗಿಗಳವರಿಗೆ ಗುರುಗಳ ಗದ್ದಿಗೆ ಸಮಾಧಿಗಳ ಮೇಲೆ ಆಸಕ್ತಿಯಿತ್ತು.

೫. ವಿವೇಕಾನಂದರು ಬುದ್ಧ ನಾನಕ್ ಚೈತನ್ಯ ಕಬೀರ ಮುಂತಾದವ ರನ್ನು ಅವತಾರ ಪುರುಷರೆಂದು ಭಾವಿಸುತ್ತಿದ್ದಂತೆ ಕುಮಾರಯೋಗಿಗಳವರು ರೇಣುಕ ಬಸವ ಬುದ್ಧ ತೋಂಟದ ಸಿದ್ಧಲಿಂಗೇಶ್ವರ ಮುಂತಾದ ಪುರಾತನ ಪುಣ್ಯಪುರುಷರನ್ನಷ್ಟೆ ಅಲ್ಲದೆ ಸಮಕಾಲೀನರಾದ ಜಡೆಯಸಿದ್ಧರು ಅಥಣಿ ಶಿವಯೋಗಿಗಳು ಮುಂತಾದ ಹಿರಿಯರನ್ನು ಮನ್ನಿಸುತ್ತಿದ್ದರು.

೬. "ಪರೋಪಕಾರವೆ ಧರ್ಮ. ಉಳಿದ ಯಜ್ಞಯಾಗಾದಿಗಳೆಲ್ಲ ಹುಚ್ಚುತನ. ಸ್ವಮುಕ್ತಿಯನ್ನು ಬಯಸುವುದು ಸಹ ಹುಚ್ಚುತನ. ಯಾವನಾದರೇನು ತನ್ನ ಸರ್ವಸ್ವವನ್ನು ಪರರಿಗೆ ಎರೆದು ಕೊಡುವನೊ ಆತನೆ ಮುಕ್ತನು." ಎಂಬ ವಿವೇಕಾನಂದರ ಉಕ್ತಿಯ ಉದ್ದೇಶವೆ ಕುಮಾರಯೋಗಿಗಳವರ ಮೂರ್ತಿರೂಪಾಗಿ ಬಂದಂತಿತ್ತು.



# ಮಾಘಮಾಸ

ಮಾಘಮಾಸ ಅಘನಾಶ – ಎಂದು ಹಿರಿಯರ ಹೇಳಿಕೆ. ಅಂತೆಯೆ ಮಾಘಸ್ನಾನ ಪವಿತ್ರವಾಗಿದೆ; ಪ್ರಖ್ಯಾತವಾಗಿದೆ. ಮಾಘಮಾಸದ ರಥ ಸಪ್ತಮಿಯು ಮಹಾನವಮಿಯಂತಹ ಹಬ್ಬ. ಮಹಾಶಿವರಾತ್ರಿಯ ಮಹಿಮೆ ಅದರ ಮತ್ತೊಂದು ಹಿರಿಮೆ. ಒಟ್ಟಿನಲ್ಲಿ ಮಾಘಮಾಸ ಮಂಗಳಕರವಾದುದು ; ಮಹಿಮಾಶಾಲಿಯಾದುದು. ಚರಿತ್ರೆಯ ನಾಯಕರು, ಶಿವಯೋಗಮಂದಿರ ಸಂಸ್ಥೆಯು ಇದಕ್ಕೆ ನಿದರ್ಶನವಾಗಿದಾರೆ, ಆಗಿದೆ.

ಶಿವಯೋಗಮಂದಿರವು ಮಾಘಮಾಸದ ಗರ್ಭದಿಂದ ಉದಯಿಸಿದೆ. ಕುಮಾರಯೋಗಿಗಳವರು ಮಾಘಮಾಸದ ಗರ್ಭದಲ್ಲಿ ಅಸ್ತಮಾನವಾಗಿದಾರೆ. ಸಂಸ್ಥೆ ಉದಯಿಸಿದ್ದು ಶುದ್ಧ ಸಪ್ತಮಿ. ಸ್ವಾಮಿ ಅಸ್ತಮಾನವಾದ್ದು ಬಹುಳ ಸಪ್ತಮಿ. ಮಾಘಮಾಸದ ಈ ಎರಡು ಸಪ್ತಮಿಗಳಲ್ಲಿಯು ಒಂದು ಪ್ರಸುಪ್ತ ರಹಸ್ಯವಿದೆ; ಪರ್ಯಾಪ್ತ ಸ್ವಾರಸ್ಯವಿದೆ. ಸಂಸ್ಥೆಯ ರಥೋತ್ಸವವು ಮಾಘ ಮಾಸದಲ್ಲಿಯೆ ಪ್ರಾರಂಭವಾಗುತ್ತದೆ. ಇದರಿಂದಾಗಿ ಮಾಘಮಾಸಕ್ಕೆ ಮತ್ತಿಷ್ಟು ಮಹಿಮೆ ಮೂಡಿಬಂದಿದೆ; ಕೂಡಿನಿಂದಿದೆ. ಈ ಚರಿತ್ರೆಗು ಈ ಮಾಸಕ್ಕು ಹತ್ತಿರದ ಸಂಬಂಧವಿದೆ. ಇದು ನಮ್ಮೆಲ್ಲರ ಮನಸ್ಸಿನಿಂದ ಎಂದೆಂದು ಮಾಸಿಹೋಗದ ಮಾಸ; ಮರೆಯದ ಮಾಸ.



# ಮೀಸಲು ವಚನಗಳು

೧

ನಮ್ಮ ಕುಮಾರೇಶ್ವರನ ಇರುವು ಅರಿವಿರೇನಯ್ಯ ?
ಅರಿಯದಿದ್ದರೆ ಕೇಳಿರಯ್ಯ :
ಜೋಯಿಸರ ಹರಳಹ್ಳಿಯಲ್ಲಿ ಜನಿಸಿದನು.
ಗತಿಯಿಲ್ಲದೆ ಮತಿವಂತನಾದನು.
ರತಿಯಿಲ್ಲದೆ ವಿರಾಟ್ಪುರ ಮಠಾಧೀಶನಾದನು.
ಸ್ಥಿತಿಯಿಲ್ಲದೆ ವೀರಶೈವ ಮಹಾಸಭೆಯ ಸ್ಥಾಪಿಸಿದನು.
ಹಿತರಿಲ್ಲದೆ ಶಿವಯೋಗಮಂದಿರವ ನಿರ್ಮಿಸಿದನು.
ಮೊತ್ತಮೊದಲು ಹುಳಹತ್ತಿ ಹಾಳಿಡುವ ತಾಳೆಗರಿಗಳನು
ಸುತ್ತಿಸಂಗ್ರಹಿಸಿದನು.
ಆತನಿರುವು ಸಮಾಜಕ್ಕೊಂದು ಪಾವನ.
ಆತನ ಸುಳುವು ಕನ್ನಡಕ್ಕೊಂದು ಜೀವನ.
ಇಂದಿನ ಕರುನಾಡಿಗೆ ದ್ವಿತೀಯ ಬಸವನಂತಿದ್ದನಯ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾನ ಕುಮಾರೇಶ್ವರ.

೨

ಅಂದಣವನೇರಿ ಮೆರೆದ ತನುವಲ್ಲ.
ಕುಂದಣವ ಗಳಿಸಿ ಗಡಣಿಸಿದ ಕೈಯಲ್ಲ.

ಕೀರ್ತಿಗಾಗಿ ಕಾಯಕವ ಕೈಕೊಳ್ಳವನಲ್ಲ.
ವಿರತಿಗಾಗಿ ವಿಷಯ ತೊರೆದವನಲ್ಲ.
ಕಾಮಕ್ಕೆ ತಾಣೆಲ್ಲ. ಕೋಪಕ್ಕೆ ಇಂಬಿಲ್ಲ.
ಲೋಭಕ್ಕೆ ತೆರಹು ತಾನಿಲ್ಲ. ಮೋಹದ ಮಾತೇಕೆ ?
ಮದದ ಮೊಳಕೆ ತೋರದು. ಮತ್ಸರಕ್ಕೆಡೆಯಿಲ್ಲ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರ
ನಿನ್ನ ಗುಣಂಗಳ ಗಣಿಸಲಾರಳವು ಹೇಳಾ !

೩

ಸಮಾಜಕ್ಕಾಗಿ ಸವೆಸಿದನು ತನ್ನ ತನುವ.
ಸಂಸ್ಕೃತಿಗಾಗಿ ಸೂರೆಗೈದನು ತನ್ನ ಧನವ.
ಶಿವಯೋಗಕ್ಕಾಗಿ ಮೀಸಲಿಕ್ಕಿದನು ತನ್ನ ಮನವ.
ತನು - ಮನ - ಧನ ವಂಚಕನಲ್ಲವಯ್ಯ ಶ್ರೀ ನಿಡುಮಾಮಿಡಿ
ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರನು.

೪

ವೀರ ವಿರತನ ಇರುವ ಕೇಳಿರಣ್ಣ !
ಹೊನ್ನಿನಾಸೆಯ ಹೊದ್ದ. ಹೆಣ್ಣಿನಾಸೆಯ ಮೆಚ್ಚ.
ಮಣ್ಣಿನಾಸೆಯ ಮುಟ್ಟ. ಮನದ ಮಾಯಾ
ಪಾಶವ ಬಿಚ್ಚಿಬಿಸುಕಿದ.
ಸಮಾಜವನುದ್ಧರಿಸಿ ತನ್ನ ತಾ ಮರೆದಿಪ್ಪುದ ಕೇಳಿರಣ್ಣ !
ಶಿವಯೋಗದೊಳು ಮನವನಿರಿಸಿ ಶಿವಯೋಗಿಗಳನುದ್ಧರಿಸಿ

ತನ್ನ ಮನವ ಉನ್ಮನವ ಮಾಡಿಪ್ಪುದ ಕೇಳಿರಣ್ಣ !
ಭವದೊಳಿದ್ದು ಅಭವನಾಗಿಪ್ಪ ಇರುವು ಶ್ರೀ ನಿಡುಮಾಮಿಡಿ
ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ
ಕುಮಾರೇಶ್ವರಂಗಾಯಿತ್ತು.

೫

ದೇವ, ನೀನು ಭಕ್ತಿಯ ಬಳ್ಳಿಯು ನೋಡಾ !
ಜ್ಞಾನದ ಬೆಳಗು ನೋಡಾ.
ವಿರತಿಯ ವಾರಿಧಿಯು ನೋಡ.
ನಿನ್ನ ಪೊಗಳಲೆನ್ನಳವೆ ?
ಆಹಾ, ಎನ್ನ ಪುಣ್ಯವೆ ! ಆಹಾ ಎನ್ನಭಾಗ್ಯವೆ !
ಆಹಾ, ಎನ್ನ ಮನವ ಮನೆಯ ಮಾಡಿಕೊಂಡಿಪ್ಪ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರ
ನಿಮ್ಮ ಪಾದಕ್ಕೆ ಕುಂಬಿಟ್ಟು ಕುಕಿಲ್ವಿಡುವೆನಯ್ಯ.

೬

ಭಕ್ತಿಯಲ್ಲಿ ಬಸವ ನೀನಯ್ಯ.
ಜ್ಞಾನದಲ್ಲಿ ಚನ್ನಬಸವ ನೀನಯ್ಯ.
ವಿರತಿಯಲ್ಲಿ ಅಲ್ಲಮಪ್ರಭು ನೀನಯ್ಯ.
ಶಿವಯೋಗದಲ್ಲಿ ಸಿದ್ಧರಾಮಯ್ಯ ನೀನಯ್ಯ.
ಐಕ್ಯದಲ್ಲಿ ಅಜಗಣ್ಣ ನೀನಯ್ಯ.
ಉಳಿದ ಕಾಯಕಂಗಳಲ್ಲಿ ಎಲ್ಲ ಶಿವಶರಣರಂಶ ನೀನಯ್ಯ.

ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರ.

೭

ನೀಳವಾದ ದೇಹ; ಆಜಾನು ಬಾಹು.
ಎವೆಯಿಕ್ಕದ ಕಣ್ಣು, ಬಾಗದ ಬೆನ್ನು.
ವಿಶಾಲವಾದ ಹಣೆ, ಪ್ರಶಾಂತವಾದ ಮೊಗವುಳ್ಳ
ಶಾಂತಸ್ವರೂಪನ ಕಂಡೆ ನಾನು.
ಕಂಡೆನ್ನ ಕಣ್ಮನದ ಕಾಳಿಕೆಯು ಹಿಂಗಿ ಹೋಯಿತು.
ಹಸ್ತಸ್ಪರ್ಶದಿಂದೆನ್ನ ತನುಗುಣ ಕೆಟ್ಟುಹೋಯಿತು.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರ
ನೀನು ಅವಿರಳೈಕ್ಯನಾಗಲು ಬೇಂಟೆಯ ಮೃಗದಂತಾದೆನಯ್ಯ.

೮

ಬಸವಣ್ಣನ ತತ್ವಗಳ ಬೆಳಗಲೆಂದು
ತಿರೆಗೈತಂದನಯ್ಯ ಕುಮಾರನು.
ಒಣಗಿದ ಬೆಳೆಗೆ ಮಳೆ ಬಂದಂತಾಯಿತು.
ಬಂಜರ ಭೂಮಿಗಳಲ್ಲಿ ಬೀಜವ ಬಿತ್ತಿ ಬೆಳೆದನಯ್ಯ ಕುಮಾರನು.
ಭವಪಾಶವ ಬಿಡಿಸಿ,
ಭಕ್ತಿಸ್ವಾತಂತ್ರ್ಯವ ಹಿಡಿಸಿದನಯ್ಯ ಅಸಂಖ್ಯಾತರಿಗೆ.
ಭಕ್ತರ ಬಂಧುವಾಗಿ ದೀನರ ದಯಾಮೂರ್ತಿಯಾಗಿ
ಗುರುಗಳಿಗೆ ಪರಮಗುರುವಾಗಿ ಚರಿಸಿದನಯ್ಯ

ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರ.

೯

ಜಂಗಮ ಮೂರ್ತಿಯಾಗಿ ಜಗಕ್ಕೆ
ಇಳಿತಂದನಯ್ಯ ಗುರುಕುಮಾರ.
ಸತ್ಕ್ರಿಯಂಗಳಲ್ಲಿ ದಕ್ಷನಾಗಿ ತತ್ಫಲಂಗಳಲ್ಲಿ
ನಿರಪೇಕ್ಷನಾಗಿದ್ದನಯ್ಯ ಗುರುಕುಮಾರ.
ಅಂಗಜನ ಭಂಗಿಸಿ ಲಿಂಗಾಂಗ ಸಂಗನಾಗಿದ್ದನಯ್ಯ ಗುರುಕುಮಾರ.
ಶಿವಯೋಗಿಯಾಗಿ ಸಮಾಜವನುದ್ಧರಿಸಿದನಯ್ಯ ಗುರುಕುಮಾರ.
ಭವರೋಗ ನೀಗಿ ಭಾವಭರಿತನಾಗಿ ಭಾಷೆಯ ಬದುಕಿಸಿದನಯ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರ.

೧೦

ಕರುನಾಡಿಗೊಬ್ಬ ಕುಮಾರ ನೋಡಯ್ಯ.
ಆತನ ನಡೆ ಹಿರಿಕಿರಿಯರಿಗೆ ಪಾವನ.
ಆತನ ನುಡಿ ಸರ್ವರಿಗು ಅಮೃತದ ಧಾರೆ.
ಆತನು ನೆರಪಿದ ಹೃದಯಗೀತೆ ಸಕಲ ಸಂಜೀವಿನಿ ನೋಡಯ್ಯ.
'ವೃತ್ತಿಯ ಜಾಲ ಚಿಂತೆಯ ಮೂಲ' ಎಂದು
ಹಾಡಿದನಯ್ಯ ಕುಮಾರ.
'ಚಿತ್ತದ ರಾಗ ಭ್ರಾಂತಿಯ ಪೂಗ' ಎಂದು
ಪೇಳಿದನಯ್ಯ ಕುಮಾರ.

'ನಿನ್ನಯ ಸಂಗ ಬನ್ನದ ಭಂಗ' ಎಂದು
ಬಿತ್ತರಿಸಿದನಯ್ಯ ಕುಮಾರ.
ತನ್ನ ಪರಿಶುದ್ಧ ನಡೆ - ನುಡಿಗಳಿಂದ ಸಿರಿಗನ್ನಡ
ಗುಡಿಯನೆ ಕಟ್ಟಿದನಯ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾ
ಧೀಶವಾಸ ಕುಮಾರೇಶ್ವರನು.

೧೧

ಅಂಗ ಪ್ರಾಣಗಳಿಲ್ಲದಂತಾಯಿತ್ತಯ್ಯ ಲಿಂಗವಂತ ಸಮಾಜ.
ಶಿವಯೋಗ ಸೌಭಾಗ್ಯ ವಿಲ್ಲವಂತಾಗಿತ್ತಯ್ಯ
ಶಕ್ತಿವಿಶಿಷ್ಟಾದ್ವೈತ ಸಮಾಜ.
ವಿದ್ಯಾವಿತರಣೆಗಳಿಲ್ಲದಂತಾಗಿತ್ತಯ್ಯ ವೀರಶೈವ ಸಮಾಜ.
ದೇವ, ನೀವೀ ಭುವನಕ್ಕೆ ಬಂದವತರಿಸಿ
ಶಿವಯೋಗಮಂದಿರವ ಸಂಸ್ಥಾಪಿಸಿ
ಅಷ್ಟಾವರಣವೆಂಬಂಗವನು ಪಂಚಾಚಾರ ಪ್ರಾಣಗಳನು
ತಂದು ತುಂಬಿ ಸಮಾಜ ನಜೀವಗೊಳಿಸಿದೆಯಯ್ಯ.
ಶಿವಯೋಗ ಸಂಪತ್ತನ್ನು ಗಳಿಸಿಕೊಟ್ಟು
ಲಿಂಗವಂತರ ಭಾಗ್ಯವಂತರಾಗಿಸಿದ ಸೌಭಾಗ್ಯ ನಿನ್ನದಯ್ಯ.
ವಿದ್ಯೆ - ವಿತರಣೆಗಳ ಮಹತ್ವನರಿದು ಸಾಮಾಜಿಕರು,
ವಿದ್ಯಾಪ್ರೇಮಿಗಳು ವಿತರಣಭಾಗಿಗಳು ಆಗುವಂತೆ ಮಾಡಿದ ಕೀರ್ತಿ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶವಾಸ ಕುಮಾರೇಶ್ವರ ನಿನ್ನದಲ್ಲದೆ ಇನ್ನಾರದು ಹೇಳಯ್ಯ.*

---

* 'ವಚನಾಂಜಲಿ'ಯಲ್ಲಿ ಪ್ರಕಟವಾದವುಗಳನ್ನು ಎತ್ತಿ ಇಲ್ಲಿ ಕೊಡಲಾಗಿದೆ.'

# ಗ್ರಂಥಕರ್ತರ ಇತರ ಕೃತಿವಿಮರ್ಶೆಗಳು

**ವಚನಾಂಜಲಿ :—**

ಶ್ರೀ ಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರರಾದ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಅಪಾರವಾಗಿದೆ. ಶ್ರೀಗಳವರ ಜ್ಞಾನ ಭಕ್ತಿ – ವಿಮರ್ಶಕಶಕ್ತಿ, ಅಭ್ಯಾಸ ಇವುಗಳ ಫಲವಾಗಿ ವಿವಿಧ ಮುಖ ಸಾಹಿತ್ಯ ಹೊರಹೊಮ್ಮುತ್ತಿದೆ. ಒಂದೆಡೆಗೆ ಸೀಳ್ನುಡಿಯನ್ನು ತೆಗೆದುಕೊಂಡರೆ ಇನ್ನೊಂದೆಡೆಗೆ ವಚನಾಂಜಲಿಯನ್ನು ಉದ್ಧರಿಸಬಹುದು. ಸೀಳ್ನುಡಿಯಲ್ಲಿ ವಚನ ವಾಙ್ಮಯದ ಸುಪ್ರಸಿದ್ಧ ಉಪಮೆ, ರೂಪಕಗಳನ್ನು ಉಪಯೋಗಿಸಿ ಜನತೆಗೆ ತಿಳಿಯುವಂತೆ ಅವುಗಳ ಅರ್ಥ ವಿವರಣೆ ಮಾಡಲಾಗಿದೆ. ಚಿನ್ನದ ನಾಯಿ, ಮಾಯಾಮಂಜರ, ಕಬ್ಬಿನದ ಕೋಡುಗ, ಹಾಲತೊರೆ ಇಂತಹ ರೂಪಕಗಳು ವಚನವಾಙ್ಮಯದ ಮುತ್ತಿನ ಮಣಿಗಳು. ಶ್ರೀಗಳವರ ವಿಶಿಷ್ಟ ಪ್ರತಿಭೆ ಇಂತಹ ಮುತ್ತುಗಳನ್ನಾಯ್ದು ವಿಶಿಷ್ಟ ರೀತಿಯಲ್ಲಿ ಅವುಗಳ ಅರ್ಥವಿವರಣೆ ಮಾಡಿದೆ. ಈ ದೃಷ್ಟಿಯಿಂದ ಇದೊಂದು ವಿಶಿಷ್ಟ ಸಾಹಿತ್ಯ ಪ್ರಚಾರವೆಂದೇ ಕರೆಯಬೇಕಾಗುತ್ತದೆ. ವಚನಾಂಜಲಿಯಲ್ಲಿ ಶ್ರೀಗಳವರು ತಮ್ಮ ಅನುಭವ – ಅನುಭಾವಗಳನ್ನು ಮುತ್ತಿನ ಹಾರದಂತೆ ಹೆಣೆದಿರುವರು. ವಚನವಾಙ್ಮಯದ ಪರಂಪರೆ ವೀರಶೈವರಲ್ಲಿ ಇನ್ನೂ ಉಳಿದಿದೆಯೆಂದು ನಾವು ಈ ಗ್ರಂಥದೆಡೆಗೆ ಬೆರಳುಮಾಡಿ ತೋರಿಸಬಹುದು. ಅಲ್ಲಿಯ ವಚನಗಳಿಗೆ ಮೂಲ ವಚನವಾಙ್ಮಯದ ಮೆರುಗು ಇರದಿದ್ದರೂ ತಮ್ಮದೇ ಆದ ವೈಶಿಷ್ಟ್ಯ ಅವುಗಳಿಗಿದೆ. ಶ್ರೀಗಳವರಿಂದ ಇನ್ನು ಮುಂದೆ ಮಾಣಿಕ್ಯದ ದೀಪ್ತಿಯಂತಹ ವಚನಗಳು ಬರಬಹುದೆಂಬ ಕುರುಹು ಇಲ್ಲಿ ತೋರುತ್ತಿದೆ.

ಶ್ರೀಗಳವರ ಮುಪ್ಪಿನಾರ್ಯರ 'ಭಾವಪಾತ್ರಗಳು' ಮತ್ತು 'ಹೆಮ್ಮಗಳು' ಇವೆರಡು ಹೊತ್ತಿಗೆಗಳನ್ನು ಇನ್ನೊಂದು ನಿಷ್ಟಿನಲ್ಲಿ ಸೇರಿಸಬಹುದು.

ಮುಪ್ಪಿನಾರ್ಯರ ಗೀತೆಗಳಿಂದ ಅವರ ಮನೋವಿಶ್ಲೇಷಣೆ ಪಾತ್ರಪರಿಚಯ, ವ್ಯಕ್ತಿ ವೈಶಿಷ್ಟ್ಯ ಇವುಗಳನ್ನು ಮಾರ್ಮಿಕ ರೀತಿಯಲ್ಲಿ ಎತ್ತಿ ತೋರಿಸಿರುವರು.

ಇಂತು ಶ್ರೀಗಳವರು ಒಂದೆಡೆಗೆ ಸಾಹಿತ್ಯ ನಿರ್ಮಾಪಕರೆನಿಸಿದರೆ ಇನ್ನೊಂದೆಡೆಗೆ ಸಾಹಿತ್ಯ ವಿಮರ್ಶಕರಾಗಿರುವರು. ಅವರ ರೀತಿ ಗತಾನು ಗತಿಕವಾದುದಲ್ಲ. ಶೈಲಿ ಚರ್ವಿತ ಚರ್ವಣವಾದುದಲ್ಲ. ಅಲ್ಲಿ ಬೆಡಗಿದೆ; ಶಕ್ತಿಯಿದೆ; ಸ್ಫೂರ್ತಿಯಿದೆ; ಕಲೆಯ ಕುಸುರಿದೆ. ಕನ್ನಡಿಗರು ಇಂತಹ ಸಾಹಿತ್ಯವನ್ನು ಹೃತ್ಪೂರ್ವಕವಾಗಿ ಸ್ವೀಕಸುವರೆಂದು ಬಲವಾಗಿ ಆಶಿಸಿರುವೆನು.

ಬಸವೇಶ್ವರ ಕಾಲೇಜ
ಬಾಗಲಕೋಟೆ
೨೪-೭-೧೯೫೦

**ಆರ್. ಸಿ. ಹಿರೇಮಠ.**

**ಅಣ್ಣನ ಬದುಕು :—**

"...............ಈ ಪುಸ್ತಕದಲ್ಲಿ ಕೊಟ್ಟಿರುವ ವಚನಗಳು ಮುಲಕೀ ಪರೀಕ್ಷೆಯ ಪಠ್ಯಪುಸ್ತಕಗಳಂತೆ ಶಬ್ದಭೇದ, ಭಾವಾರ್ಥ, ಶಬ್ದಾರ್ಥ, ತಾತ್ಪರ್ಯಗಳನ್ನು ಕೊಟ್ಟು ಬೇಸರ ಬರುವಂತೆ ಮಾಡಿಲ್ಲ. ಸೊಗಸಾಗಿ ತಿಳಿಯಲೆಂದು (ಬಸವಣ್ಣನವರ ಜೀವನವನ್ನು) ಬಾಲ್ಯದ ಬದುಕು, ಜವ್ವನದ ಬದುಕು, ಚರಮ ಜೀವನದ ಬದುಕು ಮುಂತಾಗಿ ವಿಭಾಗಿಸಿ........ಮನೋ ರಂಜಕವಾಗುವಂತೆ ವಚನಗಳನ್ನು ಹಣೆದಿರುವರು.

ಶ್ರೀ ಮಹಾಸ್ವಾಮಿಗಳವರು ಈ ಗ್ರಂಥ ಬರೆದದ್ದು ಯೋಗ್ಯ. ಅಂತಹ ವರಿಗೇ ಈತರದ ಸಾಹಿತ್ಯ ಸಾಧಿಸುವುದು. ಇವರ ಭಾಷೆ ಸರಳ ಮತ್ತು ಓದಲು ಸುಲಭ. ಕೇವಲ ಲಿಂಗವಂತರೇ ಓದಬೇಕೆಂದು ಈ ಗ್ರಂಥ ಬರೆದದ್ದಲ್ಲ. ಎಲ್ಲ ಜಾತಿಯವರೂ ಓದಬಹುದು. ಈ ಗ್ರಂಥ ಕೇವಲ ವಚಸಾಹಿತ್ಯವಲ್ಲ, ಕನ್ನಡ ಸಾಹಿತ್ಯಕ್ಕೆ ಅಲಂಕಾರವಿರುವುದು."

ತಾ|| ೨೦-೧೧-೧೯೫೦ **ವಿಶಾಲಕರ್ನಾಟಕ.**

"...............ಭಗವಾನ್ ಬಸವೇಶ್ವರರ, ಬಗ್ಗೆ ಈಗಾಗಲೇ ಅನೇಕ ಪುಸ್ತಕಗಳು ಪ್ರಕಟವಾಗಿವೆ. ಬಸವಣ್ಣನವರ ರಾಜಕೀಯ ಜ್ಞಾನ, ಭಕ್ತಿಮಾರ್ಗ, ಸಮತೆ, ಅಹಿಂಸೆ ಹೀಗೆ ನಾನಾದೃಕ್ಕೋಣಗಳನ್ನಿಟ್ಟುಕೊಂಡು ಈ ಪುಸ್ತಕವನ್ನು ಬರೆಯಲಾಗಿದೆ. ಶ್ರೀಗಳವರು ಜನಸಾಮಾನ್ಯರಿಗೆ

ಸುಲಭವಾಗಿ ಅರ್ಥವಾಗುವಂತೆ ಅಣ್ಣನವರ ವಚನಗಳನ್ನು ಅವರ ಜೀವಿತೇತಿಹಾಸದಲ್ಲಿನ ಘಟನೆಗಳ ಅನುಗುಣವಾಗಿ ಹೆಣೆದಿದ್ದಾರೆ. ಮತ್ತು ವಚನಗಳ ಸಾಂಕೇತಿಕ ಅರ್ಥಕ್ಕೆ ವ್ಯಾಖ್ಯಾನಗಳನ್ನು ವಿವರಣೆಗಳನ್ನು ವಿಶದವಾಗಿ ಕೊಟ್ಟಿದ್ದಾರೆ. .. ..... ಮುಖ್ಯವಾಗಿ ಬಸವೇಶ್ವರರ ವಚನಗಳಲ್ಲಿನ ತಿರುಳು, ಗೂಢಾರ್ಥ, ಸಂದೇಶ ಮುಂತಾದ ಮಹತ್ವ ವಿಷಯಗಳ ಕಡೆ ನಮ್ಮ ಗಮನಕೊಡಬೇಕು. ಗ್ರಂಥದ ಭಾಷೆ ಬಹು ರಮ್ಯವಾಗಿದೆ. ಬಳಸಿರುವ ಉಪಮಾನ ಉಪಮೇಯಗಳು ಮನೋಜ್ಞವಾಗಿವೆ.

ತಾ|| ೧೯-೧೧-೧೯೫೦ **ಪ್ರಜಾಮತ.**

**ವಚನಾಂಜಲಿ :—**

"............ಶ್ರೀ ಶಿವಯೋಗ ಮಂದಿರ ಮಹಾ ಸಂಸ್ಥೆಯ ಸಂಸ್ಥಾಪಕರಾದ ಪರಮಪೂಜ್ಯ ಶ್ರೀ ಸಿ. ಪ್ರ. ಕುಮಾರಸ್ವಾಮಿಗಳವರಿಗೆ ವಚನಕಾರರಾದ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳವರು ಅರ್ಪಿಸಿದ ಕೃತಿಯಿದು. ಈ ಅಂಜಲಿಯಲ್ಲಿ ಬಹಿರಂಗ, ಅಂತರಂಗವೆಂಬ ಎರಡು ವಿಭಾಗಗಳಿವೆ...........ಧರ್ಮಾರ್ಥ ಮುಂತಾದ ವಿಷಯಗಳೊಂದಿಗೆ ಕಾಫಿ – ಟೀ, ಸಿನೇಮಾ, ಕಂಟ್ರೋಲ್, ಧೂಮಪಾನ ಮುಂತಾದ ವಿಷಯಗಳು ಇರುವುದರಿಂದ ಈ ಹೊತ್ತಿಗೆ ಜನಸಾಮಾನ್ಯರ ಕೈದೀವಿಗೆಯಾಗಿ, ಕೈಪಿಡಿಯಂತಾಗಿದೆ.

ಇಂಥ ಅಮೂಲ್ಯ ಸಾಹಿತ್ಯ ಕೃತಿಯನ್ನು ಸೃಷ್ಟಿಸಿ ಶ್ರೀ ಸಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ಸ್ವಾಮಿಗಳವರು ಉಳಿದೆಲ್ಲ ಸ್ವಾಮಿಗಳವರಿಗೆ ಈ ಹಾದಿಯಲ್ಲಿ ಮಾದರಿಯಾಗಿದ್ದಾರೆ. ಈಕೃತಿ ಜಗದ್ಗುರು ಸಿಡುಮಾಮಿಡಿ ಪ್ರಬೋಧ ಪುಸ್ತಕಮಾಲೆಯಲ್ಲಿ ಆರನೇ ಕುಸುಮವಾಗಿ, ದಪ್ಪ ಕಾಗದದ ಮೇಲೆ ಎರಡು ಬಣ್ಣಗಳಿಂದ ಸುಂದರವಾಗಿ ಅಚ್ಚಾಗಿದೆ.

ಜುಲೈ ೧೯೫೦ **ಪುಸ್ತಕ ಪ್ರಪಂಚ**
ಮೈಸೂರು



Printed at the 'Sree Sathyanarayana Press,' Bangalore 2.

## ಶ್ರೀ ಜಗದ್ಗುರು ನಿಡುಮಾಮಿಡಿ ಪ್ರಬೋಧ ಪುಸ್ತಕ ಮಾಲೆಯಲ್ಲಿ ದೊರೆಯುವ ಗ್ರಂಥಗಳು

೧. ಇಷ್ಟಲಿಂಗ – ವಿಜ್ಞಾನ
೨. ಸೀಳ್ನಡಿ
೩. ಹೆಮ್ಮಗಳು
೪. ಮುಪ್ಪಿನಾರ್ಯರ ಭಾವಪಾತ್ರಗಳು
೫. ಪಕ್ಷ್ಮಲಾಕ್ಷಿ
೬. ಅರ್ಜುನ ವಿಜಯ
೭. ವಚನಾಂಜಲಿ
೮. ಸಂಸ್ಕೃತ ಸ್ತವನಮಂಜರಿ (ಬಸವಪ್ಪಶಾಸ್ತ್ರಿ ಕೃತ)
೯. ಶಿವದೇವ ವಿಜಯ
೧೦. ಕೈವಲ್ಯೋಪನಿಷತ್ ಭಾಷ್ಯ (ಕನ್ನಡ ಭಾವಪ್ರಕಾಶ ಸಹಿತ)
೧೧. ಹೇಮರೆಡ್ಡಿ ಮಲ್ಲಮ್ಮ – ರಾಜಯೋಗಿ ವೇಮಣ್ಣ
೧೨. ಶಿವನ ಸೋಲು
೧೩. ಜೀವಜ್ಯೋತಿ
೧೪. ಅಭಿನವ ಕಾಳಿದಾಸ—ಬಸವಪ್ಪಶಾಸ್ತ್ರಿ ಕೃತ
೧೫. ರೇಣುಕ ವಿಜಯ ,,
೧೬. ವೀರಶೈವ ಪ್ರಯೋಗ ರತ್ನಂ (ಸಸ್ವರ, ಸಟಿಪ್ಪಣ, ಸಚಿತ್ರ)
೧೭. ಕನ್ನಡ ಲಿಂಗಧಾರಣ ಚಂದ್ರಿಕೆ
೧೮. ಗುರುವಿನ ಗೆಲುವು ; ೧೯. ಅಮೃತವಾಣಿ
೨೦. ಇಮ್ಮಡಿ ಕರಿಬಸವೇಂದ್ರರ ಒಸಗೆ
೨೧. ಆಯ್ದಕ್ಕಿ ಮಾರಯ್ಯ
೨೨. ಅಕ್ಕನ ಲಾವಣಿ ; ೨೩. ಅಕ್ಕನ ಬಾಳು
೨೪. ಸಮ್ಯಜ್ಞಾನಿ ಚನ್ನಬಸವಣ್ಣ
೨೫. ಮಹದೇವಿಯಮ್ಮನ ವಚನಗಳು
೨೬. ಅಕ್ಕಮಹಾದೇವಿಯ ಯೋಗಾಂಗ ತ್ರಿವಿಧಿ

---